ಗೌಡ ಸಾರಸ್ವತ ಸಮಾಜದ

# ಕೀರ್ತಿ ಶಿಖರಗಳು



ಶಾಲಿನಿ ಪ್ರಭು



ಪ್ರಕಾಶಕರು :
ಪ್ರಿಯದರ್ಶಿನಿ ಫಿಲಮೆಂಟ್ಸ್ ಪ್ರೈ. ಲಿಮಿಟೆಡ್.
16, 4ನೇ ಮುಖ್ಯ ರಸ್ತೆ, ಕೈಗಾರಿಕಾನಗರ, ರಾಜಾಜಿನಗರ,
ಬೆಂಗಳೂರು–560 044

GOWDA SARASWATA SAMAJADA KEERTI SHIKHARAGALU,
the great personalities of a great religion, Written by
Smt. Shalini Prabhu,
Published by Priyadarshini Filaments Pvt. Ltd.

No. of pages 222+xvi Price Rs. 80/-

First Impression : 1993.



ಬೆಲೆ : ಎಂಬತ್ತು ರೂಪಾಯಿಗಳು

ವರ್ಣ ಶಿಲ್ಪಿ : ಪ್ರಶಾಂತ್ ಎನ್.

ಮುದ್ರಕರು :
ಸ್ನೇಹ ಪ್ರಿಂಟರ್ಸ್
22, 2ನೇ ಮೈನ್, ಅತ್ತಿಗುಪ್ಪೆ,
ವಿಜಯನಗರ 2ನೇ ಹಂತ,
ಬೆಂಗಳೂರು-560 040.

099 80960668, 9880824127



ಪರಮಪೂಜ್ಯ
ಶ್ರೀ ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರು

ಶ್ರೀ ಡಿ. ವೀರೇಂದ್ರ ಹೆಗ್ಗಡೆಯವರು
ಶ್ರೀ ಧರ್ಮಸ್ಥಳ-574 216
(ದಕ್ಷಿಣ ಕನ್ನಡ)



ಫೋನು { ಪರ್ಸನಲ್: 22
ಆಫೀಸು : 21

ಕ್ರಮ ಸಂಖ್ಯೆ: ..................... ತಾರೀಕು: 24-9-93.

ಶ್ರೀಮತಿ ಶಾಲಿನಿ ವಿ. ಪ್ರಭು,
ನಂ.994, ಪ್ರಭು ಧಾಮ,
ಸರ್ವೀಸ್ ರೋಡ್,
ಆರ್.ಪಿ.ಸಿ. ಲೇಔಟ್,
ಬೆಂಗಳೂರು-560 040.

"ಗಾಢ ಸಾರಸ್ವತ ಸಮಾಜದ ಕೀರ್ತಿ ಶಿಖರಗಳು" ಎಂಬ ಕೃತಿಯನ್ನು ನೀವು ಬರೆದು ಪ್ರಕಟಿಸಲಿರುವ ವಿಚಾರ ತಿಳಿದು ಸಂತೋಷವಾಯಿತು. ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಉತ್ತಮ ಸೇವೆ, ಸಾಧನೆಗೈದ ಸಮಾಜಬಾಂಧವರ ಜೀವನ ಸಾಧನೆಯನ್ನು ನಿಮ್ಮ ಈ ಕೃತಿಯಲ್ಲಿ ಸವಿವರವಾಗಿ ಉಲ್ಲೇಖಿಸಿರುವುದರಿಂದ ಓದುಗರಿಗೆ ಇದು ಉತ್ತಮ ಮಾರ್ಗದರ್ಶಕ ಹಾಗೂ ಪ್ರೇರಕವಾಗುವುದರಲ್ಲಿ ಸಂದೇಹವಿಲ್ಲ. ಈ ಹಿರಿಯ ಸಮಾಜಸೇವಕರ ಸೇವಾಮನೋಭಾವ ಇತರರಿಗೂ ದಾರಿದೀಪವಾಗಲಿ ಎಂದು ಆಶಿಸುತ್ತೇನೆ.

ಪುಸ್ತಕ ಪ್ರಕಾಶನವು ಸರ್ವರೀತಿಯಿಂದಲೂ ಯಶಸ್ವಿಯಾಗುವಂತೆ ಶ್ರೀ ಮಂಜುನಾಥ ಸ್ವಾಮಿ ಹರಸಲೆಂದು ಪ್ರಾರ್ಥಿಸುತ್ತೇನೆ.

ಇತಿ,

ಡಿ. ವೀರೇಂದ್ರ ಹೆಗ್ಗಡೆ.

(ಡಿ.ವೀರೇಂದ್ರ ಹೆಗ್ಗಡೆಯವರು).

# ಅರ್ಪಣೆ



ಪ್ರಾತಃಸ್ಮರಣೀಯರಾದ ಪರಮಪೂಜ್ಯ ಶ್ರೀ ರಾಮದಾಸ ಮಂಜುನಾಥ ಪ್ರಭು
ಇವರ ಪುಣ್ಯಸ್ಮರಣೆಗಾಗಿ




# ಮುನ್ನುಡಿ

'ಗೌಡ ಸಾರಸ್ವತ ಸಮಾಜ ಕೀರ್ತಿ ಶಿಖರಗಳು' ಶ್ರೀಮತಿ ಶಾಲಿನಿ ಪ್ರಭುರವರ ಚೊಚ್ಚಲ ಕೃತಿ. ಅವರ ಅನೇಕ ಕಥೆ ಹಾಗೂ ಲೇಖನಗಳು ಸುಧಾ, ಮಯೂರ, ತರಂಗ ಮುಂತಾದ ವಾರ ಪತ್ರಿಕೆಗಳಲ್ಲಿ ಈಗಾಗಲೇ ಪ್ರಕಟಗೊಂಡಿವೆ. ದೂರದರ್ಶನ ದಲ್ಲಿ ಕೆಲವು ವರ್ಷಗಳ ಹಿಂದೆ ಕನ್ನಡ ಎನೌನ್ಸರ್ ಆಗಿದ್ದ ಅವರ ಕಂಠ ಮಾಧುರ್ಯದ ಪರಿಚಯ ಕನ್ನಡದ ಜನತೆಗೆ ಈಗಾಗಲೇ ಆಗಿದೆ.

ಈ ಪುಸ್ತಕದ ಪ್ರಸ್ತಾವನೆಯನ್ನು ಓದಿದರೆ ಕನ್ನಡ ಭಾಷೆಯ ಮೇಲಿರುವ ಅವರ ಪ್ರಭುತ್ವ ಯಾರಿಗಾದರೂ ಸ್ಪಷ್ಟವಾಗುತ್ತದೆ. ಸಮಾಜ ಎಂಬ ಶಬ್ದದ ವಿಶ್ಲೇಷಣೆಯನ್ನು ಅರ್ಥಗರ್ಭಿತವಾಗಿ ನಮ್ಮ ಮುಂದೆ ಅವರು ಇಟ್ಟಿದ್ದಾರೆ. ಗೌಡ ಸಾರಸ್ವತ ಸಮಾಜದಲ್ಲಿ ಹುಟ್ಟಿ ಬೆಳೆದ ಅವರು ಈ ಸಮಾಜದ ಉಗಮ ಮತ್ತು ಬೆಳವಣಿಗೆಗಳ ಬಗ್ಗೆ ಆಳವಾದ ಅಭ್ಯಾಸ ಮಾಡಿದ್ದಾರೆ. ಸಮಾಜದ ಕೆಲವರು ಪ್ರಮುಖ ವ್ಯಕ್ತಿಗಳ ಜೀವನ ಚರಿತ್ರೆಯೇ ಅವರ ಸಂಶೋಧನೆಯ ಮೂಲ ವಸ್ತು. ಧರ್ಮ ಮತ್ತು ಸಮಾಜ ಒಂದೇ ನಾಣ್ಯದ ಎರಡು ಮುಖಗಳು ಎಂಬುದು ಅವರ ಅಭಿಪ್ರಾಯ. ಧರ್ಮವನ್ನು ಯಾರು ರಕ್ಷಿಸುತ್ತಾರೋ ಅವರನ್ನು ಧರ್ಮವು ರಕ್ಷಿಸುತ್ತದೆ.

ಹಿಂದೆ ಗೌಡ ಸಾರಸ್ವತ ಸಮಾಜದ ಜನರ ವಾಸ್ತವ್ಯ ಬಹುತೇಕವಾಗಿ ಭಾರತದ ಪಶ್ಚಿಮ ಕರಾವಳಿಗೆ ಸೀಮಿತವಾಗಿದ್ದರೂ ಈಗ ವ್ಯಾಪಾರ, ಉದ್ಯೋಗ ಮತ್ತು ಮತ್ತು ಸರ್ಕಾರಿ ಸೇವೆಯಿಂದಾಗಿ ಭಾರತದ ಮೂಲೆ ಮೂಲೆಗಳಲ್ಲಿ ಹರಡಿ ಹಂಚಿ ಹೋಗಿದೆ. ಆದರೆ ಎಲ್ಲ ವಿಷಯಗಳ ಬಗ್ಗೆ ಪರಿಪೂರ್ಣ ಅಧ್ಯಯನ ಮಾಡಿ ಬರೆಯ ಹೊರಟರೆ ಒಂದು ಬೃಹತ್ ಗ್ರಂಥವನ್ನು ನಿರ್ಮಿಸಬೇಕಾಗಿ ಬರುವುದು. ಇದನ್ನು ಅರಿತ ಶಾಲಿನಿಯವರು ತಮ್ಮ ಅಧ್ಯಯನವನ್ನು ಕರ್ನಾಟಕಕ್ಕೆ ಮಾತ್ರ ಸೀಮಿತಗೊಳಿಸಿ ಕೊಂಡಿದ್ದಾರೆ. ಅವರ ಮಾತಿನಲ್ಲೇ ಹೇಳುವುದಾದರೆ, ರಾಜಕಾರಣದಲ್ಲಿ, ಕೈಗಾರಿಕೋದ್ಯಮದಲ್ಲಿ, ಪತ್ರಿಕಾ ಪ್ರಪಂಚದಲ್ಲಿ, ಬ್ಯಾಂಕಿಂಗ್ ಉದ್ದಿಮೆಯಲ್ಲಿ ಇಂತಹ ಹಲವು ಲೌಕಿಕ ಕ್ಷೇತ್ರಗಳಲ್ಲಿ, ಶಿಲ್ಪ ಸಾಹಿತ್ಯ ಮೊದಲಾದ ಕಲಾ ಕ್ಷೇತ್ರಗಳಲ್ಲಿ ಗೌಡ ಸಾರಸ್ವತರ ದುಡಿಮೆಯ ಅಂದಾಜು ಕೊಡುವುದು, ಕನ್ನಡ ಸಾಹಿತ್ಯಕ್ಕೆ ಕನ್ನಡ ಸಂಸ್ಕೃತಿಗೆ ಕೊಡುಗೆ ಏನು ಎಂಬುವದರ ಬಗ್ಗೆ ಸ್ಪಷ್ಟ ಚಿತ್ರನನ್ನೀಯುವುದು ಈ

ಅಧ್ಯಯನದ ಮೂಲ ಉದ್ದೇಶ. ಈ ಪುಸ್ತಕವನ್ನು ಆದ್ಯಂತವಾಗಿ ಓದಿದಾಗ ಇವರ ಉದ್ದೇಶ ಸಾರ್ಥಕವಾಗಿದೆ ಎಂದು ನಾನು ಖಚಿತವಾಗಿ ಹೇಳಬಲ್ಲೆ. ಸಾರಸ್ವತ ಮತ್ತು ಗೌಡಸಾರಸ್ವತ ಈ ಶಬ್ದಗಳ ಅರ್ಥ, ಈ ಸಮಾಜ, ಅದರ ಧಾರ್ಮಿಕ ವ್ಯವಸ್ಥೆ ಸಂಪ್ರದಾಯಗಳು, ಹಬ್ಬ ಹರಿದಿನಗಳು, ಊಟೋಪಚಾರಗಳು ಇವುಗಳ ಬಗ್ಗೆ ಸ್ವಾರಸ್ಯವಾಗಿ ಬಣ್ಣಿಸಿದ್ದಾರೆ ಶಾಲಿನಿಯವರು.

ಈ ಸಮಾಜದ ಒಂದು ವಿಶಿಷ್ಟ ಸಂಪತ್ತು ಎಂದರೆ ಮಠಗಳು ಮತ್ತು ಮಠಾಧಿಪತಿಗಳು. ಕಾಶೀಮಠದ ಗುರು ಪರಂಪರೆಯನ್ನು ಅವರು ಸವಿಸ್ತಾರವಾಗಿ ಕೊಟ್ಟಿದ್ದಾರೆ. ಈ ಮಠದ ಪ್ರಸ್ತುತ ಪೀಠಾಧಿಕಾರಿಗಳಾದ ಶ್ರೀಮತ್ ಸುಧೀಂದ್ರ ತೀರ್ಥರ ಬಾಲ್ಯ, ಶಿಕ್ಷಣ, ದೀಕ್ಷಾ ಬೋಧನೆ ಹಾಗೂ ಕಳೆದ ಸುಮಾರು 50 ವರ್ಷಗಳ ಅವರ ಸನ್ಯಾಸ ಜೀವನದ ಮಹತ್ವವನ್ನು ಮತ್ತು ಉಪದೇಶ ವಾಣಿಯನ್ನು ಅರ್ಥಗರ್ಭಿತವಾಗಿ ನಮ್ಮ ಮುಂದೆ ಇಟ್ಟಿದ್ದಾರೆ ಶ್ರೀಮತಿ ಪ್ರಭುಗಳು.

ಬಹುತೇಕ ಗೌಡ ಸಾರಸ್ವತರು ಕೊಂಕಣಿ ಭಾಷೆ ಮಾತನಾಡುತ್ತಾರೆ. ಭಾಷೆಯ ಬಗ್ಗೆ ಅವರು ಬರೆದ ಲೇಖನವನ್ನು ಓದಿದರೆ ಕನ್ನಡದಂತೆ ಕೊಂಕಣಿ ಭಾಷೆಯಲ್ಲೂ ಕೂಡ ಅವರಿಗೆ ಪ್ರಭುತ್ವವಿದೆಯೆಂಬುದು ನಿಸ್ಸಂದೇಹ. ಈ ಸಮಾಜದ ಏಳು ಕೀರ್ತಿ ಶಿಖರಗಳ ಕಿರುಪರಿಚಯವನ್ನು ಅವರು ನಮ್ಮ ಮುಂದೆ ಇಟ್ಟಿದ್ದಾರೆ. ಭದ್ರಗಿರಿ ಅಚ್ಯುತದಾಸರು ಹರಿಕಥಾಗ್ರೇಸರರು ಕನ್ನಡ, ತುಳು ಮತ್ತು ಕೊಂಕಣಿ ಈ ಮೂರೂ ಭಾಷೆಗಳಲ್ಲಿ ನಿರರ್ಗಳವಾಗಿ ನಿರೂಪಣೆ ಮಾಡುವ ಅಪೂರ್ವ ಶಕ್ತಿ ಅವರಿಗೆ ಇದೆ.

ಪದ್ಮಶ್ರೀ ತೋನ್ಸೆ ಮಾಧವ ಅನಂತ ಪೈಯವರು ಮಣಿಪಾಲ ಸಾಮ್ರಾಜ್ಯದ ಅನಭಿಷಿಕ್ತ ದೊರೆಗಳಾಗಿದ್ದವರು. ಕಲ್ಲು ಬಂಡೆಗಳಿಂದ ಕೂಡಿದ ಮಣಿಪಾಲ ಎಂಬ ಕುಗ್ರಾಮವನ್ನು ಶಿಕ್ಷಣ ಕಾಶಿಯಾಗಿ ಮಾರ್ಪಡಿಸಿದ ವಾಸ್ತುಬ್ರಹ್ಮ ಟಿ.ಎಂ.ಎ. ಪೈಯವರು.ಅದೇ ರೀತಿ ಅವರ ಸಹೋದರರ ಮಗನಾದ ತೋನ್ಸೆ ಅನಂತ ಪೈಯವರು ಬ್ಯಾಂಕಿಂಗ್. ರಾಜಕೀಯ ಮತ್ತು ಇನ್ಶೂರೆನ್ಸ್ ಮೊದಲಾದ ಕ್ಷೇತ್ರಗಳಲ್ಲಿ ಕೀರ್ತಿ ಶಿಖರವನ್ನು ಏರಿದವರು. ಸಣ್ಣ ವಯಸ್ಸಿನಲ್ಲಿ ಸಿಂಡಿಕೇಟ್ ಬ್ಯಾಂಕಿನ ಅಧ್ಯಕ್ಷರಾಗಿ, ತದನಂತರ ಭಾರತೀಯ ಜೀವ ವಿಮಾ ನಿಗಮದ ಅಧ್ಯಕ್ಷರಾಗಿ (ಲೈಫ್ ಇನ್ಶೂರೆನ್ಸ್ ಕಾರ್ಪೊರೇಷನ್ ಆಫ್ ಇಂಡಿಯಾ) ಕೊನೆಗೆ ಭಾರತ ಸರಕಾರದ ಉದ್ದಿಮೆ ಮಂತ್ರಿಗಳಾಗಿ ಪ್ರಗತಿಯತ್ತ ಸಾಗಿದವರು ಅನಂತ ಪೈಯವರು.

ಕಾರ್ಕಳ ಗೊಮ್ಮಟನ ಛತ್ರ ಛಾಯೆಯಲ್ಲಿ ಶಿಲ್ಪ ವಿನ್ಯಾಸವನ್ನು ಜೀವನ ಪರ್ಯಂತ ಅಭ್ಯಾಸ ಮತ್ತು ಸಾಧನೆ ಮಾಡಿ ಜಗತ್ಪ್ರಖ್ಯಾತರಾದವರು ರಂಜಾಳ ಗೋಪಾಲ ಶೆಣೈರವರು. ಅವರು ಸೃಷ್ಟಿ ಮಾಡಿದ ಬೃಹದ್ ಆಕಾರದ ಶಿಲ್ಪ

ಪ್ರತಿಮೆಗಳು ಇಂದು ಭಾರತದಲ್ಲಿ ಮಾತ್ರವಲ್ಲ ಜಪಾನಿನಲ್ಲಿ ಕೂಡಾ ವಿಜೃಂಭಿಸುತ್ತಾ ಇವೆ. ಅವರಿಗೆ ರಾಷ್ಟ್ರಪತಿಗಳ ಪುರಸ್ಕಾರ ಸಿಕ್ಕಿದೆ. ಮಂಜೇಶ್ವರ ಗೋವಿಂದ ಪೈರವರ ಹೆಸರು ತಿಳಿಯದವರು ಬಹಳ ವಿರಳ. ಕನ್ನಡ ಭಾಷೆಯಲ್ಲಿ ಸರಳವಾಗಿ, ಸುಲಲಿತವಾಗಿ, ಸುಂದರವಾಗಿ ಲೇಖನ ಕಥೆ ಕಾದಂಬರಿಗಳನ್ನು ಬರೆದು ಸುಪ್ರಸಿದ್ಧ ರಾದವರು ಮಂಜೇಶ್ವರ ಗೋವಿಂದ ಪೈರವರು. ಭಾರತದಲ್ಲಿ ಆಂಗ್ಲಭಾಷೆ ತಿಳಿ ದವರಿಗೆಲ್ಲರಿಗೂ ಎಂ. ವಿ. ಕಾಮತ್‌ರವರ ಪರಿಚಯು ಚೆನ್ನಾಗಿ ಇದೆ.

ಶಿವಮೊಗ್ಗೆಯ ಮನೋರೋಗ ತಜ್ಞ ಡಾ॥ ಅಶೋಕ ಪೈರವರದು ಬಹುಮುಖ ಪ್ರತಿಭೆ. ಸಮಾಜ ಸೇವಕರಾಗಿ, ಮನೋರೋಗ ಚಿಕಿತ್ಸಕರಾಗಿ ಇವರು "ಕಾಯಕವೇ ಕೈಲಾಸ" ಎಂಬ ಬಸವಣ್ಣರವರ ಉಕ್ತಿಯಲ್ಲಿ ನಂಬಿಕೆ ಇಟ್ಟವರು.

ಈ ಕೀರ್ತಿ ಶಿಖರಗಳನ್ನೊಳಗೊಂಡ ಈ ಕೃತಿಯನ್ನು ಸೃಷ್ಟಿ ಮಾಡಿದ ಡಾ॥ ಶಾಲಿನಿ ಪ್ರಭು ಅವರಿಗೆ ಪ್ರೋತ್ಸಾಹ ದೊರತದ್ದು ಅವರ ಪತಿ ಶ್ರೀ ವಿವೇಕ ಪ್ರಭುಗಳವರಿಂದ.

ಪ್ರಭು ದಂಪತಿಗಳಿಗೆ ಮೂವರು ಮಕ್ಕಳು. ಪತಿಯ ಮತ್ತು ಮಕ್ಕಳ ಆರೈಕೆಯಲ್ಲಿ ಮಗ್ನರಾಗಿರುವ ಇವರು ಬಿಡುವು ಮಾಡಿಕೊಂಡು ಈ ಸುಂದರ ಕೃತಿ ಯನ್ನು ನಮ್ಮ ಮುಂದೆ ಇಟ್ಟಿದ್ದಾರೆ. ಅವರಲ್ಲಿನ ಸುಪ್ತ ಶಕ್ತಿ ಇದೀಗ ಜಾಗೃತವಾಗಿದೆ. ಅವರಿಂದ ಇನ್ನು ಮುಂದೆಯೂ ಇಂತಹ ಅನೇಕ ಕೃತಿಗಳು ಸೃಷ್ಟಿಯಾಗಲಿ ಎಂದು ಆಶಿಸೋಣ.

ಪಂಚಮಾಲ್ ದೀನನಾಥ ಶೆಣೈ ಐ. ಎ. ಎಸ್.
ಕಮೀಷನರ್
ಬೆಂಗಳೂರು ನಗರ ಕಾರ್ಪೊರೇಶನ್

# ಪ್ರಕಾಶಕರ ಮಾತು

ಶ್ರೀಮತಿ ಶಾಲಿನಿ ಪ್ರಭು ಅವರು 1987ರಲ್ಲಿ ಡಿ.ಲಿಟ್.ಗಾಗಿ ಬರೆದ ಈ ಪ್ರಬಂಧ, ಹಲವು ಸಹೃದಯರ ಸಹಕಾರ ಹಾಗೂ ಒತ್ತಾಸೆಯಿಂದ ಪುಸ್ತ ರೂಪದಲ್ಲಿ ಪ್ರಕಟವಾಗುತ್ತಲಿದೆ.

ಗೌಡ ಸಾರಸ್ವತರು ಸರಸ್ವತೀ ನದಿ ತೀರದಿಂದ ವಲಸೆ ಬಂದು ಭಾರತದ ಉದ್ದಗಲಕ್ಕೂ ನೆಲೆಸಿಕೊಂಡಿರುವ ಒಂದು ವೈಶಿಷ್ಟ್ಯಪೂರ್ಣ ಜನಾಂಗ. ಉತ್ತರ ಹಾಗೂ ದಕ್ಷಿಣ ಭಾರತದ ಸಂಸ್ಕೃತಿಯನ್ನು ಮೇಳವಿಸಿ, ತಮ್ಮ ಮೂಲರೂಪವನ್ನೂ ಉಳಿಸಿ,ಯಾವ ರಾಜ್ಯದವರಲ್ಲದವರೂ, ಎಲ್ಲ ರಾಜ್ಯಗಳಿಗೆ ಸೇರಿದವರೂ ಆಗಿ,ಅಲ್ಲಿಯ ಜನವೊಂದಿಗೆ ಹಾಲು ಜೇನಿನಂತೆ ಬೆರೆತು, ಮಧುರ ಬಾಂಧವ್ಯವನ್ನು ಬೆಳೆಸಿ, ಅಲ್ಲಿಯ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದ ಕುಲೀನ ಪರಂಪರೆಗೆ ಸೇರಿದವರು.

ತೀಕ್ಷ್ಣ ಬುದ್ಧಿಮತ್ತೆ, ಕಾರ್ಯಸಾಧಿಸುವ ಛಲ, ವ್ಯವಹಾರ ಪ್ರಜ್ಞೆ ಇವು ಈ ಇಡೀ ಜನಾಂಗದ ಪ್ರವೃತ್ತಿ. ತಾವು ಆರಿಸಿದ ಕ್ಷೇತ್ರಗಳಲ್ಲಿ ಸಾಧನೆಯ ಕೃಷಿ ಮಾಡಿ ಆಯಾ ರಾಜ್ಯಗಳ ಕೀರ್ತಿ ಪತಾಕೆಯನ್ನು ಎತ್ತಿ ಹಿಡಿದಿದ್ದಾರೆ.

ಅಲ್ಪಸಂಖ್ಯಾತರಾಗಿರುವ ಈ ಜನಾಂಗದ ಸಮಗ್ರ ಚಿತ್ರಣ ಹಾಗೂ ವಿವಿಧ ಕ್ಷೇತ್ರಗಳಲ್ಲಿ ಸಾಧನೆಯ ಶಿಖರವನ್ನೇರಿ ಖ್ಯಾತರಾಗಿರುವವರ ವ್ಯಕ್ತಿತ್ವದ ಮೇಲೆ ಬೆಳಕು ಚೆಲ್ಲುವ ಪ್ರಯತ್ನವನ್ನು ಲೇಖಕಿಯವರು ಇಲ್ಲಿ ಮಾಡಿದ್ದಾರೆ. ಸಾರಸ್ವತ ಲೋಕಕ್ಕೆ ಇದೊಂದು ವಿಶಿಷ್ಟವಾದ ಕೊಡುಗೆ.

ಕಾಶೀಮಠಾಧೀಶರಾದ ಶ್ರೀ ಶ್ರೀ ಸುಧೀಂದ್ರ ತೀರ್ಥ ಸ್ವಾಮಿಗಳವರು ಬೆಂಗಳೂರಿನಲ್ಲಿ ನಡೆದ 50ನೇ ಚಾತುರ್ಮಾಸದ ಸಂದರ್ಭದಲ್ಲಿ ಅವರ ದಿವ್ಯ ಹಸ್ತದಿಂದ ಈ ಪುಸ್ತಕವು ಬಿಡುಗಡೆಯಾಗುತ್ತಿರುವುದು. ಪ್ರಿಯದರ್ಶಿನಿ ಫಿಲಮೆಂಟ್ಸ್ ಪ್ರೈವೇಟ್ ಲಿಮಿಟೆಡ್ ಸಂಸ್ಥಾಪಕರಾದ ದಿ॥ ರಾಮದಾಸ ಪ್ರಭು ಅವರ ಸಮಗ್ರ ಕುಟುಂಬಕ್ಕೆ ಮಹದಾಶೀರ್ವಾದವೆಂದು ನಮ್ಮ ನಂಬಿಕೆ.

ಕನ್ನಡದ ನೆಲದೊಂದಿಗೆ ಒಂದಾಗಿ ಬೆರೆತಿರುವ ಈ ಸರಸ್ವತೀ ಪುತ್ರರನ್ನು ಪರಿಚಯಿಸುವ ಈ ಪುಸ್ತಕವನ್ನು ಕರ್ನಾಟಕದ ಜನತೆ ತುಂಬು ಹೃದಯದಿಂದ ಸ್ವಾಗತಿಸುವುದೆಂದು ಭರವಸೆಗೊಂಡಿದ್ದೇವೆ.

ವತ್ಸಲಾ ಆರ್. ಪ್ರಭು
ಚೇರ್ ಪರ್ಸನ್
ಪ್ರಿಯದರ್ಶಿನಿ ಫಿಲಮೆಂಟ್ಸ್ ಪ್ರೈ. ಲಿ.

# ಪ್ರಾರಂಭಕ್ಕೆ ಮುನ್ನ

‘ಗೌಡ ಸಾರಸ್ವತ ಸಮಾಜದ ಕೀರ್ತಿ ಶಿಖರಗಳು’ ಬರೆದದ್ದು 1987 ರಲ್ಲಿ. ಡಿ. ಲಿಟ್.ಗಾಗಿ ಮಂಡಿಸಿದ ಮಹಾಪ್ರಬಂಧವಿದು. ಅನಂತರ ಬರೆದುದನ್ನು ಮೂಲೆಗಿಟ್ಟು ಮರೆತೆ. ಹಲವು ಬಾರಿ ಗುರುಗಳು – ಡಾ|| ಸಾ. ಶಿ. ಮರುಳಯ್ಯ ಅವರಿಂದ ‘ಪುಸ್ತಕವನ್ನಾಗಿ ಪ್ರಕಟಿಸೋಣ’ ಎಂಬ ಸಲಹೆಯನ್ನು ಅದೇಕೋ ನಯವಾಗಿಯೇ ತಿರಸ್ಕರಿಸುತ್ತಾ ಬಂದಿದ್ದೆ. ಕತೆ, ಲೇಖನ, ಕಾದಂಬರಿಗಳನ್ನು ಪುಸ್ತಕಮಾಡು ಅಂದಿದ್ದರೆ ಮಾಡುತ್ತಿದ್ದೆನೋ ಏನೋ ? ಈ ಮಹಾಪ್ರಬಂಧ ಮಾಡಲು ಮಾತ್ರ ಧೈರ್ಯ ಬರಲೇ ಇಲ್ಲ. ಎಷ್ಟೇ ಅಧ್ಯಯನ ಮಾಡಿದರೂ ಸಮಾಜದ ವ್ಯಾಪ್ತಿ ದೊಡ್ಡದು. ಅದನ್ನು ಬರಹದ ಕಕ್ಷೆಯಲ್ಲಿ ತರುವುದು ಕಷ್ಟ ಸಾಧ್ಯ ಎನ್ನುವ ಅಳುಕು ನನ್ನಲ್ಲಿತ್ತು. ಅದೇ ರೀತಿ ಧಾರ್ಮಿಕ ವಿಚಾರಗಳ ಬಗ್ಗೆ ಬರೆಯುವಾಗ ಎಚ್ಚರವಹಿಸಿದಷ್ಟೂ ಕಡಿಮೆ. ಇತಿಹಾಸಕ್ಕೆ ಸಂಬಂಧಪಟ್ಟ ವಿಚಾರಗಳು ಬಹಳಷ್ಟು ಇರುವುದರಿಂದ ತಕ್ಕ ಮಟ್ಟಿಗೆ ಕಾಳಜಿ ವಹಿಸಿಕೊಳ್ಳಲೇ ಬೇಕಾಗುತ್ತದೆ.

ಇದೇ ಸಮಯದಲ್ಲಿ ಶ್ರೀ ಪಿ. ಡಿ. ಶೆಣೈ ಅವರು ಬೆಂಗಳೂರು ಮಹಾನಗರ ಪಾಲಿಕೆಯ ಕಮೀಷನರ್ ಆಗಿ ನಿಯುಕ್ತರಾದರು. ಅವರನ್ನು ಸಂದರ್ಶಿಸಿ ‘ತರಂಗ’ಕ್ಕೆ ಒಂದು ಲೇಖನವನ್ನು ನೀಡಿದ್ದೆ. ಈ ಸಂದರ್ಶನದ ಸಮಯದಲ್ಲಿ ವೈಯಕ್ತಿಕವಾಗಿ ಅವರನ್ನು ಅರಿಯುವ ಅವಕಾಶ ಒದಗಿ ಬಂದಿತು. ಶ್ರೀ ಶೆಣೈ ಅವರು ನನ್ನ ಪ್ರಬಂಧದ ಬಗ್ಗೆ ವಿಚಾರಿಸಿ. ಅದನ್ನು ಕೃತಿರೂಪಕ್ಕೆ ತರುವಂತೆ ಒತ್ತಾಯಿಸಿದ್ದು ಮಾತ್ರವಲ್ಲ, ಚಾತುರ್ಮಾಸದಲ್ಲಿರುವ ಗುರುಗಳು ಪೂಜ್ಯ ಶ್ರೀ ಸುಧೀಂದ್ರ ತೀರ್ಥರ ದಿವ್ಯ ಹಸ್ತದಿಂದ ಬಿಡುಗಡೆ ಮಾಡಿಸುವ ಬಗ್ಗೆಯೂ ಭರವಸೆ ತೋರಿದರು. "ನಿನ್ನ ಕೃತಿಗೆ ಮುನ್ನುಡಿಯನ್ನು ನಾನೇ ಬೇಕಾದರೆ ಬರೆಯಬಲ್ಲೆ" ಎನ್ನುವ ಸಹೃದಯತೆ ತೋರಿ, ಹಸ್ತಪ್ರತಿಯನ್ನು ಓದಿ ಅಗತ್ಯಬಿದ್ದ ಕಡೆ ಬದಲಾವಣೆಗಳನ್ನು ಸೂಚಿಸಿದರು. ಅದು ಅವರ ಹೃದಯ ಶ್ರೀಮಂತಿಕೆ.

ಗೌಡ ಸಾರಸ್ವತ ಸಮಾಜದ ಕಿರು ನೋಟ ಈ ಕೃತಿ. ಇದರಲ್ಲಿ ಸಮಾಜ – ಧರ್ಮ – ಭಾಷೆ – ಕೀರ್ತಿಶಿಖರಗಳು – ಉಪಸಂಹಾರ ಎನ್ನುವ ಐದು ಅಧ್ಯಾಯಗಳಿವೆ. ‘ಸಮಾಜ’ ದಲ್ಲಿ ಗೌಡ ಸಾರಸ್ವತ ಜನಾಂಗದ ಬಗ್ಗೆ ಮಾಹಿತಿ ನೀಡಲಾಗಿದೆ. ‘ಧರ್ಮ’ ದಲ್ಲಿ ಗೌಡ ಸಾರಸ್ವತರ ಧಾರ್ಮಿಕ ಜೀವನದ ರೀತಿ, ನೀತಿ, ವ್ಯವಸ್ಥೆ, ದೇವರು, ಮಠ, ಮಠಾಧಿಪತಿಗಳು ಈ ಬಗ್ಗೆ ವಿವರಣೆ ಇದೆ. ಮಠಾಧಿಪತಿಗಳಾದ

ಶ್ರೀ ಸುಧೀಂದ್ರ ತೀರ್ಥರನ್ನು 1987 ರಲ್ಲೇ ಅವರ ಕೊಚ್ಚಿಯ ಚಾತುರ್ಮಾಸದ ಸಮಯದಲ್ಲಿ ಭೇಟಿಯಾಗಿದ್ದೆ. 1993, ಜುಲೈ ತಿಂಗಳು ಅವರ ಸನ್ಯಾಸ ದೀಕ್ಷೆಯ 50 ನೆಯ ವರ್ಷ. ಚಾತುರ್ಮಾಸದ ನಿಮಿತ್ತ ಬೆಂಗಳೂರಿನಲ್ಲೇ ಮೊಕ್ಕಾಂ ಹೂಡಿದ್ದ ಅವರನ್ನು ಮತ್ತೊಮ್ಮೆ ಭೇಟಿಯಾದೆ. ಬರೆದ ಪ್ರಬಂಧವನ್ನು ಕೃತಿರೂಪದಲ್ಲಿ ತರಲು ನಿರ್ಧರಿಸಿದ್ದೇನೆ, ಆಶೀರ್ವಾದ ನೀಡಿ ಎಂದು ಕೇಳಿಕೊಂಡೆ. ಸಂತಸದಿಂದ ಒಪ್ಪಿದರು. ಎರಡು ಗಂಟೆಯ ಸಂದರ್ಶನವನ್ನು ನೀಡಿದರು. 'ಸದಾಶಿವ ಶೆಣೈ ಸುಧೀಂದ್ರ ತೀರ್ಥರಾದದ್ದು.'-ಈ ಭಾಗ. ಗುರುಗಳ ಅಮೃತವಾಣಿಗೆ ಅಕ್ಷರದ ಸ್ವರೂಪ ಅಷ್ಟೆ. ಭಾವುಕಳಾಗಿ ಅವರೊಂದಿಗೆ ಸಂದರ್ಶನದಲ್ಲಿ ಕಳೆದ ಆ ಎರಡು ಗಂಟೆಗಳು ಜೀವನದಲ್ಲಿ ಮರೆಯಲಾಗದ ರಸನಿಮಿಷಗಳು. ಸ್ವತಃ ಸ್ವಾಮೀಜಿಯವರೇ ನನ್ನ ಬರವಣಿಗೆಯ ಆಧಾರ ವಿಷಯಗಳಿಗಾಗಿ ಮುಂಬಯಿಯಿಂದ ಗ್ರಂಥಗಳನ್ನು ತರಿಸಿಕೊಟ್ಟರು ಪರಾಮರ್ಶನಕ್ಕಾಗಿ. ಶ್ರೀಯುತ ಉಮೇಶ ವಿ. ಶರ್ಮ ಅವರೂ ಕೃತಿಗಳನ್ನು ತಲುಪಿಸುವಲ್ಲಿ ಸಹಾಯಕರಾದರು.

'ಕೀರ್ತಿ ಶಿಖರಗಳು' ಎಂಬ ಶಿರೋನಾಮೆಯಡಿಯಲ್ಲಿ ಗೌಡ ಸಾರಸ್ವತ ಸಮಾಜದ್ದೇ ಆದ ಗಣ್ಯ ಜೀವಿಗಳ ಪರಿಚಯವಿದೆ. ಗೌಡ ಸಾರಸ್ವತರು ಪ್ರತಿಭಾ ಸಂಪನ್ನರು, ಬುದ್ಧಿಶಾಲಿಗಳು, ಸಾಹಸಿಗಳು, ಆಡಿದನ್ನೆಲ್ಲ ಮಾಡಿ ತೋರಿಸುವವರು. ಹಾಗಾಗಿ ಅಂತಹ ಗಣ್ಯರ ಬಗ್ಗೆ ಒಂದು ಅಧ್ಯಾಯವನ್ನೇ ಮೀಸಲಾಗಿಟ್ಟೆ. ಆದರೆ ಗೌಡ ಸಾರಸ್ವತರಲ್ಲಿನ ಪ್ರತಿಭಾವಂತರ ಪಟ್ಟಿ ಎಷ್ಟು ದೊಡ್ಡದಿದೆ ಎಂದರೆ ಅವರೆಲ್ಲರನ್ನೂ ಕುರಿತು ಬರೆಯುವುದು ಅಸಾಧ್ಯ. ಹೀಗಾಗಿ ಒಂದೊಂದು ಕ್ಷೇತ್ರದ ಒಬ್ಬೊಬ್ಬರನ್ನು ಪ್ರಾತಿನಿಧಿಕವಾಗಿ ಆರಿಸಿ ಬರೆದಿದ್ದೇನೆ.ಇದು ಖಂಡಿತಾ ಸಮಗ್ರ ಕೃತಿ ಅಲ್ಲ. ನನ್ನ ಗಮನಕ್ಕೆ ಬಿಟ್ಟುಹೋದ ಇನ್ನೂ ಎಷ್ಟೋ ಮಹಾನ್‌ವ್ಯಕ್ತಿಗಳಿರಬಹುದು; ಇದ್ದಾರೆ. ಇದು ಸೂರ್ಯನ ಎದುರು ಸೊಡರು ಹಿಡಿಯುವ ಯತ್ನ ಅಷ್ಟೆ. ಈ ಕೃತಿಗೆ ನನ್ನ ಕೊಂಕಣಿ ಬಾಂಧವರ ಪ್ರತಿಕ್ರಿಯೆ ನೋಡಿ ಮುಂದೆ ಇದೇ ಕೃತಿಯ ಪರಿಷ್ಕೃತ ಆವೃತ್ತಿಯನ್ನು ಮಾಡುವವಳಿದ್ದೇನೆ. ಇಲ್ಲಿ 'ಕೀರ್ತಿ ಶಿಖರ' ದಲ್ಲಿ ಕೇವಲ ಪುರುಷರು ಮಾತ್ರ ಪ್ರಧಾನರಾಗಿದ್ದಾರೆ. ಪ್ರತಿಭಾಶಾಲಿ ಸ್ತ್ರೀ ಸಂಕುಲದ ಬಗ್ಗೆಯೂ ಬರೆಯುವ ಸಂಕಲ್ಪ ಇದೆ.

ಕೀರ್ತಿ ಶಿಖರಗಳಾಗಿ ಮೆರೆದ, ಮೆರೆಯುತ್ತಿರುವ ವ್ಯಕ್ತಿಗಳನ್ನು ಸಂಖ್ಯೆಯಲ್ಲಿ ಗುರುತಿಸಲು ಸಾಧ್ಯವೇ ? ಹರಿಕಥಾಗ್ರೇಸರ ಭದ್ರಗಿರಿ ಅಚ್ಯುತದಾಸರನ್ನು ಭೇಟಿಯಾಗಿ ತಮ್ಮ ಬಗ್ಗೆ ಮಾಹಿತಿ ನೀಡಿ ಎಂದು ಕೇಳಿಕೊಂಡೆ. ನನ್ನ ಪ್ರಾಧ್ಯಾಪಕ – ಗೈಡ್, ಡಾ॥ ಸಾ. ಶಿ. ಮರುಳಯ್ಯ ಅವರೂ ಜೊತೆಗಿದ್ದರು. ಧಾರ್ಮಿಕ ವಿಚಾರದಲ್ಲಿ ನ ಭೂತೋ ನ ಭವಿಷ್ಯತಿಯಂತಿದ್ದ ಶ್ರೀ ದಾಸರೂ. ಸಾಹಿತ್ಯದ ಅಧ್ವರ್ಯು ಡಾ॥ ಸಾ. ಶಿ. ಮರುಳಯ್ಯ ಅವರೂ ... ಇವರಿಬ್ಬರ ಸಮಾಲೋಚನೆ. ಚರ್ಚೆ, ಅನಂತರ

ರಸಾನುಭವವನ್ನು ತಂದೊಡ್ಡಿತೆಂದರೆ ಹೂವಿನೊಂದಿಗೆ ನಾರೂ ಸ್ವರ್ಗ ಸೇರಿದಂತೆ ನಾನಾದೆ. ಶ್ರೀ ದಾಸರು ಬಹಳಷ್ಟು ಕೃತಿಗಳನ್ನು ನೀಡಿ ನನ್ನ ಕೆಲಸಕ್ಕೆ ನೆರವಾದರು. ಅವರ ಸೊಸೆ ಶ್ರೀಮತಿ ಹರಿದಾಸ ಪೈ ತಮ್ಮ ಸಂಗ್ರಹದಲ್ಲಿನ ಜಾನಪದ ಗೀತೆಯನ್ನು ನೀಡಿ ನನ್ನ ಕೃತಿಯಲ್ಲಿ ತಮ್ಮ ಪಾಲನ್ನೂ ಸೇರಿಸಿದರು.

ಮಣಿಪಾಲದ ಶಿಲ್ಪಿಯಾಗಿ ದಿ. ಟಿ. ಎಂ. ಎ. ಪೈ., ರಾಜಕಾರಣಿ, ಸಮಾಜ ಸೇವಕರಾಗಿ ದಿ. ಟಿ. ಎ. ಪೈ., ಸಾಹಿತ್ಯ ಹಾಗೂ ಸಂಶೋಧನಾ ಕ್ಷೇತ್ರದಲ್ಲಿ ದಿವಂಗತ ಗೋವಿಂದ ಪೈ – ಈ ಪೈ ಬಂಧುಗಳ ಮಾಹಿತಿ ಸಂಗ್ರಹಕ್ಕಾಗಿ ಉಡುಪಿ, ಮಣಿಪಾಲಕ್ಕೆ ಹೋಗಿದ್ದೆ. ಶ್ರೀ ಕು.ಶಿ. ಹರಿದಾಸ ಭಟ್ಟರು ಗೋವಿಂದ ಪೈ ಸ್ಮಾರಕ ಭವನಕ್ಕೆ ಕರೆದೊಯ್ದು ಅಗತ್ಯಬಿದ್ದ ವಿಷಯಗಳೆಲ್ಲವನ್ನೂ ಸಂಗ್ರಹಿಸಿಕೊಟ್ಟರು. ದಿ.ಟಿ. ಎ. ಪೈ ಅವರ ಪತ್ನಿ ಶ್ರೀಮತಿ ವಸಂತಿ ಪೈ ಅವರು ತಮ್ಮ ಸುದೀರ್ಘ ಸಂದರ್ಶನದಲ್ಲಿ ಸಮಸ್ತ ವಿಚಾರಗಳನ್ನೂ ತಿಳಿಸಿದರು. ಶ್ರೀಯುತ ಸಂತೋಷಕುಮಾರ ಗುಲ್ವಾಡಿಯವರೂ ನನ್ನ ಭೇಟಿಯ ಸಮಯದಲ್ಲಿ ತಮ್ಮಿಂದಾದ ಸಹಾಯವನ್ನಿತ್ತಿದ್ದರು. ಮಣಿಪಾಲದ ಸ್ಮೃತಿ ಭವನದ ಡಾ॥ ಬಿ. ಆರ್. ಪೈ ಅವರು ಇಂದಿಗೂ ಪತ್ರ ಸಂಪರ್ಕವನ್ನಿರಿಸಿ ಅಗತ್ಯಬಿದ್ದ ಮಾಹಿತಿಗಳನ್ನು ಒದಗಿಸುತ್ತಾ ಬಂದಿದ್ದಾರೆ. ಶಿಲ್ಪಶಾಸ್ತ್ರದಲ್ಲಿ ಅದ್ವಿತೀಯರಾದ ರಂಜಾಳ ಗೋಪಾಲ ಶೆಣೈ ಅವರ ಬಗ್ಗೆ ವಿಷಯ ಸಂಗ್ರಹಣೆಗಾಗಿ ಕಾರ್ಕಳಕ್ಕೆ ಹೋಗಿದ್ದೆ. ಅವರ ಮೊಮ್ಮಗ ಶ್ರೀ ರಾಧಾಮಾಧವ ಶೆಣೈ, ನಮ್ಮೊಂದಿಗೆ ತಾವೇ ಹೊರಟು ಬಂದು ಬಿಡದ ಜಡಿಮಳೆಯಲ್ಲಿ ಊರೆಲ್ಲ ಸುತ್ತಿಸಿ ತಮ್ಮ ತಾತ ಮಾಡಿದ ಶಿಲ್ಪಕಲಾಕೃತಿಗಳ ಪ್ರತ್ಯಕ್ಷ ದರ್ಶನ ನೀಡಿದರು. ಈ ಬಗ್ಗೆ ಮಾಹಿತಿ ನೀಡುವಲ್ಲಿ ಡಾ॥ ಶ್ರೀ. ವೈಕುಂಠ ಪೈ ಅವರೂ ಶಾಮೀಲಾಗಿದ್ದರು.

ಖ್ಯಾತ ಪತ್ರಕರ್ತ ಶ್ರೀ. ಎಂ. ವಿ. ಕಾಮತರನ್ನು ಭೇಟಿಯಾಗಲು ಮುಂಬೈಗೆ ತೆರಳಿದ್ದೆ. "ನನ್ನ ಬಗ್ಗೆ ನೀನು ಅದೇನು ಬರೆಯುತೀಯೋ ಎನ್ನುವ ಕುತೂಹಲ ನನಗೆ" ಎಂದು ಬಾರಿಬಾರಿಯೂ ಛೇಡಿಸುತ್ತಾ ನನಗೆ ವಿವರ ಒದಗಿಸಿದ ಮಹಾನುಭಾವರಿವರು. ಕೆಲದಿನ ಅವರೊಂದಿಗಿದ್ದು ಅವರ ದಿನಚರಿಯನ್ನು ಅಧ್ಯಯನ ಮಾಡಿ ಅವರದೇ ಕೈಯಡುಗೆಯ ಸವಿಯನ್ನೂ ಉಂಡು ಬಂದೆ. "ಬ್ರಹ್ಮಚಾರಿಯ ಕೈ ಅಡುಗೆಯ ಊಟದ ಯೋಗ ನಿನಗೆ." ಎಂದು ಗೇಲಿ ಮಾಡುತ್ತಾ ಬಡಿಸಿದರು,

ಡಾ॥ ಶ್ರೀ ಅಶೋಕ ಪೈ ಮಾನಸಿಕ ತಜ್ಞರು. ಕಿರಿಯ ವಯಸ್ಸಿನಲ್ಲಿ ಹಿರಿಯ ಸಾಧನೆ ಮಾಡಿ ಕೀರ್ತಿ ಶಿಖರಗಳಲ್ಲಿ ತಾವೂ ಒಬ್ಬರಾಗಿದ್ದಾರೆ. ಶಿವಮೊಗ್ಗೆಯಲ್ಲಿ ಅವರ ಭೇಟಿಯ ವಿಚಾರ ಬರೆದಷ್ಟು ಕಡಿಮೆ. ಅನುಭವಿಸಿಯೇ ತಿಳಿಯಬೇಕಾದ ಸತ್ಯವದು. 'ಸ್ವರ್ಗಕ್ಕೆ ಕಿಚ್ಚು ಹಚ್ಚೆಂಬ' ನುಡಿಯು ಸಾಕ್ಷಾತ್ಕಾರವಾಗಿದೆ

ಡಾ॥ ಅಶೋಕ ಪೈ ಅವರ ತುಂಬು ಕುಟುಂಬದಲ್ಲಿ. ಕೌಟುಂಬಿಕ ಜೀವನದಲ್ಲೂ, ವೃತ್ತಿ ಜೀವನದಲ್ಲೂ, ಸಾಮಾಜಿಕ ಜೀವನದಲ್ಲೂ ಪೈ ಅವರ ಸಾಧನೆ ಗಗನದೆತ್ತರ. ಈ ಕೀರ್ತಿ ಶಿಖರಗಳಲ್ಲಿ ನೀವೂ ಒಂದಾಗಿ ಎಂದು ಕೇಳಿಕೊಂಡಾಗ ನಯವಾಗಿಯೇ ತಿರಸ್ಕರಿಸಿದರು. ಅವರ 'ನ' ಕಾರಕ್ಕಿಂತ ನನ್ನ ಹಠವೇ ಅಧಿಕವಾಗಿ ನಾನೇ ಗೆದ್ದೆ ಜಿಡಿ. "ಆರು ವರ್ಷಗಳ ಬಳಿಕ ಇದೀಗ ನನ್ನ ಪ್ರಬಂಧ ಕೃತಿ ರೂಪಕ್ಕೆ ಬರುತ್ತಿದೆ. "ತಮ್ಮ ಹೊಸ ಬೆಳವಣಿಗೆಯ ಬಗ್ಗೆ ತಿಳಿಸಿ" ಎಂದು ಮತ್ತೊಮ್ಮೆ ಕೇಳಿಕೊಂಡಿದ್ದೆ. "ನನ್ನ ಬೆಳವಣಿಗೆ ನಿಂತು ಹೋಗಿಬಿಟ್ಟಿದೆ." ಎಂದು ಕುಚೋದ್ಯವಾಗಿ ಬರೆದರೂ ಡಾ॥ ಪೈ ಹಾಗೂ ಅವರ ಶ್ರೀಮತಿ ಡಾ॥ ರಜನಿ ಪೈ ಬಹಳಷ್ಟು ಮಾಹಿತಿಗಳನ್ನು 'ಕೊರಿಯರ್' ಮೂಲಕ ಒದಗಿಸುತ್ತಾ ಬಂದಿದ್ದಾರೆ.

'ಕೀರ್ತಿ ಶಿಖರಗಳು' ಎಂದು ನಾಮಕರಣ ಮಾಡಿ ಈ ಕೃತಿಯಲ್ಲಿ ಕೇವಲ 'ಏಳು' ವ್ಯಕ್ತಿಗಳನ್ನು ಮಾತ್ರ ಆರಿಸಿದ್ದೇನೆ. ಇದು ಸಾಂಕೇತಿಕ. ಗೌಡ ಸಾರಸ್ವತರಿಗೆ 'ಏಳು'ಶುಭ ಸಂಖ್ಯೆ. ಇವರನ್ನು 'ಕೊಕ್ಕೆ' ಎಂದು ಕರೆದರೂ 'ಏಳ'ಕ್ಕೆ ತನ್ನದೇ ಆದ ವೈಶಿಷ್ಟ್ಯವಿದೆ.ಸಪ್ತ ಸಾರಸ್ವತ,ಸಪ್ತರ್ಷಿ,ಸಪ್ತಧಾರಾ, ಸಪ್ತಕೊಂಕಣ,ಸಪ್ತ ಗೌಡ ಹೀಗೆ ಹಿಂದಿನಿಂದಲೂ'ಏಳು'ಅಮೂಲ್ಯ ಸಂಖ್ಯೆ. ಆ ಸಾಂಕೇತಿಕತೆ ಇಲ್ಲಿ ಸಾರ್ಥಕ್ಯ ಪಡೆದಿದೆ.

ಆಂಗ್ಲ ಭಾಷೆಯಲ್ಲಿ ಒಂದು ಗಾದೆಯ ಮಾತಿದೆ. ಪ್ರತಿಯೊಬ್ಬ ಯಶಸ್ವೀ ಪುರುಷನ ಹಿಂದೆ ಒಬ್ಬಾಕೆ ಸ್ತ್ರೀ ಅವಶ್ಯವಾಗಿರುತ್ತಾಳೆ. ನನ್ನ ಪಾಲಿಗೆ ಇದು ಸ್ವಲ್ಪ ತಿರುಗು ಮುರುಗಾಗಿದೆ. ನನ್ನ ಬರವಣಿಗೆಯ ಹವ್ಯಾಸಕ್ಕೆ ಅತೀವ ಪ್ರೋತ್ಸಾಹ ಕೊಡುವ ನನ್ನವರು – ಶ್ರೀ ವಿವೇಕ ಪ್ರಭು. ಬರವಣಿಗೆಯುದ್ದಕ್ಕೂ ನನ್ನೊಂದಿಗೆ ಅರ್ಥಪೂರ್ಣವಾಗಿ ಸಹಕರಿಸಿದ ನನ್ನ ಪುಟಾಣಿಗಳು- ಪ್ರಿಯದರ್ಶಿನಿ. ಯಶಸ್ವಿನಿ ಮತ್ತು ವರುಣ–ಇವರು. ತಮ್ಮ ಕಾರ್ಯಬಾಹುಳ್ಯದ ನಡುವೆಯೂ ನನ್ನ ಕರೆಗೆ ಓಗೊಟ್ಟು ಬರುತ್ತಿದ್ದ ನನಗೆ ಮಾರ್ಗದರ್ಶಕರು ಶ್ರೀಮತಿ ವತ್ಸಲಾ ಪ್ರಭುರವರು. ನನ್ನ ಆಲಸ್ಯದ ರೋಗಕ್ಕೆ ಆಗಾಗ ಬಿಸಿ ಮುಟ್ಟಿಸುತ್ತಾ ಬರೆದುದನ್ನು ಕೃತಿ ರೂಪಕ್ಕೆ ತರಿಸಿದರು, ಪ್ರಕಾಶಕಿಯೂ ಆದರು.

ಮುಂಬೈಯ ಶ್ರೀ. ಎಂ. ಆರ್. ಪೈ. ಅವರೂ ನನ್ನ ಈ ಪ್ರಬಂಧವನ್ನು ಓದಿ, ಹಸ್ತಪ್ರತಿಯನ್ನು ಮುಂಬೈಗೆ ಒಯ್ದು ಕಾದು ಹೋಗದಂತೆ ಅದರ ಮೂರು ಪ್ರತಿಗಳನ್ನು ಮಾಡಿ ಕಳುಹಿಸಿಕೊಟ್ಟರು. ಪ್ರಕಾಶನೆಯ ಸಮಯದುದ್ದಕ್ಕೂ ಸಲಹಾ ಸೂಚನೆಯನ್ನಿತ್ತು ಸಹಕರಿಸಿದ ಶ್ರಿ ರಾಮಮೋಹನ ಕಿಣಿ ಅವರ ಪಾಲೂ ಈ ಕೃತಿಯಲ್ಲಿದೆ.

ನನ್ನ ಬರವಣಿಗೆಯ ಕಾಲವಲ್ಲಿ ನನ್ನ ಪುಟ್ಟ ಮಗಳನ್ನು ನೋಡಿಕೊಂಡ ಮಾತೃ ಸಮಾನ ಹಿರಿಯ ಸಹೋದರಿ – ನಳಿನಿ ಕುಡ್ವಾ, ಉಡುಪಿ, ಮಣಿಪಾಲ.

ಕಾರ್ಕಳದ ನನ್ನ ಸುತ್ತಾಟದ ಸಮಯದಲ್ಲಿ ಸಂಪೂರ್ಣ ನೆರವನ್ನಿತ್ತ ನನ್ನ ಮತ್ತೊಬ್ಬ ಸಹೋದರಿ ಸುಪರ್ಣಾಕಾಮತ್, ಸರ್ವ ಸಹಾಯವನ್ನೂ ಇತ್ತ ಡಾ॥ ಸಾ. ಶಿ. ಮರುಳಯ್ಯ ಇವರೆಲ್ಲರ ಋಣವನ್ನು ಬರೆದು ಮುಗಿಸಲೇ ? ಡಾ॥ಸಾ.ಶಿ. ಮರುಳಯ್ಯ ಅವರೊಂದಿಗೆ ನನ್ನದು ಜನ್ಮಾಂತರದ ಅನುಬಂಧ. ಐ. ಎ. ಎಸ್; ಕೆ. ಎ. ಎಸ್. ವಿದ್ಯಾರ್ಥಿಗಳಿಗೆ ಪಾಠ ಹೇಳಿಕೊಡುವ ತಮ್ಮ ಅಮೂಲ್ಯ ಸಮಯವನ್ನು ನನಗಾಗಿ ಮೀಸಲಿಟ್ಟ ವೇಳೆಗಳೆಷ್ಟೋ. ಇವರೆಲ್ಲರ ಋಣವನ್ನು ಹೊತ್ತು ಈ ಕೃತಿಯನ್ನು ಬೆಳಕಿಗೆ ತಂದಿದ್ದೇನೆ. ನಿಮ್ಮೆದುರಿಗಿದೆ. ಇದು ನನ್ನ ಚೊಚ್ಚಲ ಪ್ರಯತ್ನ. ಆಕಾಶಕ್ಕೆ ಏಣಿ ಇಟ್ಟೆನೇನೋ ಎನ್ನುವ ಶಂಕೆಯೂ ಇದೆ. ಹಾಲಲ್ಲಾದರೂ. ನೀರಲ್ಲಾದರೂ ಹಾಕುವ ಅವಕಾಶ ನಿಮಗೆ.ಆದರೆ ಹಿರಿಯರ ಹರಕೆ, ಗುರುಗಳ ಆಶೀರ್ವಾದ ಇವೆರಡೂ ವಿಪುಲವಾಗಿದ್ದರೆ ಧೈರ್ಯ ಕೆಡಲುಂಟೇ ?

ಈ ಕೃತಿಗೆ ಮುಖ ಪುಟದ ಕಲೆಯನ್ನು ಒದಗಿಸಿದ ವರ್ಣಶಿಲ್ಪಿ ಪ್ರಶಾಂತ್ ಎನ್. ಅವರಿಗೂ. ಅಂದವಾಗಿ ಮುದ್ರಿಸಿಕೊಟ್ಟ ಸ್ನೇಹಾ ಪ್ರಿಂಟರ್ಸ್‌ನ ಎ. ಮಹೇಶ್ ಅವರಿಗೂ ಸುಧೀಂದ್ರ ಪ್ರಿಂಟರ್ಸ್‌ನ ಶ್ರೀ ಹರಿದಾಸ ಪೈ ಅವರಿಗೂ ನನ್ನ ಕೃತಜ್ಞತೆಯ ನಮನಗಳು.

994– ಪ್ರಭುಧಾಮ್ ಶಾಲಿನಿ ಪ್ರಭು
ಸರ್ವಿಸ್ ರಸ್ತೆ,
ವಿಜಯನಗರ 2ನೇ ಹಂತ,
ಬೆಂಗಳೂರು–560 040.

# ಪರಿವಿಡಿ

ಅವಿಭಾಜ್ಯ ಅಂಶಗಳ ಸುಂದರ ಸಂಯೋಜನೆಯಲ್ಲಿ ಮಾನವ ಕುಲಕೋಟಿ ತನ್ನ ಪ್ರಗತಿಯನ್ನು ಸಾಧಿಸಿಕೊಳ್ಳಬೇಕಾಗಿದೆ.

ವಿಶ್ವದಲ್ಲಿ ಅನೇಕ ಧರ್ಮಗಳಿವೆ. ಆ ಧರ್ಮಗಳ ಧೋರಣೆ ಪ್ರೇರಣೆಗಳಲ್ಲಿ ನಡೆಯುತ್ತಿರುವ ಸಮಾಜಗಳೂ ಇವೆ. ದಯೆ, ದಮ, ದಾನ, ತಪ, ಶೀಲಗಳನ್ನು ಧರ್ಮ ಬೋಧಿಸಿದರೆ ಛಲ, ಬಲ, ತ್ಯಾಗ, ಭೋಗ, ಗಂಡು, ನನ್ನಿ, ಆತ್ಮೋನ್ನತಿ ಇವೇ ಮೊದಲಾದುವನ್ನು ಸಮಾಜ ನಿರ್ದೇಶಿಸುತ್ತದೆ. ಸತ್ಯದ ಪರಿಪಾಲನೆಯಲ್ಲಿ ಅದಕ್ಕೆ ದಾಕ್ಷಿಣ್ಯ ತಿಳಿದಿಲ್ಲ. ಅನೀತಿವಂತನನ್ನು ದಂಡಿಸುವಲ್ಲಿ ಅದಕ್ಕೆ ದಯೆ ಗೊತ್ತಿಲ್ಲ. ಹೇಡಿಗೆ ದಾರಿಕೊಡುವ ದುಂಬತನ ಅದಕ್ಕಿಲ್ಲ. ಅದು ಸದಾ ಖಂಡಿತವಾದಿ. ಅಹಿತಕ್ಕೆ ಆಸ್ಪದ ಕೊಡದೆ ಹಿತವನ್ನು ಮರೆಯದೆ ಬದುಕು ಮಾಡಲು ಬೋಧಿಸುತ್ತದೆ, ಇಲ್ಲವೇ ಪ್ರೇರೇಪಿಸುತ್ತದೆ.

ಇಂತಹ ವಿಶ್ವಮಾನ್ಯ ಸಮಾಜ ಸಂಪುಟಗಳಲ್ಲಿ ಗೌಡ ಸಾರಸ್ವತ ಸಮಾಜವೂ ಒಂದು. ನದಿಯ ಉದ್ಗಮ ಸ್ಥಾನ ಎಷ್ಟು ನಿಗೂಢವೋ ಅಸ್ಪಷ್ಟವೋ, ಈ ಸಮಾಜದ ಮೂಲವೂ ಅಷ್ಟೇ ನಿಗೂಢ ಅಷ್ಟೇ ಅಸ್ಪಷ್ಟ. ಆದರೆ ನದಿ ತಾನು ಹರಿದೆಡೆಯನ್ನೆಲ್ಲಾ ಹಚ್ಚ ಹಸುರಿನ ಪಚ್ಚೆಪಯಿರಿನ ತುಪ್ಪುಳ ತಲ್ಪನಿರ್ಮಾಡಿಸುವಂತೆ ಗೌಡ ಸಾರಸ್ವತ ಸಮಾಜವೂ ಹಲವು ಶ್ರೇಷ್ಠ ತತ್ವಗಳ, ಆದರ್ಶಗಳ ನೆಲೆಗಟ್ಟಿನ ಮೇಲೆ ನಿಂತು ತನ್ನಾಶ್ರಯಕ್ಕೆ ಬಂದವರಿಗೆಲ್ಲಾ ಬೆಳಕು ನೀಡಿ ತಾನೂ ಬದುಕಿ ಅನ್ಯರಿಗೂ ಬದುಕು ಕೊಟ್ಟಿದೆ.

ಇದರ ಸಂಸ್ಕೃತಿ ಭಾರತೀಯ ಸಂಸ್ಕೃತಿಯ ಒಂದು ಪ್ರತೀಕ. ಇದರ ಜನ್ಮಭೂಮಿ ಭರತ ಖಂಡವೇ ಆದುದರಿಂದ ಅದರ ಅವಿಭಾಜ್ಯ ಅಂಗವಾದ ಇದರ ಬೇರು ನೀರುಗಳೆರಡೂ ಇರುವುದು ಭಾರತದಲ್ಲೇ. ಸುಮಾರು ತೊಂಬತ್ತು ಕೋಟಿ ಜನಸಂಖ್ಯೆಯುಳ್ಳ ಭಾರತ ದೇಶದಲ್ಲಿ ಅನ್ಯಧರ್ಮಗಳ ಅಥವಾ ಸಮಾಜಗಳ ಸಂಖ್ಯೆಗೆ ಹೋಲಿಸಿಕೊಂಡಾಗ ಗೌಡ ಸಾರಸ್ವತ ಸಮಾಜ ತುಂಬಾ ಚಿಕ್ಕದು. ಇದನ್ನು ಮೈನಾರಿಟಿ (ಅಲ್ಪಸಂಖ್ಯಾತ) ಎಂದೇ ಭಾರತ ಸಂವಿಧಾನ ಗುರುತಿಸಿದೆ. ಸಂಖ್ಯೆಯಲ್ಲಿ ಇದು ಕಿರಿದಾದರೂ ಸತ್ವದಲ್ಲಿ ಇದು ಹಿರಿದು. ಭರತಖಂಡದ ಇತಿಹಾಸದಲ್ಲಿ ಇದರದೇ ಆದ ಸಾಂಸ್ಕೃತಿಕ ಹಾಗೂ ಆರ್ಥಿಕ ಕೊಡುಗೆ ಅಪಾರ. ಇಂದು ದಕ್ಷಿಣ ಭಾರತಕ್ಕೆ ಆರ್ಥಿಕ ಭದ್ರತೆಯನ್ನು ತಂದುಕೊಟ್ಟ ಕೀರ್ತಿ ಗೌಡ ಸಾರಸ್ವತ ಸಮಾಜಕ್ಕೆ ಸಲ್ಲುತ್ತದೆ. ಈ ಸಮಾಜದ ಅಪೂರ್ವ ಹಾಗೂ ಅಮೂಲ್ಯ ಕೊಡುಗೆಗಳನ್ನು ಗುರುತಿಸಿ ತೋರಿಸುವುದೇ ಈ ಕೃತಿಯ ಮುಖ್ಯ ಉದ್ದೇಶ. ಭಾರತಕ್ಕೆ ಇದು ಸಲ್ಲಿಸಿದ ಸಾಂಸ್ಕೃತಿಕ ಕಾಣಿಕೆಗಳೇನು ? ರಾಷ್ಟ್ರ ನಿರ್ಮಾಣದಂತಹ ಪವಿತ್ರತಮ ಕಾರ್ಯದಲ್ಲಿ ಈ ಸಮಾಜ

ನೀಡಿದ ನೆರವೇನು ? ಇವರ ಧ್ಯೇಯೋದ್ದೇಶ ಸಾಧನೆಯಿಂದ ಅನ್ಯಧರ್ಮಗಳಿಗೆ ಆಗಿರುವ ಲಾಭವೇನು ? ಅಂತೆಯೇ ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸಲು ಹೊರಟ ಈ ಸತ್ವಶಾಲಿ ಸಮಾಜ ಮಾನುಕುಲದ ಒಳಿತಿಗಾಗಿ ಯಾವ ಮಟ್ಟದ ತ್ಯಾಗ ಮಾಡಿದೆ — ಇತ್ಯಾದಿ ಅಂಶಗಳನ್ನು ಈ ಸಮಾಜದ ಶಿಖರಗಳಾಗಿ ನಿಂತಿರುವ ಹಲವು ಮಹಾ ಚೇತನಗಳ ಕಿರುಪರಿಚಯದೊಂದಿಗೆ, ಆ ಮಹದ್ ವಿಭೂತಿಗಳ ಲೋಕಸಂಗ್ರಹ ಕಾರ್ಯದ ಹಿರಿಮೆ ಗರಿಮೆಗಳನ್ನು ಬಿತ್ತರಿಸಿ ತೋರಿಸುವುದು ನಮ್ಮ ಈ ಅಧ್ಯಯನದ ಕಕ್ಷೆಯಲ್ಲಿ ಬರುವ ಕೆಲವು ಅಂಶಗಳು.

ದಕ್ಷಿಣ ಭಾರತದಲ್ಲಿ ಅದರಲ್ಲೂ ದಕ್ಷಿಣ ಕನ್ನಡ ಜಿಲ್ಲೆ ಮತ್ತು ಗೋವೆ ಪ್ರಾಂತಗಳಲ್ಲಿ ಹೆಚ್ಚು ಪ್ರಚಲಿತವಿರುವ ಗೌಡ ಸಾರಸ್ವತ ಸಮಾಜ ಹಾಗೂ ಸಂಸ್ಕೃತಿಯನ್ನು ಕುರಿತು ಹಲವು ವಿದ್ವಾಂಸರು ಕೆಲಸ ಮಾಡಿದ್ದಾರೆ. ಆದರೆ ಕರ್ನಾಟಕದಲ್ಲಿ ಬದುಕು ಮಾಡಿದ, ಮಾಡುತ್ತಿರುವ ಗೌಡ ಸಾರಸ್ವತ ಗಣ್ಯ ಜೀವಿಗಳ ಸಾಂಸ್ಕೃತಿಕ ಕೊಡುಗೆ ಏನು ? ಅವರು ಸಲ್ಲಿಸಿದ ರಾಷ್ಟ್ರಹಿತ ಕಾರ್ಯಗಳು ಯಾವುವು ? ಲೌಕಿಕ ಹಾಗೂ ಪಾರಮಾರ್ಥಿಕ ಸಾಧನೆಗಳಾವುವು ? ಎಂಬವುಗಳ ಬಗ್ಗೆ ಸ್ಥೂಲ ಚಿತ್ರಣ ಎಲ್ಲೂ ದೊರೆಯುವುದಿಲ್ಲ. ಆದಕಾರಣ ಅವರ ಎಲ್ಲಾ ಮುಖಗಳ ದರ್ಶನ ಮಾಡಿಸುವಂತಹ ಸುದೀರ್ಘ ಹಾಗೂ ಪರಿಪೂರ್ಣ ಅಧ್ಯಯನದ ಅಗತ್ಯ ಅನೇಕ ಜನ ಹಿರಿಯರ ಗಮನಕ್ಕೆ ಬಂದಿತು. ಅವರ ಅಂತರ್ಯದ ಆಕಾಂಕ್ಷೆಯನ್ನು ಈಡೇರಿಸುವ ಸಲುವಾಗಿ ನಾವು ಈ ಅಧ್ಯಯನವನ್ನು ಕೈಗೆತ್ತಿಕೊಂಡೆವು. ಇದರಲ್ಲಿ ನಮ್ಮ ಪ್ರಾಮಾಣಿಕ ಪ್ರಯತ್ನವಿದೆ ಎಂದು ಮತ್ತೆ ಹೇಳಬೇಕಾಗಿಲ್ಲ.

ನಮ್ಮ ಅಧ್ಯಯನ ಕರ್ನಾಟಕಕ್ಕೆ ಮಾತ್ರ ಸೀಮಿತವಾದದ್ದು. ಪ್ರಾಸಂಗಿಕವಾಗಿ ಅಖಂಡ ಭಾರತಖಂಡದ ಗೌಡ ಸಾರಸ್ವತ ಸಮಾಜದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಂಶಗಳ ಅವಲೋಕನ ನಡೆಸಿದರೂ ನಾವು ಒತ್ತು ಕೊಟ್ಟಿರುವುದು ಕರ್ನಾಟಕಕ್ಕೆ ಮಾತ್ರ. ರಾಜಕಾರಣದಲ್ಲಿ, ಕೈಗಾರಿಕೋದ್ಯಮದಲ್ಲಿ, ಪತ್ರಿಕೋದ್ಯಮದಲ್ಲಿ, ಬ್ಯಾಂಕಿಂಗ್ ಉದ್ದಿಮೆಯಲ್ಲಿ ಇಂತಹ ಹಲವು ಲೌಕಿಕ ಕ್ಷೇತ್ರಗಳಲ್ಲಿ; ಶಿಲ್ಪ, ಸಾಹಿತ್ಯ ಮೊದಲಾದ ಕಲಾಕ್ಷೇತ್ರಗಳಲ್ಲಿ ಗೌಡ ಸಾರಸ್ವತ ಗಣ್ಯರ ದುಡಿಮೆಯ ಅಂದಾಜು ಕೊಡುವುದು, ಕನ್ನಡಸಾಹಿತ್ಯಕ್ಕೆ, ಕನ್ನಡ ಸಂಸ್ಕೃತಿಗೆ, ತನ್ಮೂಲಕ ಭಾರತೀಯ ಸಂಸ್ಕೃತಿಗೆ ಕರ್ನಾಟಕದ ಗೌಡ ಸಾರಸ್ವತರ ಕೊಡುಗೆಯೇನು ಎಂಬುದರ ಬಗ್ಗೆ ಒಂದು ಸ್ಪಷ್ಟ ಚಿತ್ರಣವನ್ನೀಯುವುದು ಈ ಅಧ್ಯಯನದ ಮೂಲ ಉದ್ದೇಶ.

## ಗೌಡ ಸಾರಸ್ವತರು ಅಥವಾ ಕೊಂಕಣಿ ಬ್ರಾಹ್ಮಣರು

ಭಾರತ ಒಂದು ಸಂಕೀರ್ಣ ಜಗತ್ತು; ಹಲವು ಧರ್ಮಗಳ ಆಗರ. ಅಲ್ಲಿನ ಅನೇಕ ಧರ್ಮಗಳಲ್ಲಿ ವೈದಿಕ ಧರ್ಮವೂ ಒಂದು. ಈ ಧರ್ಮವನ್ನಾಶ್ರಯಿಸಿದ ಸಮಾಜ– ಬ್ರಾಹ್ಮಣ ಸಮಾಜ. ಅನಾದಿ ಬ್ರಾಹ್ಮಣ ಸಮಾಜದಲ್ಲಿ ಅನೇಕ ಟಿಸಿಲುಗಳಿವೆ. ಅವುಗಳಲ್ಲಿ ಗೌಡ ಸಾರಸ್ವತವೂ ಒಂದು. ವೈದಿಕರು ಅರ್ಥಾತ್ ಬ್ರಾಹ್ಮಣರು ಸಾಧಾರಣವಾಗಿ ವೇದಾಧ್ಯಯನ ನಿರತರು.ಪೂಜೆ ಪಠಣಗಳಲ್ಲಿಯೇ ಮಗ್ನರಾದವರು. ಅಗ್ರಹಾರ ಬ್ರಹ್ಮಪುರಿಯಲ್ಲಿದ್ದುಕೊಂಡು ಅಧ್ಯಯನ ಅಧ್ಯಾಪನಗಳನ್ನು ನಡೆಸಿಕೊಂಡು ಬರುವ ಸಾತ್ವಿಕರು. ಆದರೆ ಜನ್ಮತಃ ಬ್ರಾಹ್ಮಣರೇ ಆಗಿದ್ದರೂ ಗೌಡ ಸಾರಸ್ವತರು ವೇದೋಪನಿಷತ್ತುಗಳ ಪೊತ್ತಗೆಯನ್ನು ಹಿಡಿಯಲಿಲ್ಲ. ತಕ್ಕಡಿ ಹಿಡಿದು ತೂಗಿದರು. ಸರಸ್ವತಿಗೆ ಮಿಗಿಲಾಗಿ ಲಕ್ಷ್ಮಿಯನ್ನು ಒಲಿದರು. ಓಲೈಸಿದರು. ಅಂದರೆ ಚಾತುರ್ವರ್ಣಗಳಲ್ಲಿನ ವೈಶ್ಯರಂತೆ ತಾವೂ ವಾಣಿಜ್ಯ ವ್ಯಾಪಾರಗಳಲ್ಲಿ ಸಣ್ಣ ಸಣ್ಣ ಅಥವಾ ಬೃಹತ್ ಪ್ರಮಾಣದ ಕೈಗಾರಿಕೋದ್ಯಮದಲ್ಲಿ ತಮ್ಮ ಭವಿತವ್ಯವನ್ನು ಕಂಡುಕೊಂಡರು.

ಈ ಜನಾಂಗವು ಸರಸ್ವತೀ ತೀರದಿಂದ ಬಂದುದಾದ್ದರಿಂದ ಸಾರಸ್ವತರು ಎಂದಾಯಿತು. ಸರಸ್ವತಿ ಮತ್ತು ದೃಶದ್ವತಿ ನದಿಗಳ ನಡುವಣ ಬಯಲು ಗೌಡ ಸಾರಸ್ವತ ಜನಾಂಗದ ಮೂಲ ಸ್ಥಳವೆಂದು ಹೇಳುತ್ತಾರೆ.[1] ಆದರೆ ಈ ನದಿಗಳ ನೆಲೆ-ನೆಲ ಯಾವುದೂ ಸ್ಪಷ್ಟವಾಗಿ ತಿಳಿದಿಲ್ಲ. ಈ ನದಿ ಮೂರು ಸಾವಿರದ ಐನೂರು ವರ್ಷಗಳ ಹಿಂದೆ ಬತ್ತಿ ಹೋಯಿತು ಎಂಬ ಒಂದು ಊಹೆ ಇದೆ. ಸರಸ್ವತೀ ಎಂಬ ಹೆಸರುಳ್ಳ ನದಿಗಳು ಹಲವಿವೆ ಭಾರತದಲ್ಲಿ. ಉದಾಹರಣೆಗೆ ಒಂದು ಸಣ್ಣ ನದಿ ಅಜ್ಮೀರದ ಬಳಿ ಮತ್ತೊಂದು ಸಣ್ಣ ನದಿಯನ್ನು ಸೇರುತ್ತದೆ. ಅದರ ಹೆಸರು ಸರಸ್ವತಿ.

ಮತ್ತೊಂದು ಇಂಥದೇ ಸಣ್ಣ ನದಿ ಅಹಮದ್ ನಗರ ಜಿಲ್ಲೆಯಲ್ಲಿನ ಭೀಮಾನದಿಯನ್ನು ಕೂಡಿಕೊಳ್ಳುತ್ತದೆ. ಅದೂ ಒಂದು ಸರಸ್ವತಿ. ಅಲಹಾಬಾದ್ ಬಳಿ ಇರುವ ಪ್ರಯಾಗದಲ್ಲಿ ಗಂಗಾ ಯಮುನಾಗಳ ಸಂಗಮದೆಡೆಯಲ್ಲಿ ಅಜ್ಞಾತವಾಗಿ ಸರಸ್ವತಿ ಎಂಬ ನದಿಯೊಂದು ಬಂದು ಸೇರಿ ಆ ಕೂಡುದಾಣವನ್ನು ತ್ರಿವೇಣೀ ಸಂಗಮ ಎಂದೆನಿಸಿದೆ. ಆ ಸರಸ್ವತಿ ಮತ್ತೊಂದು. ಹೀಗೆ ಸರಸ್ವತಿ ಎಂಬ ಹೆಸರಿನ ಅನೇಕ

ನದಿಗಳಿವೆ. ದೃಶದ್ವತಿಯೂ ಅಷ್ಟೆ. ಇದು ಘಗ್ಗರ್ ಅಥವಾ ಚಿತ್ತಾಂಗ್‌ಗಳಿರ ಬಹುದು ಎಂಬ ಊಹೆಗಳಿವೆ. ಇವು ಬರಿ ಊಹೆಗಳು ಮಾತ್ರ.

ಅನಾದಿ ಕಾಲದಿಂದಲೂ ಬ್ರಹ್ಮಾವರ್ತ ಬ್ರಾಹ್ಮಣರ ಆವಾಸಸ್ಥಾನವಾಗಿತ್ತು. ಸರಸ್ವತಿ ಮತ್ತು ದೃಶದ್ವತಿ ತೀರದ ಮಧ್ಯಭಾಗವೇ ಬ್ರಹ್ಮಾವರ್ತ ಎಂದು ಮನು ಸ್ಮೃತಿ ಹೇಳುತ್ತದೆ.[2] ಇದನ್ನು ಕುರುಕ್ಷೇತ್ರ ಎಂಬುದಾಗಿಯೂ ಕರೆಯುತ್ತಿದ್ದರು. ಇದು ಇಂದಿನ ಹರಿಯಾಣ. ಇಲ್ಲಿ ಸರಸ್ವತೀ ನದಿಯು ಹರಿಯುತ್ತಿತ್ತು. ಆ ನದಿಯ ತೀರದ ಪ್ರದೇಶದಲ್ಲಿ ಇದ್ದವರು ಸಾರಸ್ವತರು ಎಂದಾದರು. ಸಾಮಾನ್ಯ ವಾಗಿ ನದಿಯ ತೀರದ ಪ್ರದೇಶಗಳಿಗೆ ಆ ನದಿಯ ಹೆಸರು ಬರುವುದು ವಾಡಿಕೆ. ಉದಾಹರಣೆಗೆ ಯಮುನಾ ನದಿಯ ತೀರ ಯಾಮುನಾ: ಮಹಿ ನದಿಯ ತೀರ ಮಾಹೇಯ: ಸರಸ್ವತೀ ನದಿಯ ತೀರ ಸಾರಸ್ವತ. ಹೀಗೆ ಸರಸ್ವತೀ ನದಿಯ ಉಗಮ ದಿಂದ ಹಿಡಿದು ವಿನಶನತೀರ್ಥದ ವರೆಗಿನ ಭೂಪ್ರದೇಶವನ್ನು ಸಾರಸ್ವತ ದೇಶ ಎಂದು ಮಹಾಭಾರತದ ಶಲ್ಯ ಪರ್ವದ 38ನೇ ಅಧ್ಯಾಯದ 3ನೆಯ ಶ್ಲೋಕದಲ್ಲಿ ಹೇಳಿದೆ.[3] ಸರಸ್ವತೀ ನದಿ ಮತ್ತು ಸಾರಸ್ವತರ ಮಹಿಮೆ ಮಹಾಭಾರತದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಬಣ್ಣಿತವಾಗಿದೆ. 'ವನ ಪರ್ವ'ದ 129ನೇ ಅಧ್ಯಾಯದ 20–22ನೆಯ ಶ್ಲೋಕಗಳಲ್ಲಿ ಲೋಮಶ ಮಹರ್ಷಿಯು ಧರ್ಮರಾಯನಿಗೆ ಸರಸ್ವತೀ ನದಿಯ ಮಹಿಮೆಯನ್ನು, ಸಾರಸ್ವತರು ಮಾಡಿದ ಯಜ್ಞಾದಿ ವಿಷಯಗಳನ್ನು ಹೇಳು ತ್ತಾನೆ.[4] "ಎಲೈ ಧರ್ಮರಾಜನೇ. ಈ ಸರಸ್ವತೀ ನದಿಯಲ್ಲಿ ಸ್ನಾನ ಮಾಡುವುದರಿಂದ ನೀನು ಪಾಪದಿಂದ ಮುಕ್ತನಾಗುವೆ. ಈ ಸ್ಥಳದಲ್ಲಿ ಹಿಂದೆ ನಾರದರು ರಾಜ ರ್ಷಿಗಳೂ ಮಹರ್ಷಿಗಳೂ ಆದ ಸಾರಸ್ವತ ಬ್ರಾಹ್ಮಣರಿಂದ ಅನೇಕ ಯಜ್ಞಾದಿ ಗಳನ್ನು ಮಾಡಿಸಿರುವರು" ಎಂದು ಹೇಳಿದೆ.

ಸರಸ್ವತಿಯು ತನ್ನ ಉಗಮಸ್ಥಾನದಿಂದ ಹೊರಗೆ ಹರಿದು ಬರುವಲ್ಲಿ ಹರಿಯು ವಾಗ ಏಳು ಕವಲಾಗಿ ಒಡೆದು ರಜಪೂತಾನದ ಮರಳುಗಾಡಿನಲ್ಲಿ ಗುಪ್ತಗಾಮಿನಿಯಾಗು ತ್ತಾಳೆ. ಈ ಸ್ಥಳಕ್ಕೆ 'ವಿನಶನತೀರ್ಥ' ಎಂದು ಕರೆಯುತ್ತಾರೆ. ಈ ರೀತಿ ಸರಸ್ವತಿಯು ಏಳು ಕವಲಾಗಿ ಹರಿದ ಪ್ರದೇಶವನ್ನು ಸಪ್ತ ಸಾರಸ್ವತ ಎಂದು ಕರೆಯುತ್ತಾರೆ. ಇದನ್ನು ಮಹಾಭಾರತವು — ಸುಪ್ರಭಾ, ಕಾಂಚನಾಕ್ಷಿ, ವಿಶಾಲಾ, ಮನೋರಮಾ, ಓಘವತಿ, ಸುರೇಣು, ವಿಮಲೋದಕಾ — ಎಂಬ ಹೆಸರುಗಳಿಂದ ಕರೆದಿದೆ. ಇಂತಹ ಸರಸ್ವತೀ ನದಿ ತೀರದ ಬ್ರಾಹ್ಮಣರನ್ನು ಸಾರಸ್ವತ ಬ್ರಾಹ್ಮಣರು ಎಂದು ಸಂಬೋಧಿಸುತ್ತಾರೆ. ಆದ್ದರಿಂದ ಸಾರಸ್ವತ ಒಂದು ಪ್ರದೇಶವಾಚಿ ಶಬ್ದ ಎಂಬುದು ಒಂದು ಮತ.

ಸಾರಸ್ವತ ಎಂಬುದು ಪ್ರದೇಶವಾಚಿ; ಅಲ್ಲ ವ್ಯಕ್ತಿವಾಚಿ ಶಬ್ದವೆಂದು ಕೆಲವರು ಹೇಳುತ್ತಾರೆ. ಈ ಹೇಳಿಕೆಗೆ ಮಹಾಭಾರತದ ಶಲ್ಯ ಪರ್ವದ ಸಾರಸ್ವತಾಖ್ಯಾನ ಮೂಲ ಆಧಾರ.[5] ಆ ಆಖ್ಯಾನದ ಪ್ರಕಾರ, ಇದರ ಮೂಲ ವಂಶಸ್ಥ ಭೃಗು. ಇವನು ಬ್ರಹ್ಮನ ಮಾನಸ ಪುತ್ರ. ಇವನ ಮಗ ಚ್ಯವನ. ಚ್ಯವನನ ಮಗ ದಧೀಚಿ. ದಧೀಚಿಯ ಪತ್ನಿ ವಡವಾ ಪ್ರಾತಿಥೇಯಿ. ಇವರಿಗೆ ಇಬ್ಬರು ಮಕ್ಕಳು–ಪಿಪ್ಪಲ ಮತ್ತು ಸಾರಸ್ವತ. ಇವರು ಬದುಕು ಮಾಡುವ ಸಂದರ್ಭದಲ್ಲಿ ಒಮ್ಮೆ ದೇಶದಲ್ಲಿ ಹನ್ನೆರಡು ವರ್ಷಗಳ ಕಾಲ ಕ್ಷಾಮ ಆವರಿಸಿಕೊಂಡಿತ್ತಂತೆ. ಸಾರಸ್ವತನೆಂಬ ಒಬ್ಬನೇ ಒಬ್ಬ ದೈವಾಂಶ ಸಂಭೂತನ ಹೊರತು ಅಲ್ಲಿದ್ದ ಎಲ್ಲಾ ಶ್ರೋತ್ರೀಯರೂ ಮೃತರಾದರಂತೆ. ಆ ಭೀಕರ ಕ್ಷಾಮದಲ್ಲೂ ವೇದಗಳನ್ನು ಉಳಿಸಲೋಸುಗ ಮೀನುಗಳನ್ನು ತಿಂದು ಕೊಂಡೇ ಪ್ರಾಣ ಉಳಿಸಿಕೊಂಡಿದ್ದ ಸಾರಸ್ವತ ಋಷಿಯು ಬರ ಹರಿದ ಮೇಲೆ ರಾಜ್ಯದಲ್ಲಿ ಸುಭಿಕ್ಷ ಸ್ಥಿತಿ ನೆಲೆಗೊಂಡ ಮೇಲೆ 60,000 ಜನ ಶಿಷ್ಯರಿಗೆ ವೇದ ಶಾಸ್ತ್ರ ಮೊದಲಾದ ಧಾರ್ಮಿಕ ಸಂಸ್ಕಾರಗಳನ್ನು ಬೋಧಿಸಿದನಂತೆ. ಇದನ್ನು ಸ್ಕಾಂದ ಪುರಾಣ ಮತ್ತು ಸೂತ ಸಂಹಿತೆ ಅನುಮೋದಿಸುತ್ತವೆ. ಆದರೆ ಶಲ್ಯ ಪರ್ವದ ವಿವರವೇ ಬೇರೆ. ದಧೀಚಿ ಮಹರ್ಷಿಯ ತಪಸ್ಸು ಕೆಡಿಸಲು ದೇವೇಂದ್ರ ಅಪ್ಸರೆಯರನ್ನು ಕಳುಹಿಸಿದನಂತೆ. ನರ್ತಿಸುತ್ತಾ ಬಂದ ಅಪ್ಸರೆಯ ಸೌಂದರ್ಯಕ್ಕೆ ಬೆರಗಾದ ದಧೀಚಿ ಕಾಮೋದ್ರಿಕ್ತನಾದನಂತೆ. ಸ್ಖಲನಗೊಂಡ ಅವನ ವೀರ್ಯ ಸರಸ್ವತೀ ನದಿಯಲ್ಲಿ ಬಿದ್ದು, ಅದರಿಂದ ಸರಸ್ವತೀ ಗರ್ಭಧರಿಸಿ ಶಿಶುವೊಂದಕ್ಕೆ ಜನ್ಮ ಕೊಟ್ಟಳಂತೆ. ಆ ಶಿಶುವನ್ನು ಅವಳು ದಧೀಚಿ ಮುನಿಯ ಬಳಿ ತಂದು ವಿಷಯ ತಿಳಿಸಿದಾಗ ಋಷಿಯು ಆನಂದದಿಂದ ಆ ಶಿಶು ತನ್ನದೆಂದೂ ತನ್ನ ಔರಸಪುತ್ರನೆಂದೂ ಒಪ್ಪಿ ಸರಸ್ವತೀಯನ್ನು ಆಶೀರ್ವದಿಸಿದನಂತೆ. ಅನಂತರ ದಿವ್ಯ ದಾರ್ಶನಿಕನಾದ ದಧೀಚಿ ಭವಿಷ್ಯತ್ತಿನಲ್ಲಿ ಪ್ರಾಪ್ತವಾಗುವ ಹನ್ನೆರಡು ವರ್ಷಗಳ ಕಾಲದ ಕ್ಷಾಮವನ್ನು ಸರಸ್ವತಿಗೆ ತಿಳಿಸಿ ಆ ಶಿಶುವನ್ನು ಎಲ್ಲಾದರೂ ಜೋಪಾನ ಮಾಡುವಂತೆ ಹೇಳಿ ಅವರನ್ನು ಅನುಗ್ರಹಿಸಿದನಂತೆ. ಹೆತ್ತು ಹೊತ್ತು ಬೆಳೆಸಿದ ಸರಸ್ವತಿಯ ಪುತ್ರ ಸಾರಸ್ವತನಾದನಂತಲೂ, ಅವನ ಪೀಳಿಗೆಯವರು ಸಾರಸ್ವತರೆಂದು ಕರೆಯಲ್ಪಟ್ಟರೆಂದೂ ತಿಳಿಯುತ್ತದೆ. ಈ ಸಾರಸ್ವತ ಋಷಿ ಋಗ್ವೇದದ VII ನೇ ಅಧ್ಯಾಯದಲ್ಲಿ ಬರುವ 'ಸಾರಸ್ವತ' ಆಗಿರಬಹುದೆಂಬ ಊಹೆ ಇದೆ. ಏನೇ ಇರಲಿ, ಸರಸ್ವತೀ ನದಿಯಾಗಿರಲಿ ಮನುಷ್ಯನೇ ಇರಲಿ, ಒಟ್ಟಿನಲ್ಲಿ ಸರಸ್ವತಿ ಶಬ್ದದಿಂದ ಸಾರಸ್ವತ ನಿರ್ಮಾಣ ಆಗಿದೆ ಎಂದು ಹೇಳಬಹುದು.

### ಗೌಡ ಹೇಗೆ ಬಂತು?

ಸಾರಸ್ವತರ ಮೂಲ ನೆಲೆ ಪಂಜಾಬ ಪ್ರಾಂತ. ಅಲ್ಲಿಂದ ಇವರು ವಲಸೆ ಹೊರಟು ಇಂದ್ರಪ್ರಸ್ಥ, ಮಥುರಾ, ಪ್ರಯಾಗ (ಅಲಹಾಬಾದ್), ಬನಾರಸ್ (ಕಾಶಿ),

ಸಿಂಧ್, ರಜಪುತಾನ ಮೊದಲಾದೆಡೆಗಳಲ್ಲಿ ಬಂದು ಸೇರಿದರು. ಕೆಲವರು 'ಗೌಡ ದೇಶ' ವೆಂದು ಕರೆಯಲ್ಪಟ್ಟ ಗಂಗಾ ಯಮುನಾ ನದಿಬಯಲಿನಲ್ಲಿ ನೆಲಸಿದರು.

ಜನಸಂಖ್ಯೆ ಹೆಚ್ಚಿದಂತೆಲ್ಲಾ ವಲಸೆ ಹೋಗುವ ವ್ಯವಸ್ಥೆ ಸ್ವಾಭಾವಿಕ ತಾನೇ ? ಅದರಂತೆಯೇ ಪಾವನ ಗಂಗೆಯಾದ ಸರಸ್ವತೀ ತೀರದಲ್ಲಿದ್ದ ಆರ್ಯರು ಪೂರ್ವ ಬಂಗಾಳ ದೆಡೆಗೆ ಹರಿದು ತ್ರಿಹೋತ್ರಪುರ (ಮಿಥಿಲೆಯಲ್ಲಿರುವ ಆಧುನಿಕ ತಿರಹಟ್) ಮೊದಲಾ ದೆಡೆಗಳಲ್ಲಿ ಹೋಗಿ ನೆಲೆಸಿದರು. ಬಂಗಾಳದ ಕೇಂದ್ರ ಪ್ರದೇಶದ ಪ್ರಾಚೀನ ಹೆಸರು 'ಗೌಡ' ಎಂದಿದ್ದಿತು. ಹಾಗಾಗಿ ಅಲ್ಲಿಗೆ ವಲಸೆ ಬಂದು ನೆಲೆಸಿರುವವರು ಗೌಡ ಸಾರಸ್ವತ ಬ್ರಾಹ್ಮಣರು ಎಂದಾಯಿತು. ಧಾರ್ಮಿಕವಾಗಿ ವೈದಿಕ ಧರ್ಮದಲ್ಲಿರುವ ಶೈವ, ವೈಷ್ಣವ, ಶಾಕ್ತ, ಗಾಣಪತ, ಸೌರ ಎಂಬ ಪಂಚ ಪ್ರಭೇದಗಳಲ್ಲಿ ಗೌಡ ಒಂದು.[6]

ಈ ಸಾರಸ್ವತ ಪುರೋಹಿತ ಬ್ರಾಹ್ಮಣರು ತಾವು ನೆಲೆ ನಿಂತ ಕಡೆಗಳಲ್ಲಿ ಅಲ್ಲಿದ್ದ ಸ್ಥಳೀಯ ಜನರ ಹೆಣ್ಣುಗಳನ್ನು ಲಗ್ನವಾಗಿ ತಮ್ಮ ಕುಲದ ಕುಡಿಯನ್ನು ದಾಂಗುಡಿ ಇಡಿಸಿದರು. ಅದರಿಂದಾಗಿ ಅವರು ಬ್ರಾಹ್ಮಣ ಕುಲದಲ್ಲಿ ಒಂದು ಪ್ರತ್ಯೇಕ ವರ್ಗ ವಾಗಿಯೇ ಉಳಿದರು.[7] ಗೌಡದೇಶದಲ್ಲಿ ಬದುಕು ಮಾಡಿದ ಸಾರಸ್ವತರಾದ್ದರಿಂದ— ಗೌಡ ಸಾರಸ್ವತ ಎಂದು ಕರೆದರು. 'ಗುಡ' ಎಂಬ ಶಬ್ದದಿಂದ ಗೌಡ ನಿಷ್ಪನ್ನ ವಾಗಿದೆ. ಅರ್ಥಾತ್ 'ಬೆಲ್ಲ' ಎಂದು. ಬಂಗಾಳದ ವಿಸ್ತಾರವಾದ ನದೀ ಪ್ರದೇಶದಲ್ಲಿ ಕಬ್ಬು ಬೆಳೆದು ಬೆಲ್ಲ ತಯಾರಿಸುತ್ತಿದ್ದರು. ಹಾಗಾಗಿ ಗುಡ (ಬೆಲ್ಲ) ವನ್ನು ತಯಾರಿ ಸುತ್ತಿದ್ದ ದೇಶ — ಗೌಡದೇಶ, ಮೂಲ ಸಾರಸ್ವತ ಜನಾಂಗದಿಂದ ಪ್ರತ್ಯೇಕಗೊಂಡು ಗೌಡದೇಶದಲ್ಲಿ ನೆಲೆನಿಂತವರಾದ್ದರಿಂದ ಇವರು ಗೌಡ ಸಾರಸ್ವತರು ಎಂದಾದರು. ಹೀಗೆ ಕೊಂಕಣ ದೇಶಗಳಲ್ಲಿ ಹೋಗಿ ನೆಲೆಸಿದವರು ಕೊಂಕಣಿ ಸಾರಸ್ವತರು ಎಂದಾದರು. ಇವರನ್ನು ಕೊಂಕಣಿ ಬ್ರಾಹ್ಮಣರು ಎಂದು ಕರೆಯುವುದು ರೂಢಿ. ಸಾರಸ್ವತರು ಪರಿಮಿತ ಸಂಖ್ಯೆಯಲ್ಲಿದ್ದರೂ ಭಾರತಾದ್ಯಂತ ಹಂಚಿ ಹೋಗಿದ್ದಾರೆ. ಕಾಶ್ಮೀರದಲ್ಲಿ ಪಂಡಿತರೆಂದು ಪ್ರಸಿದ್ಧರಾದ ಕಾಶ್ಮೀರಿ ಬ್ರಾಹ್ಮಣರು ಮೂಲತಃ ಸಾರಸ್ವತ ಸಮಾಜಕ್ಕೆ ಸೇರಿದವರು. ಪಂಡಿತ್ ಜವಾಹರಲಾಲ್ ನೆಹರೂರವರ ಈ ಪಂಡಿತ್ ಮನೆತನ ಸಾರಸ್ವತ ಮನೆತನ. ಇವರೇ ಕಾಶ್ಮೀರದಿಂದ ಅಲಹಾಬಾದ್‌ಗೆ ವಲಸೆ ಬಂದ ವರ್ಗ. ಇದೇ ರೀತಿ ಕಲ್ಕತ್ತೆಯಲ್ಲಿ ಮಧ್ಯಪ್ರದೇಶದಲ್ಲಿ ಭಾರತದ ಪಶ್ಚಿಮ ತೀರ ಪ್ರದೇಶದಲ್ಲಿ ಮುಖ್ಯವಾಗಿ ಗೋವೆ. ಮಹಾರಾಷ್ಟ್ರ, ಕರ್ನಾಟಕ ಮೊದಲಾದೆಡೆಗಳಲ್ಲಿ ಈ ಜನಾಂಗ ವ್ಯಾಪಕವಾಗಿ ಸಿಗುತ್ತದೆ.

ಸಪ್ತ ಕೊಂಕಣಗಳಲ್ಲಿ ಒಂದು — ಇಂದಿನ ಗೋಮಾಂತಕ ಅಥವಾ ಗೋವೆ ಪ್ರಾಂತ. ಸಪ್ತ ಕೊಂಕಣ ಸೃಷ್ಟಿಗೆ ಪೌರಾಣಿಕ ಕತೆಯೊಂದು ಹೀಗೆ ಹೇಳುತ್ತದೆ.[8]

ಸ್ಕಾಂದ ಪುರಾಣದ ಸಹ್ಯಾದ್ರಿ ಖಂಡದಲ್ಲಿ ಈ ಕಥೆ ಉಲ್ಲೇಖಿತವಾಗಿದೆ. ಕ್ಷತ್ರಿಯರನ್ನು 21 ಬಾರಿ ಸಂಹರಿಸಿದ ಪರಶುರಾಮನು ಅವರ ನೆಲವನ್ನೆಲ್ಲ ಆಕ್ರಮಿಸಿಕೊಳ್ಳುತ್ತಾನೆ. ತನ್ನ ವಾಸಕ್ಕೆ ಯಾವ ಕ್ಷೇತ್ರವೂ ಉಳಿಯದುದರಿಂದ ಪಶ್ಚಿಮ ಭಾಗದ ಅಧಿದೇವತೆಯಾದ ವರುಣದೇವನೊಡನೆ, ಸಹ್ಯಾದ್ರಿಯ ಮೇಲೆ ನಿಂತು ಎಸೆಯಲಿರುವ ಬಾಣವು ಆಕ್ರಮಿಸುವಷ್ಟು ನೀರನ್ನು ಬರಿದು ಮಾಡಿ ಆ ಪ್ರದೇಶವನ್ನು ತನಗೆ ಕೊಡಬೇಕೆಂದು ಪ್ರಾರ್ಥಿಸುತ್ತಾನೆ. ಪರಶುರಾಮನ ಕೇಳಿಕೆಯನ್ನು ವರುಣದೇವ ಮನ್ನಿಸಿ ಪಶ್ಚಿಮ ಭಾಗದ ತನ್ನ ಸಾಗರವನ್ನು ಭೂಭಾಗವಾಗಿ ಬಿಟ್ಟುಕೊಡುತ್ತಾನೆ. ಹೀಗೆ ಠಾಣಾದಲ್ಲಿನ ವೈತರಿಣೀ ನದಿಯಿಂದ ಕನ್ಯಾಕುಮಾರಿಯವರೆಗಿನ ಇಡೀ ಕರಾವಳಿ ಪ್ರದೇಶ ಸೃಷ್ಟಿಸಲ್ಪಟ್ಟಿತು. ಇದೇ '**ಪರಶುರಾಮ ಕ್ಷೇತ್ರ**' ಎಂದು ಪುರಾಣ ಪ್ರಸಿದ್ಧವಾಗಿದೆ. ಈ ಪರಶುರಾಮ ಸೃಷ್ಟಿಯ ನಡುವಣ ಜಾಗವನ್ನು ಗೋಮಾಂತಕ ಎನ್ನುವರು. ಅವತಾರ ಪುರುಷರಲ್ಲಿ ಒಬ್ಬನಾದ ಪರಶುರಾಮನು ಹತ್ತು ಜನ ಪಂಚ ಗೌಡ ಶ್ರೋತ್ರೀಯರನ್ನು ತ್ರಿಹೋತ್ರಪುರ (ಇಂದಿನ ಉತ್ತರ ಪ್ರದೇಶದ, ಚಂಪಾರಣ್ಯ ದರ್ಭಾಂಗ ಮುರತ್ತರ್‌ಪುರ ಸಾರಂಗ ಜಿಲ್ಲೆಗಳು) ದಿಂದ ಗೋವೆಗೆ ಕರೆತಂದು ಬಿಟ್ಟನು. ಅವರ ಗೋತ್ರಗಳು ಇವು–ಭರದ್ವಾಜ, ಕೌಶಿಕ, ವತ್ಸ, ಕೌಂಡಿನ್ಯ, ಕಶ್ಯಪ, ವಶಿಷ್ಟ, ಜಮದಗ್ನಿ, ವಿಶ್ವಾಮಿತ್ರ, ಗೌತಮ ಮತ್ತು ಅತ್ರಿ. ಇವರನ್ನು ಕರೆತಂದ ಉದ್ದೇಶ ಶ್ರಾದ್ಧ ಯಜ್ಞ ಮತ್ತು ಭೋಜನ. ಅನಂತರ ಇವರು ಮಠಗ್ರಾಮ (ಮಡ್‌ಗಾಂವ್) ಕುಶಸ್ಥಾಲಿ (ಕಡುಥಾಲಿ) ಕರ್ದಾಲಿ (ಕೇಲೋಶಿ) ಗಳಲ್ಲಿ ಹರಡಿಕೊಂಡರು.[9]

ಹೀಗೆ ಗೋವೆ ಪ್ರದೇಶದಲ್ಲಿ ನೆಲೆನಿಂತ ಗೌಡ ಸಾರಸ್ವತರಿಗೆ ಪರಶುರಾಮನೇ ಮೂಲ ಪುರುಷ. ಆತನು ಗೌಡ ದೇಶದಿಂದ 96 ಕುಟುಂಬಗಳನ್ನು ಕರೆತಂದು ಬಿಟ್ಟ. ಇವರನ್ನು 'ಶಾಣೊವೆ' ಎಂದು ಕರೆದರು. ಅರ್ಥಾತ್ ಜಾಣರು ಎಂದು. ಶಣ್ಣವತಿ ಎಂಬ ಸಂಸ್ಕೃತ ಪದದಿಂದ ಬಂದ ಶಬ್ದ ಇದು. ಇವರೇ ಶೆಣೈಗಳು ಎಂದಾದರು. ಇವರಲ್ಲಿ ಮಾಂಡೋವಿ ನದಿಯ ಒಂದು ಭಾಗದಲ್ಲಿ ಮೂವತ್ತು ಕುಟುಂಬದವರನ್ನೂ ನದಿಯ ಮತ್ತೊಂದು ಭಾಗದಲ್ಲಿ ಅರವತ್ತಾರು ಕುಟುಂಬದವರನ್ನೂ ಇರಿಸಿದರು. ಈ ಮೂವತ್ತು ಕುಟುಂಬದವರನ್ನು ತೀಸ್ವಾಡಿಯವರೆಂದೂ, ಅರವತ್ತಾರು ಕುಟುಂಬದವರನ್ನು ಷಷ್ಟಿಯವರೆಂದು ಕರೆಯುತ್ತಾರೆ. ಈ ತೀಸ್ವಾಡಿಯವರು ಕಾಶಿಮಠ ಪರಂಪರೆಗೆ ಸೇರಿದವರು. ಉಳಿದ ಅರುವತ್ತಾರು ಕುಟುಂಬದವರು ವಿಷ್ಣು ಉಪಾಸಕರಾಗಿ ಮಾಧ್ವರೆನಿಸಿದರು. ಇವರಲ್ಲಿ ಐದು ಕುಟುಂಬಗಳು ಮೂಲ 'ಶಾಣ್ಣವಿ' ಯಿಂದ ಪ್ರತ್ಯೇಕಗೊಂಡುವು. ಮೂಲ ಸಾರಸ್ವತ ಸ್ವರೂಪವನ್ನೇ ಉಳಿಸಿಕೊಂಡ ಇವರನ್ನು '**ಶೆಣ್ಯಾ ಪಾಂಚರು**' ಎನ್ನುತ್ತಾರೆ, ಇಂದಿಗೂ ಕಾಯ್ಕಿಣಿ, ಗುಲ್ವಾಡಿ, ಕಾರ್ನಾಡ್, ಪಡುಕೋಣೆ ಮೊದಲಾದ ಊರ ಹೆಸರುಗಳನ್ನು ಉಪಸರ್ಗವಾಗಿ

ಪಡೆದವರು ಈ ಶೆಣ್ವಿ ಪಾಂಚರು. ಇವರೇ ಮೂಲ ಅಥವಾ ಶುದ್ಧ ಸಾರಸ್ವತರು. ಶೈವೋಪಾಸಕರು. ಇವರು ಚಿತ್ರಾಪುರ ಮಠಗಳಿಗೆ ನಡೆದುಕೊಳ್ಳುತ್ತಾರೆ.

ಪುರಾಣಗಳ ಪರಿಕಲ್ಪನೆಯ ಜೊತೆಯಲ್ಲಿ ನಾವು ಇತಿಹಾಸ ಶೋಧಕರ ಅಭಿಪ್ರಾಯಗಳನ್ನೂ ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಮುಖ್ಯವಾಗಿ ಕನ್ನಡ ನಾಡಿನ ಪ್ರಸಿದ್ಧ ವಿದ್ವಾಂಸರಾದ ರಾಷ್ಟ್ರಕವಿ ಗೋವಿಂದ ಪೈ ಅವರು ಗೌಡ ಸಾರಸ್ವತ ಸಮಾಜಕ್ಕೆ ನಂಟು ಹಾಕಿದಂತೆ ಬರೆದಿರುವ 1. ಸಾರಸ್ವತ ಮಾತಾ (ಕೊಂಕಣಿ)[10] 2. ನಮ್ಮ ಹಿರಿಯರನ್ನು ಕುರಿತು (ಕನ್ನಡ)[11] ಮತ್ತು ವಾಮನ ಮಂಗೇಶ ದುಭಾಷಿಯವರು 'ಸಾರಸ್ವತ್ ಕೊಲನಿ ಇನ್ ದ ಡೆಕ್ಕನ್'[12] ಎಂಬ ಕೃತಿಗಳನ್ನು ಹೆಸರಿಸಬಹುದು. ಗೋವಿಂದ ಪೈ ಅವರ ಪ್ರಕಾರ ಸಾರಸ್ವತರು ಮೂಲತಃ ಪಂಜಾಬಿನ ಸರಸ್ವತೀ ನದಿ ತೀರದವರು. ಹಿಮಾಲಯದಿಂದ ಹರಿದು ಬರುತ್ತಿದ್ದ ಸರಸ್ವತಿ ನದಿಯಿಂದಾಗಿ ಇಂದಿನ ಪಂಜಾಬಿಗೆ ಹಿಂದೆ ಸಾರಸ್ವತದೇಶ ಎಂಬ ಹೆಸರಿದ್ದಿತು. ಆ ದೇಶವಾಸಿಗಳು ಅನಂತರ ಬಿಹಾರದ ತಿರ್ಹೂತ್ ಪ್ರದೇಶದಲ್ಲಿ ನೆಲೆನಿಂತರು. ಪರಶುರಾಮನು ಸಪ್ತ ಕೊಂಕಣವನ್ನು ನಿರ್ಮಿಸಿ ಅವುಗಳಲ್ಲಿ ಒಂದಾದ ಇಂದಿನ ಗೋವಾ ಪ್ರಾಂತಕ್ಕೆ ತಿರ್ಹೂತ್ ಪ್ರದೇಶದ ಈ ಸಾರಸ್ವತ ಬ್ರಾಹ್ಮಣರನ್ನು ಕರೆತಂದಾಗ ಇವರು ಮೂಲತಃ ಶಿವೋಪಾಸಕರಾಗಿದ್ದರು. ಆದರೆ ಮಧ್ಯಕಾಲದಲ್ಲಿ ಮಧ್ವಾಚಾರ್ಯರ ಪ್ರಭಾವದಿಂದಾಗಿ ದ್ವೈತಿಗಳಾದರು. ಅನಂತರ ಪೋರ್ಚುಗೀಸರ ದಾಳಾಕ್ರಮಣ ಸಂದರ್ಭದಲ್ಲಿ ಈ ಕೊಂಕಣಿ ಬ್ರಾಹ್ಮಣರು ಗೋವೆಯಿಂದ ಹೊರಬಂದು ಕರ್ನಾಟಕದ ಉತ್ತರ ಕನ್ನಡ ಜಿಲ್ಲೆ. ದಕ್ಷಿಣ ಕನ್ನಡ ಜಿಲ್ಲೆ. ಮಹಾರಾಷ್ಟ್ರದ ಠಾಣಾ. ರತ್ನಗಿರಿ ಜಿಲ್ಲೆಗಳಲ್ಲೂ ನೆಲೆ ನಿಂತರು.

ಠಾಣಾ ಜಿಲ್ಲೆಯಲ್ಲಿ ಕ್ರಿ.ಶ. 810 ರಿಂದ 1260ರ ವರೆಗೆ ರಾಜ್ಯವಾಳಿದ ಶಿಲಾಹಾರ ವಂಶದ ಅರಸೊತ್ತಿಗೆಯೊಂದಿಗೆ ಮಂತ್ರಿಗಳಾಗಿದ್ದ ಅನಂತ ನಾಯಕ. ಪ್ರಭಾಕರ ನಾಯಕ. ಅನಂತಪ್ಪೈ ಪ್ರಭು. ಲಕ್ಷ್ಮಣ ಪ್ರಭು ಮೊದಲಾದ ಸಾರಸ್ವತರ ಹೆಸರು ಆ ಕಾಲದ ಶಾಸನಗಳಲ್ಲಿ ದೊರೆಯುತ್ತವೆ. 17ನೆಯ ಶತಮಾನದಲ್ಲಿ ಕೆಳದಿಯ ಶಿವಪ್ಪನಾಯಕನ (1645-1660) ಆಸ್ಥಾನದಲ್ಲಿ ನಾರಾಯಣ ಮಲ್ಯ ಎಂಬಾತ ಇದ್ದನೆಂದು ಕೆಳದಿಯ ಅರಸರ ದಾಖಲೆಗಳು ಸ್ಪಷ್ಟಪಡಿಸಿವೆ.

ಕ್ರಿ.ಶ. 1560ರಲ್ಲಿ ಪೋರ್ಚುಗೀಸರು ಗೋಮಾಂತಕದ ಸಾರಸ್ವತ ಬ್ರಾಹ್ಮಣರ ಮೇಲೆ ಧರ್ಮ ಪರಿವರ್ತನದ ಬಲಾತ್ಕಾರ ಹೊರಿಸಿದಾಗ ಧರ್ಮನಿಷ್ಠರಾದ ಈ ಬ್ರಾಹ್ಮಣರು ಸ್ವಧರ್ಮ ರಕ್ಷಣೆಗಾಗಿ ತಮ್ಮ ಸ್ಥಿರ ಚರ ಆಸ್ತಿಗಳನ್ನೆಲ್ಲಾ ಬಿಟ್ಟು ಪಶ್ಚಿಮ ಕರಾವಳಿಗೆ ಬರುತ್ತಾರೆ. ಈ ಭಾಗ ಪೋರ್ಚುಗೀಸರ ಅಂಕೆಯಲ್ಲಿ ಇರಲಿಲ್ಲ. ಈ ಹೊಸ

ಪ್ರದೇಶವು. ಅವರು ತಮ್ಮ ನೆಲೆಯನ್ನು ಸ್ಥಿರಪಡಿಸಿ ಕನ್ನಡ, ತುಳು, ಮಲಯಾಳಿ ಮೊದಲಾದ ಸ್ಥಳೀಯ ಭಾಷೆಯನ್ನು ತಮ್ಮದನ್ನಾಗಿಸುತ್ತಾರೆ. ಆದರ ಈ ಪ್ರದೇಶಕ್ಕೆ ಬಂದ ಮೊದಲನೆಯ ತಂಡವೇ ಇವರದಾಗಿರಲಿಲ್ಲ. 1293ಕ್ಕೂ ಮೊದಲು ಮಂಜೇಶ್ವರದಲ್ಲಿನ ದೇವಾಲಯ ಒಂದು ಗೌಡ ಸಾರಸ್ವತ ಬ್ರಾಹ್ಮಣರ ಅಂಕೆಯಲ್ಲಿತ್ತು. ಹಾಗಾಗಿ ಈ ಹೊಸ ತಂಡಕ್ಕೂ ಮೊದಲು ಅಲ್ಲಿ ಗೌಡ ಸಾರಸ್ವತ ಬ್ರಾಹ್ಮಣರ ವಸತಿ ಮೊದಲೇ ಇತ್ತು ಎನ್ನುವುದು ನಿರ್ವಿವಾದ.

ವಾಮನ ಮಂಗೇಶಿ ದುಬಾಶಿಯವರು – ಸಾರಸ್ವತರನ್ನು ಪರಶುರಾಮನು ಕರೆತಂದನೆಂಬುದನ್ನು ಒಪ್ಪುವುದಿಲ್ಲ. ಹತ್ತು ಗೋತ್ರಗಳ ಇವರನ್ನು ಪಂಚಗೌಡರು ಎಂದೇ ಕರೆಯಬೇಕು. 'ಗೌಡ' ಎಂದು ಕರೆಯಬಾರದು. ಈ ಗೌಡ ಎಂಬ ಉಪಸರ್ಗ ಸಾರಸ್ವತರ ಜೊತೆ ಸೇರಿದ್ದು ಹನ್ನೊಂದನೆಯ ಶತಮಾನದಿಂದ ಈಚೆಗೆ ಎಂದು ಅಭಿಪ್ರಾಯಪಡುತ್ತಾರೆ.

ನಾವು ಪ್ರಸಕ್ತ ಹೇಳಿರುವ ಸಾರಸ್ವತ ಒಂದು ಸಮಾಜ ಎಂಬುದು ಸ್ಪಷ್ಟ. ವಿದ್ವಾಂಸರ ಅಭಿಮತದಂತೆ ಈ ಮೂರು ರೂಪಗಳು ಇದರಿಂದ ಕಾಣಿಸುತ್ತವೆ.

1. ಮೂಲ ಸಾರಸ್ವತ.
2. ಗೌಡ ಸಾರಸ್ವತ.
3. ಪಂಚ ಗೌಡ ಸಾರಸ್ವತ.

ಬಹುಶ ಪಂಜಾಬ್ ನದಿ ಬಯಲಿನಲ್ಲಿ ಬದುಕು ಸಾಗಿಸಿದ ಮೂಲ ನಿವಾಸಿ ಬ್ರಾಹ್ಮಣರು – ಮೂಲ ಸಾರಸ್ವತರು. ಗಂಗಾಯಮುನಾ ನದಿ ಬಯಲಿನ ಗೌಡ ದೇಶದಲ್ಲಿದ್ದವರು – ಗೌಡ ಸಾರಸ್ವತರು. ಅನಂತರ ಗೋವೆ ಮೊದಲಾದ ಪ್ರಾಂತಗಳಲ್ಲಿ ನೆಲೆನಿಂತವರು–ಪಂಚಗೌಡ ಸಾರಸ್ವತರು ಎಂದಾಗಿರಬಹುದು. ಪಂಜಾಬ್ ಪ್ರಾಂತದ ಮೂಲ ಸಾರಸ್ವತರು ಕಾಶ್ಮೀರಕ್ಕೆ ಹೋಗಿ ಕಾಶ್ಮೀರಿ ಬ್ರಾಹ್ಮಣರಾಗಿದ್ದಾರೆ. ದ್ವಾರಕೆಗೆ ಹೋದವರು ದೊರ್ಕೆಗಳು ಎಂದಾದರು. ಹೀಗೆ ಕಾಶ್ಮೀರಿ, ಗೌಡ, ಪಂಚಗೌಡ ಎಂಬ ಶಾಖೆಗಳು ಗೌಡ ಸಾರಸ್ವತರಲ್ಲಿ ಮೂಡಿರುವ ಸಾಧ್ಯತೆಗಳಿವೆ.

ಮೂಲ ಸಾರಸ್ವತರು ಭಾರತದ ವಿವಿಧ ಪ್ರದೇಶಗಳಿಗೆ ಒಂದೇ ಯುಗದಲ್ಲಿ ಒಟ್ಟಿಗೆ ವಲಸೆ ಹೋದವರಲ್ಲ. ಎಸ್ ಎಸ್. ತಾಳ್ಕರ ಅವರು ಅಭಿಪ್ರಾಯ ಪಡುವಂತೆ ತಂಡ ತಂಡವಾಗಿ, ಕಾಲಕಾಲಕ್ಕೆ ಹೋಗಿ ನೆಲೆಸಿರಬಹುದು. ಅವರ ಪ್ರಕಾರ ಮೊದಲನೆಯ ತಂಡ ಕ್ರಿ.ಪೂ. ಮೂರನೆಯ ಶತಮಾನ, ಎರಡನೆಯ ತಂಡ ಕ್ರಿ.ಶ. ಆರನೆಯ ಶತಮಾನ; ಮೂರನೆಯ ಹಾಗೂ ಕೊನೆಯ ತಂಡ ಕ್ರಿ.ಶ. ಹನ್ನೊಂದನೆಯ ಶತಮಾನದಲ್ಲಿ ವಲಸೆ ಬಂದವರು.[18]

ಮಹಾಭಾರತದ ಶಲ್ಯ ಪರ್ವದ ಉಲ್ಲೇಖದ ಪ್ರಕಾರ ಮೊತ್ತ ಮೊದಲ ಸಾರಸ್ವತ ಬ್ರಾಹ್ಮಣರ ತಂಡ ನೈಋತ್ಯ ದಿಕ್ಕಿನಿಂದ ದ್ವಾರಕೆಗೆ ಬಂದಿತು. ಅಲ್ಲಿ ಅದು ತನ್ನ ಬದುಕು ಪ್ರಾರಂಭಿಸಿತು. ಈ ಪ್ರದೇಶವನ್ನು ಸಾರಸ್ವತ ತೀರ್ಥ ಎಂದು ಕರೆಯುವರು. ಈ ಸಾರಸ್ವತ ಬ್ರಾಹ್ಮಣರು ಅಲ್ಲಿ ನೆಲೆ ನಿಂತುದರಿಂದಲೇ ಕಾಠೇವಾಡಕ್ಕೆ ಸಾರಸ್ವತ ಪುರ ಎಂಬ ಹೆಸರು ಬಂದಿದೆ.

ಉತ್ತರ ದಿಕ್ಕಿಗೆ ವಲಸೆ ಹೋದ ಸಾರಸ್ವತ ಬ್ರಾಹ್ಮಣರ ಎರಡನೆಯ ತಂಡ ಪಂಜಾಬಿನಿಂದ ಹೊರಟು ಕಾಶ್ಮೀರ ಸೇರಿತು. ಕಾಶ್ಮೀರದ ಇತಿಹಾಸದಲ್ಲಿ ಬರುವ ಬ್ರಾಹ್ಮಣರೆಲ್ಲ ಈ ಸಾರಸ್ವತರೇ ಎನ್ನುವುದನ್ನು ದಂಡಿ, ಅಭಿನವಗುಪ್ತರ ಕೃತಿಗಳು ಸಮರ್ಥಿಸುತ್ತವೆ.

ಪೂರ್ವದೆಸೆಗೆ ಪಯಣಿಸಿದ ಸಾರಸ್ವತ ಬ್ರಾಹ್ಮಣರ ಮೂರನೆಯ ತಂಡ ಬಿಹಾರಿನಲ್ಲಿ ಬೀಡುಬಿಟ್ಟು ಅದೇ ಸಮಯಕ್ಕೆ ದಕ್ಷಿಣ ಭಾರತಕ್ಕೂ ಹೊರಟು ಬಂದಿತು.

ದಿ. ಗೋವಿಂದ ಪೈ ಅವರ ಪ್ರಕಾರ – 'ತ್ರಿಹೋತ್ರಪುರದಿಂದ ಗೋಮಾಂತಕದ ವರೆಗೆ ದಾರಿಯುದ್ದಕ್ಕೂ ಬಹಳ ಹಿಂದೆ ನೆಲೆಸಿದ್ದ ಈ ಸಾರಸ್ವತರ ಬೀಡುಗಳು ಈಗಲೂ ಅವಶೇಷವಾಗಿ ಕಾಣಸಿಗುತ್ತವೆ. ತ್ರಿಹೋತ್ರಪುರದಿಂದ ಗೋವೆಗೆ ಬಂದವರು ಸಾರಸ್ವತ ಬ್ರಾಹ್ಮಣರಲ್ಲದೆ ಬೇರೆ ಅಲ್ಲ' ಎಂಬುದಾಗಿದೆ. ಪೈಯವರು–ಗೋಮಾಂತಕದ ವಿರೂಪಾಕ್ಷನೆಂಬ ಸಾರಸ್ವತ ಬ್ರಾಹ್ಮಣನೊಬ್ಬ ತೀರ್ಥಯಾತ್ರಾಟನೆಗೆ ದಕ್ಷಿಣ ಮಾರ್ಗವಾಗಿ ಪಶ್ಚಿಮ ತೀರದಲ್ಲಿದ್ದ ಮುಲ್ಕಿ, ಪಾವಂಜೆ, ಕದಲಿವನ. (ಮಂಗಳೂರಿನ ಕದ್ರಿ ಇರಬಹುದೇ ?) ನೇತ್ರಾವತಿಯನ್ನು ದಾಟಿ ರುದ್ರಪಾದಕ್ಕೆ ಅಂದರೆ ಈಗಿನ ಸೋಮೇಶ್ವರಕ್ಕೆ ಬಂದ ಎಂದೂ ಹೇಳುತ್ತಾರೆ. ಇದು ಕ್ರಿ.ಶ. ಮೂರನೆಯ ಶತಮಾನದ ಟೋಲೆಮಿಯ ಕಾಲಕ್ಕೂ ಹಿಂದೆಯಾದ್ದರಿಂದ ಸಾರಸ್ವತ ಬ್ರಾಹ್ಮಣರು ಕ್ರಿಸ್ತಪೂರ್ವದಲ್ಲೇ ಅಲ್ಲಿಗೆ ಹೋಗಿ ನೆಲೆಸಿರಬೇಕು ಎಂದು ಕಾಲನಿರ್ಣಯ ಮಾಡುತ್ತಾರೆ.[14]

**ಪ್ರಭೇದಗಳು :**

ಸಾರಸ್ವತರಲ್ಲಿ ಶೆಣ್ವೈ, ಶಸಷ್ಟಿ, ಮತ್ತು ಬರದೇಶಕರ್ ಎಂಬ ಪ್ರಮುಖ ಪ್ರಭೇದಗಳಿವೆ. ಇವರು ಕರ್ನಾಟಕದ ಕಾರವಾರ, ಅಂಕೋಲಾ ಮೊದಲಾದ ಕರಾವಳಿ ಪ್ರದೇಶಗಳಲ್ಲಿ ಹಳಿಯಾಳ್, ಸಿರ್ಸಿ, ಶಹಾಪುರ, ಬೆಳಗಾವಿ, ಬಂಕಾಪುರ, ಗದಗ, ಹುಬ್ಬಳ್ಳಿ, ನವಿಲುಗುಂದ ಮೊದಲಾದೆಡೆಗಳಲ್ಲಿ ವ್ಯಾಪಕವಾಗಿದ್ದಾರೆ. ಅವರದ್ದು ವತ್ಸ, ಕೌಂಡಿನ್ಯ ಮತ್ತು ಕೌಶಿಕ ಗೋತ್ರ. ಶಸಷ್ಟಿಕಾರರು ವಿಷ್ಣು ಆರಾಧಕರು. ಇವರು ಉತ್ತರ ಹಾಗೂ ದಕ್ಷಿಣ ಕಾರವಾರದಲ್ಲಿ ಪಟ್ಟುವಾಗಿದ್ದಾರೆ. ಶೆಣ್ವೈಗಳೂ, ಶಸಷ್ಟಿಕಾರರೂ ಪರಸ್ಪರ ಹೆಣ್ಣು ತರುವ ಕೊಡುವ ಬಾಂಧವ್ಯ ಇಟ್ಟುಕೊಂಡಿದ್ದಾರೆ.[15]

ಶಶಸ್ತಿಕಾರರಂತೆ, ಬರದೇಶಕರರು ದೊಡ್ಡ ವಣಿಕರು. ಇವರು ಸಾವಂತವಾಡಿಯಿಂದ ಕರ್ನಾಟಕಕ್ಕೆ ಬಂದು ಇಲ್ಲಿನ ಶೆಣೈಗಳೊಂದಿಗೆ ರಕ್ತ ಸಂಬಂಧ ಬೆಳೆಸಿ ಇಲ್ಲಿಯೇ ನೆಲೆಸಿದರು. ಇವರು ಶಾಂತೇರಿ ಕಾಮಾಕ್ಷಿಯ ಉಪಾಸಕರು (ಶಾಂತಾ ದುರ್ಗಾ). ಶೆಣೈ–ಶಶಸ್ತಿ–ಬರದೇಶಕರರಂತೆ ಪಡ್ನೇಕರ್, ಲಾಡ್ಡಿಕರ್ ಹಾಗೂ ನರವಣೆಗಳು ಗೌಡ ಸಾರಸ್ವತ ಸಮಾಜದ ಶಾಖೆಗಳು.

ಸಾರಸ್ವತರಲ್ಲಿ ಒಳ ಪಂಗಡಗಳು ಹೆಚ್ಚುತ್ತಾ ಹೋದಂತೆ ಮೊದಲು ಸಾರಸ್ವತ ಬ್ರಾಹ್ಮಣನಾಗಿದ್ದವ ಗೌಡ ಸಾರಸ್ವತನಾದ. ಆಮೇಲೆ ಪಡ್ನೇಕರ್, ಬಾರ್ದೇಸ್ ಕಾರ್, ಭಾಲಾವಲಿಕಾರ್ ಮುಂತಾದ ಕೊಂಕಣ ದೇಶದ ಹೆಸರನ್ನಿಟ್ಟುಕೊಂಡು ಆಯಾಯಾ ದೇಶೀಯರೆಂದು ಗುರುತಿಸಲು ಪ್ರಾರಂಭವಾಯಿತು – ಎಂದು ಭದ್ರಗಿರಿ ಅಚ್ಯುತದಾಸರು ಅಭಿಪ್ರಾಯಪಡುತ್ತಾರೆ.16 ಅಂದರೆ ಐತಿಹಾಸಿಕವಾಗಿ ಅವರು ಎಲ್ಲೆಲ್ಲಿ ಹೋಗಿ ನೆಲೆನಿಂತರೋ ಆಯಾಯಾ ದೇಶವಾಚಕ ಶಬ್ದಗಳಿಂದಲೇ ಅವರು ತಮ್ಮನ್ನು ಗುರುತಿಸಿಕೊಳ್ಳತೊಡಗಿದರು.

### ಉಪನಾಮಗಳು

ಗೌಡ ಸಾರಸ್ವತ ಪುರುಷರಿಗೆ ಹಲವು ಉಪನಾಮಗಳಿವೆ. ಶೆಣೈ, ಕುಡ್ವಾ, ಕಾಮತ್, ಡಾಂಗೆ, ನಾಯಕ್, ಬಾಳಿಗಾ, ಭಂಡಾರಿ, ಕಿಣಿ, ಪ್ರಭು, ಪಡಿಯಾರ್ ಇವೇ ಮೊದಲಾದ ಉಪಸರ್ಗಗಳು ಹೆಸರುಗಳ ಮುಂದೆ ಬಂದು ಸೇರಿರುವುದುಂಟು. ಇವು ಅವರವರ ವೃತ್ತಿ, ಅಧಿಕಾರ ಮೊದಲಾದುವುಗಳನ್ನು ಸೂಚಿಸುತ್ತವೆ.

ಶೆಣೈ ಅಂದರೆ ಉಪಾಧ್ಯಾಯ. ಶೆಣ್ವಿಗಳೇ–ಶೆಣಾವಯಿ–ಶೆಣೈ ಎಂದಾಗಿದೆ.

ಕಾಮತ್ ಎಂಬವನು ಜಮೀನ್ದಾರ: ಅಥವಾ ಕೃಷಿಕ.

ಕರ್ಮಾಂತ—ಕಮತಃ—ಕಾಮತ್,

ಕುಡ್ವ ಎಂಬುದು ತುಳು ಭಾಷೆಯಿಂದ ಬಂದ ಪದ. 'ಕೂಡುವೆರೆ' ಅಂದರೆ ಒಂದೆಡೆ ಕೂಡಿಸುವುದು ಎಂದರ್ಥ. ಈತ ರಾಜ್ಯದಲ್ಲಿನ ಕಾಳು ಸಂಗ್ರಾಹಕ.

ಡಾಂಗೆ ಅಂದರೆ ಕಂದಾಯ ವಸೂಲುಗಾರ. ಆಳಿದ ರಾಜರ ಬೊಕ್ಕಸಕ್ಕೆ ಸಲ್ಲಬೇಕಾಗಿದ್ದ ಕಂದಾಯ ವಸೂಲು ಮಾಡುವಾತ.

ಸೇನಾಧಿಕಾರಿಯಾಗಿದ್ದಾತ ನಾಯಕ್ ಎಂದು ಕರೆಯಲ್ಪಟ್ಟ. ರಾಜ್ಯದ ಸೇನೆಯ ಉಸ್ತುವಾರಿಯನ್ನು ನೋಡಿಕೊಳ್ಳುವ ಮಿಲಿಟರಿ ಅಧಿಕಾರಿ ಈತ.

ಸುಪುಷ್ಟ ದೇಹಿಯಾದ ಸೈನಿಕ ಮಾತ್ರವಲ್ಲ ರಾಜ್ಯರಕ್ಷಕ ಎನಿಸಲ್ಪಟ್ಟವ ಬಾಳಿಗಾ.

ಕೋಶ ರಕ್ಷಕ ಭಂಡಾರಿ ಎಂದೂ, ಕೋಶಾಧಿಕಾರಿ ಕಿಣಿ ಎಂದೂ ಉಪಸರ್ಗ ಪಡೆದರು.

ತಾಲೂಕು ಅಧಿಕಾರಿಗಳನ್ನು ಮಲ್ಯ ಎಂದು ಕರೆದರು.

ಗ್ರಾಮಾಧ್ಯಕ್ಷರು ಪ್ರಭುಗಳು ಎಂದಾದರು.

ದೈವದಲ್ಲೂ, ಗುರುಗಳಲ್ಲೂ ಅನನ್ಯ ಭಕ್ತಿ ತೋರಿಸಿದಾತ ಧಾರ್ಮಿಕ ವ್ಯಕ್ತಿ ಭಕ್ತ ಎಂದೂ, ವಿದ್ಯಾದಾನ ನೀಡುವಾತ, ಅಧ್ಯಾಪಕ ಶೆಣೈ ಎಂದೂ ಕರೆಯಲ್ಪಟ್ಟರು.

ಗೋವಿಂದ ಪೈ ಅವರ ಪ್ರಕಾರ 'ಪೈ' ಎನ್ನುವ ಉಪನಾಮ ನಾಲ್ಕನೆಯ ಶತಮಾನದಲ್ಲೇ ಅಸ್ತಿತ್ವದಲ್ಲಿತ್ತು. ಅಂದರೆ ಕನ್ನಡ ರಾಜರ ಗೋವೆ ಆಳ್ವಿಕೆಯ ಪೂರ್ವದಲ್ಲಿ ಎಂದಾಯಿತು. ಪೈ ಶಬ್ದವು 'ಪಾಯಿ' ಎಂಬ ಶಬ್ದದಿಂದ ನಿಷ್ಪನ್ನಗೊಂಡ ಪದ. ಅದರ ಅರ್ಥ ಯಜ್ಞವನ್ನು ಆಚರಿಸುವವರು ಎಂದು. ಇಂದಿಗೂ ಉಳಿದು ಬಂದ ವಾಜಪೇಯಿ ಹೆಸರು ಇದಕ್ಕೆ ಸಾಕ್ಷಿ. ಪೈ ಉಪನಾಮ ಮೂಲತಃ ಎಲ್ಲಾ ಸಾರಸ್ವತ ಗಂಡಸರಿಗೂ, ಬಾಯಿ ಉಪನಾಮ ಎಲ್ಲಾ ಸಾರಸ್ವತ ಹೆಂಗಸರಿಗೂ ಮರ್ಯಾದೆ ಪೂರ್ವಕವಾಗಿ ಸಂಬೋಧಿಸಲು ಬಳಸುತ್ತಿದ್ದರು.

—❀—

ಸಿದ್ಧಾಂತಗಳು ಬೆಳಕಿಗೆ ಬಂದವು. ಹೀಗೆ ಮಧ್ವಾಚಾರ್ಯರ ಪ್ರಭಾವದಿಂದ ಕೆಲವರು ಸಾರಸ್ವತರು, ಮಾಧ್ವಮತವನ್ನು ಹಮ್ಮಿಕೊಳ್ಳುವಂತಾಯಿತು.

ಹದಿನಾಲ್ಕನೆಯ ಶತಮಾನದ ಪ್ರಾರಂಭದಲ್ಲಿ ದ್ವೈತ ತತ್ವದ ಪ್ರಚಾರಕರಾಗಿ ಮಧ್ವಾಚಾರ್ಯರು ಗೋಮಾಂತಕಕ್ಕೂ ಬರುತ್ತಾರೆ. ಅವರು ತಮ್ಮ ಪ್ರಭಾವದಿಂದ ಅನೇಕ ಮಂದಿ ಸಾರಸ್ವತ ಬ್ರಾಹ್ಮಣರನ್ನು ಅದ್ವೈತ ಮತದಿಂದ ದ್ವೈತ ಮತಕ್ಕೆ ಸೇರಿಸಿಕೊಳ್ಳುತ್ತಾರೆ. ಮತಾಂತರಗೊಳ್ಳದ ಗೌಡ ಸಾರಸ್ವತರು ಕಟ್ಟಾ ಅದ್ವೈತಿಗಳಾಗಿ ಉಳಿಯುತ್ತಾರೆ ಮಾತ್ರವಲ್ಲ ತಾವು ಮಾಧ್ವ ಮತಕ್ಕೆ ಎಂದೂ ಸೇರಲಾರೆವು ಎನ್ನುವ ಪ್ರತಿಜ್ಞೆ ಸ್ವೀಕರಿಸುತ್ತಾರೆ. ಹೀಗಾಗಿ ಮಧ್ವಾಚಾರ್ಯರ ಕಾಲದಲ್ಲೀ ಗೋಮಾಂತಕದಲ್ಲಿನ ಸಾರಸ್ವತ ಬ್ರಾಹ್ಮಣ ಸಮಾಜವು ದ್ವೈತ ಮತಾವಲಂಬಿ ಹಾಗೂ ಅದ್ವೈತ ಮತಾವಲಂಬಿ ಎರಡು ವಿಭಾಗಗಳಾಗುತ್ತದೆ. ಈ ದ್ವೈತ ಮತದವರು ಶ್ರೀ ಮಧ್ವಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಉತ್ತರಾದಿ ಮಠಗಳಿಗೂ, ಅದ್ವೈತ ಮತದವರು ತಮ್ಮ ಹಿಂದಿನ ಶ್ರೀ ಕೈವಲ್ಯ ಮಠಗಳಿಗೂ ನಡೆದುಕೊಂಡರು.

ಮತಾಂತರಗೊಂಡ ಸಾರಸ್ವತರು ದ್ವೈತ ಸಿದ್ಧಾಂತವನ್ನು ಅಂಗೀಕರಿಸಿ ವೈಷ್ಣವ ಪಂಥವನ್ನು ಸ್ವೀಕರಿಸಿದರೂ. ತಾವು ಹಿಂದಿನಿಂದಲೂ ಆರಾಧಿಸುತ್ತಾ ಬಂದ ತಮ್ಮ ಶೈವ–ಶಾಕ್ತ ಕುಲದೇವತೆಗಳನ್ನು ತೊರೆಯಲಿಲ್ಲ. ತಮ್ಮ ಹೊಸ ದೇವರೊಂದಿಗೆ ಹಳೆಯ ದೇವರನ್ನು ಸೇರಿಸಿಕೊಂಡರು. ಹಾಗಾಗಿ ಇವರು ಪೂಜಿಸುವ ದೇವರು ಇಂದಿಗೂ ಒಂದು ಶೈವ, ಒಂದು ವೈಷ್ಣವ. ಉದಾ : ದೇವಕೀ ಕೃಷ್ಣ–ರವಳನಾಥ; ಶಾಂತೇರಿ–ಕಾಮಾಕ್ಷಿ; ದಾಮೋದರ–ಮಹಾಲಕ್ಷ್ಮಿ ಇತ್ಯಾದಿ.

ಗೌಡ ಸಾರಸ್ವತರ ಗುರುಗಳು–ಶ್ರೀ ಮಧ್ವಾಚಾರ್ಯರ ವೈಷ್ಣವ ಪಂಥದ ಅನುಯಾಯಿಗಳು. ಜಗರಕ್ಷಕ ಮಹಾವಿಷ್ಣುವಿನ ಉಪಾಸಕರು. ಇವರ ಜೀವನ ಧ್ಯೇಯ ಪರಮಾನುಗ್ರಹ ಸಾಧನೆ. ಈ ಸಾಧನೆಗೆ ಭಕ್ತಿಯೊಂದೇ ದಾರಿ. ಧಾರ್ಮಿಕ ಚಿಂತನೆಗಳಿಂದ ಹಾಗೂ ಸನ್ನಡತೆಯಿಂದ ಇಂತಹ ಭಕ್ತಿ ಪಥದಲ್ಲಿ ಸಾಗುವುದೇ ಸಂಸ್ಕಾರ. ಇದಕ್ಕೆ ಮನಸ್ಸು, ಬುದ್ಧಿಗಳು ಕಲುಷಿತವಾಗದಂತೆ ನೋಡಿಕೊಳ್ಳಬೇಕು. ಧರ್ಮವನ್ನು ಹೊರದೂಡಿಸಿದ ಜನಕ್ಕೆ ಶ್ರೇಯಸ್ಸಿಲ್ಲ. ಮನೋಮಾನಸ ಹದವಿಲ್ಲದ ಜೀವನ ಶ್ರೇಯಸ್ಕರವಾಗುವುದಾದರೂ ಹೇಗೆ? ಅದಕ್ಕೊಂದು ದಾರಿ– ಸತ್ಸಂಗ ಭಕ್ತಾದಿಗಳು ದೇವರುಗಳ ಮಹಾತ್ಮ್ಯೆಗಳನ್ನೂ, ದಾಸವಾಣಿಗಳನ್ನೂ, ಪುರಾಣ ಕಥಾಪಠಣಗಳನ್ನೂ ಮಾಡಬೇಕಾಗುತ್ತದೆ. ಈ ಕಥೆಗಳ ಸಾರತಾತ್ಪರ್ಯಗಳನ್ನು ಮನನ ಮಾಡಿಕೊಂಡು ಅವುಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಜೀವನದ ಪರಮೋಚ್ಚ ಧ್ಯೇಯವಾಗಿ ಭಕ್ತಿ. ಭಕ್ತಿಯಿಂದ ಜ್ಞಾನ. ಜ್ಞಾನದಿಂದ ಮೋಕ್ಷ–

ಎಲ್ಲಾ ಪಂಥಗಳಿಗೆ ಮೂಲ ಭಕ್ತಿ. ಅದೇ ದೈವವನ್ನು ತಲುಪಲು ಸುಲಭದ ಹಾದಿ.

ಭಕ್ತಿಯನ್ನುಳಿದ ಮೋಕ್ಷ ಸಾಧಕವಾದ ಎರಡು ಮಾರ್ಗಗಳೆಂದರೆ ಒಂದು ಜ್ಞಾನ, ಮತ್ತೊಂದು ಕರ್ಮ. ಅಂದರೆ ಭಕ್ತಿ, ಜ್ಞಾನ, ಕರ್ಮ–ಇವು ಮೂರು ಮುಕ್ತಿಯ ಮಹಾಫಲ ಪ್ರಾಪ್ತಿಗೆ ಸಮೆದಿಟ್ಟ ಸೋಪಾನಗಳು. ಅದ್ವೈತ ಹೆಚ್ಚಾಗಿ ಕರ್ಮ ಮಾರ್ಗವನ್ನು ಅನುಸರಿಸಿದರೆ, ದ್ವೈತ ಭಕ್ತಿಯನ್ನು ವಿಶೇಷವಾಗಿ ಒಲಿಯಿತು. ದ್ವೈತದಲ್ಲಿ ಜೀವ ಬೇರೆ ದೇವ ಬೇರೆ ಎಂಬ ಭಾವನೆ ಇದೆ. ಅದ್ವೈತದಂತೆ ಜೀವ ತಾನೇ ದೇವನಾಗುವುದು ಸಾಧ್ಯವಿಲ್ಲ. ಅದು ದೇವನ ಸಾನ್ನಿಧ್ಯ. ಸಾಮೀಪ್ಯ ಪಡೆಯಬಲ್ಲುದೇ ಹೊರತು ತಾನೇ ಆದಾಗುವ ಅರ್ಹತೆ ಪಡೆದಿಲ್ಲ. 'ಅಹಂ ಬ್ರಹ್ಮಾಸ್ಮಿ' ಎಂಬ ಅದ್ವೈತ ದರ್ಶನ ಅದ್ವೈತಕ್ಕೇ ಹೊರತು ದ್ವೈತಕ್ಕಲ್ಲ. ಇಂತಹ ದ್ವೈತ ಭಾವನೆ ವಿಶ್ವದಲ್ಲಿ ಸಹಜವಾಗಿಯೇ ಇದ್ದದ್ದು. ಹಗಲು–ಇರುಳು, ಹೆಣ್ಣು–ಗಂಡು, ದ್ಯಾವಾ-ಪೃಥ್ವಿ, ಎಡ–ಬಲ ಇವು ಸಹಜ. ಇದೇ ರೀತಿ ಅಧ್ಯಾತ್ಮ ಪ್ರಪಂಚದಲ್ಲಿ ಜೀವ ಮತ್ತು ದೇವ. ಈ ದ್ವಂದ್ವವೇ ಮೋಕ್ಷದ ಶ್ರೇಷ್ಠ ಸಾಧನ ಮಾರ್ಗ. ಮಾಧ್ವ ಪಂಥದ ಈ ದರ್ಶನವನ್ನು ಗೌಡ ಸಾರಸ್ವತ ಧರ್ಮ ದೃಢೀಕರಿಸುತ್ತದೆ.

ಆದ್ದರಿಂದ ಗೌಡ ಸಾರಸ್ವತರದ್ದು ದ್ವೈತ ಸಿದ್ಧಾಂತ. ಮಧ್ವಾಚಾರ್ಯರ ತತ್ವಗಳಿಗೆ ಶರಣು ಬಂದ ಪಥ ಅವರದ್ದು. ಜೀವ ಬೇರೆ ದೇವ ಬೇರೆ ತತ್ವ. ಜೀವನಕ್ಕೆ ಸಂಬಂಧಿಸಿದ ತತ್ವ ಹಾಗೂ ದೈವಕ್ಕೆ ಸಂಬಂಧಿಸಿದ ತತ್ವಗಳು ಬೇರೆ ಬೇರೆ ಭಕ್ತಿ ಪಥವೇ ಜೀವನ ಧ್ಯೇಯವಾಗಬೇಕು, ಮಾರ್ಗದರ್ಶಿಯಾಗಬೇಕು. ಈ ದರ್ಶನದಿಂದಲೇ ಆತ್ಮವಿಕಾಸವಾಗುವುದು. ಆತ್ಮ ಶ್ರೇಯಸ್ಕರವಾಗಿಸುವ ಈ ಧರ್ಮ ದರ್ಶನ ಸ್ವರೂಪಕ್ಕೆ ಮನಸ್ಸು ಮುಖ್ಯ. ಮನಸಾ ವಾಚಾ ಕರ್ಮಣಾ ಅಹಿಂಸೆಯನ್ನು ಆಚರಿಸಬೇಕಾಗುವುದು. ಮನಸ್ಸಿನಿಂದ ಲೋಭ ಮಾತ್ಸರ್ಯ ದೂರವಿರಿಸಲು ದಯೆ, ನಿರ್ಮಲ ಪ್ರೀತಿ, ದಾನ, ಪರೋಪಕಾರ ಮೊದಲಾದ ಸಾತ್ವಿಕ ಗುಣಗಳನ್ನು ಬೆಳಸಿಕೊಳ್ಳಬೇಕಾಗುತ್ತದೆ.

ಧರ್ಮವೆಂದರೆ ಜೀವನದ ಒಂದು ಮಾರ್ಗ. ಮನುಸ್ಮೃತಿಯ ಪ್ರಕಾರ ಧರ್ಮಕ್ಕೆ ಹತ್ತು ಪ್ರಧಾನ ಗುಣಗಳಿವೆ.

## ಧರ್ಮದರ್ಶನ :

**ಧೈರ್ಯ :**

'ಧೈರ್ಯಂ ಸರ್ವತ್ರ ಸಾಧನಂ' ಎಂದಂತೆ ಧೈರ್ಯವೇ ಜೀವನದಲ್ಲಿ ಗೆಲುವನ್ನು ಸಾಧಿಸಲು ಸಹಕಾರಿ. ಇದನ್ನು ಬೆಳೆಸಿಕೊಳ್ಳಬೇಕು. ಈ ಧೈರ್ಯ ನೈತಿಕತೆಯಿಂದ ಕೂಡಿರಬೇಕು.

ಕ್ಷಮಾಶೀಲತೆ :

ತಪ್ಪು ಮಾಡುವುದು ಮನುಷ್ಯ ಸಹಜ ದೌರ್ಬಲ್ಯ. ಈ ದೌರ್ಬಲ್ಯವನ್ನೇ ಮಹತ್ತರವೆಂದು ಪರಿಗಣಿಸದೆ ಕ್ಷಮೆಯನ್ನು ತೋರುವುದನ್ನು ಧರ್ಮ ಬೋಧಿಸುತ್ತದೆ. ಇಲ್ಲಿ ತಪ್ಪು ಎನ್ನುವುದನ್ನು ವ್ಯಾಪಕಾರ್ಥದಲ್ಲಿ ಬಳಸಬೇಕು. ನಮ್ಮ ತಪ್ಪುಗಳನ್ನು ಪರಮಾತ್ಮನು ಕ್ಷಮಿಸುವಂತೆ, ಸಹಜರನ ತಪ್ಪನ್ನು ನಾವು ಮನ್ನಿಸಲೇಬೇಕು.

ಮನೋನಿಗ್ರಹ : ಮಾನವನ ಮನಸ್ಸು ಅತಿ ಚಂಚಲ. ಸ್ಥಾಯೀಭಾವ, ಸಂಚಾರಿ ಭಾವಗಳ ಆಗರವದು. ಇಂತಹ ಮನಸ್ಸನ್ನು ನಿಗ್ರಹಿಸಿಕೊಂಡು ಆತ ತನ್ನ ಶ್ರೇಯಸ್ಸು, ಸಮಾಜದ ಶ್ರೇಯಸ್ಸು, ದೇಶದ ಶ್ರೇಯಸ್ಸು ಇವೆಲ್ಲವನ್ನು ಗಣನೆಯಲ್ಲಿಟ್ಟುಕೊಂಡು ತನ್ನ ನಡತೆಯನ್ನು ನಿಗ್ರಹಿಸಬೇಕು.

ತೃಪ್ತಿ :

ಧರ್ಮದಲ್ಲಿ ತೃಪ್ತಿಯ ಸ್ಥಾನ ಹಿರಿದು. ಪಾಲಿಗೆ ಬಂದದ್ದನ್ನು ತನ್ನದು ಎಂದು ಸ್ವೀಕರಿಸಿ ಅನ್ಯರ ಸಂಪತ್ತಿಗೆ ಆಸಿಸದೆ ಇರುವುದು, ತನಗೆ ಇಷ್ಟೇ ಪ್ರಾಪ್ತಿ ಎಂದು ಮನಗಂಡು ಜೀವನ ಸಾಗಿಸುವುದು ಧರ್ಮ ಹೇಳುವ ನೀತಿ. ಅತಿಯಾಸೆಯನ್ನು ಧರ್ಮ ಎಂದೂ ಸಹಿಸದು.

ಶುಚಿತ್ವ :

ಇಲ್ಲಿ ಶುಚಿತ್ವ ಎಂಬುದು ದೇಹಕ್ಕೆ ಮಾತ್ರವಲ್ಲ ಮನಸ್ಸಿಗೂ ಸಂಬಂಧಪಟ್ಟಿದ್ದು. ನಮ್ಮ ಶರೀರ, ಮನೆ, ವಾತಾವರಣ, ಮನಸ್ಸು ಎಲ್ಲವೂ ಶುಚಿರ್ಭೂತವಾಗಿರಬೇಕು. ಭಕ್ತಿಯ ಪಾತ್ರವೇ ಇಲ್ಲಿ ಪ್ರಧಾನ. ಜಪತಪಗಳಿಂದ ಮನಸ್ಸನ್ನು ನಿರ್ಮಲವಾಗಿಡಬಹುದು. ಪರಿಶುದ್ಧ ಮನಸ್ಸು ಎಂದಿಗೂ ಕಲುಷಿತ ಭಾವನೆಗಳಿಗೆ ಎಡೆಮಾಡಿಕೊಡದು.

ಬುದ್ಧಿಯ ವಿಕಾಸಕ್ಕೆ ಪ್ರಧಾನ ಕಾರಣ–ಪಠಣ. ಸತ್ಸಂಗದ. ಧಾರ್ಮಿಕ ಮಹಂತರ ಜೀವನ ಚರಿತ್ರೆ, ಭಗವದ್ಗೀತೆ, ರಾಮಾಯಣ, ಮಹಾಭಾರತಗಳು ಜೀವನದ ಶ್ರೇಷ್ಠ ಮೌಲ್ಯಗಳನ್ನು ಗೌರವಿಸಲು ಕಲಿಸುತ್ತವೆ. ಇಲ್ಲಿ ಜೀವನದ ಮೌಲ್ಯಗಳನ್ನು ಎರಡಾಗಿ ವಿಂಗಡಿಸಬಹುದು : ಆಧ್ಯಾತ್ಮಿಕ–ಮತ್ತು ಲೌಕಿಕ ಎಂದು.

ಯೋಗ್ಯನಿಗೆ ನೀಡುವ ದಾನ, ಧರ್ಮ, ಪರೋಪಕಾರ ಇವು ನೀಡುವ ಸುಖ–ಲೌಕಿಕ ಸುಖ. ತ್ಯಾಗ ಬಲಿದಾನಗಳಿಂದ ದೊರಕುವ ಸುಖವೂ ಇದೇ ತೆರನದು. ಈ ಐಹಿಕ ಸುಖವು ಯಾವುದೇ ಆಧ್ಯಾತ್ಮಿಕ ಸುಖಕ್ಕಿಂತ ಕೀಳೇನೂ ಅಲ್ಲ. ಉದಾಹರಣೆಗೆ–ದಿವಂಗತ ಮಾಧವ ಪೈಯವರು ಬೋಳು ಗುಡ್ಡವಾಗಿದ್ದ ಮಣಿಪಾಲವನ್ನು ಬೆಳೆಯುವ ನಗರಿಯಾಗಿ, ವಿದ್ಯಾಕೇಂದ್ರವಾಗಿ, ರೋಗಿಗಳಿಗೆ ಸಕಲ ಸವಲತ್ತುಗಳನ್ನು ನೀಡುವ ಶುಶ್ರೂಷಾಲಯಗಳ ತಾಣವಾಗಿ ಮಾರ್ಪಡಿಸಿದರು. ಇಹ

ವಲ್ಲಿದ್ದುಕೊಂಡೇ ಪ್ರಾಪಂಚಿಕವಾಗಿ ನೀಡಿದ ಸೇವೆ ಅದು. ಅದು ನೀಡುವ ತೃಪ್ತಿ ಅಧ್ಯಾತ್ಮ ಜೀವನದಲ್ಲಿ ಸಿಗುವ ತೃಪ್ತಿಯಷ್ಟೇ ತೂಗಬಲ್ಲದು. ಇಲ್ಲಿರಬೇಕಾದ್ದು ಮುಖ್ಯವಾಗಿ ಸಹಬಾಳ್ವೆಯ ಪರಿಪೆ. ಎಲ್ಲರೂ ಸರ್ವಸಂಗಪರಿತ್ಯಾಗಿಗಳಾಗಿ ಅಧ್ಯಾತ್ಮವನ್ನು ಸ್ವೀಕರಿಸಿದರೆ ಜಗತ್ತು ನಡೆಯಲಾರದು. ಧರ್ಮ, ಅರ್ಥ, ಕಾಮ, ಮೋಕ್ಷಗಳಿಂದ ಪುರುಷಾರ್ಥ ಸಾಧಿಸಿಕೊಳ್ಳುವುದೂ ಇನ್ನೊಂದು ವಿಧ.

ನಮ್ಮ ಧಾರ್ಮಿಕ ವಿಚಾರಗಳ ಪ್ರಕಾರ ಪಂಚೇಂದ್ರಿಯ, ಪಂಚಭೂತ, ಜೀವಾತ್ಮ, ಅಹಂಕಾರ, ಮನಸ್ಸು ಇವುಗಳೆಲ್ಲವನ್ನೂ ನಿಗ್ರಹಿಸುವ ಮನಃಷ್ಯಾತೀತ ಶಕ್ತಿಯೊಂದು ನಮ್ಮಲ್ಲಿದೆ. ಪ್ರತಿಯೊಬ್ಬ ಮಾನವನ ವೈಯಕ್ತಿಕ ಕರ್ಮ ಫಲಗಳಿಗನುಗುಣವಾಗಿ ಆತನ ಪ್ರಾರಬ್ಧ ಆತನನ್ನು ಬಾಧಿಸುತ್ತದೆ. ಪೂಜಾ ಪುರಸ್ಕಾರ ವಿಧಿಗಳಿಂದ ಷಡ್ವೈರಿಗಳನ್ನು ಅಂಕೆಯಲ್ಲಿಟ್ಟುಕೊಂಡು ಅಧ್ಯಾತ್ಮ ಜೀವನದ ಸುಖವನ್ನು ಸ್ವಲ್ಪವಾದರೂ ಪಡೆಯಬಹುದು.

ನಮ್ಮ ಜೀವನದ ಧ್ಯೇಯ ಒಂದಾಗಿರಬೇಕು – 'One for all and all for one. all togather for the benifit of the universe. ಇದು ಮನುಷ್ಯ ಮನುಷ್ಯರ ನಡುವಣ ಬೆಸುಗೆಯನ್ನು ಭದ್ರಪಡಿಸುತ್ತದೆ. ಮನುಷ್ಯನೊಬ್ಬ ಸಾಮಾಜಿಕ ಜೀವಿ. ಸಮಾಜದಲ್ಲಿ ಸುಖ ಶಾಂತಿಗಳಿದ್ದರೆ ಒಬ್ಬೊಬ್ಬ ವ್ಯಕ್ತಿಯೂ ನಿಶ್ಚಿಂತ, ನಿರ್ಭಯನಾಗಿರಬಹುದು. ವ್ಯಕ್ತಿ ಸುಧಾರಣೆಯೇ ಸಮಾಜ ಸುಧಾರಣೆ, ಸಮಾಜ ಸುಧಾರಣೆಯೇ ರಾಷ್ಟ್ರದ ಪ್ರಗತಿ. ಆದ್ದರಿಂದ ಸಮಾಜದ ಶ್ರೇಯೋನ್ನತಿಯಲ್ಲಿ ಒಬ್ಬೊಬ್ಬನ ಶ್ರೇಯಸ್ಸೂ ಅಡಗಿರುತ್ತದೆ. ಸಮಾಜದ ಅವಿಭಾಜ್ಯ ಅಂಗವಾದ ಮಾನವ ಸಮಾಜದ ಉದ್ಧಾರಕ್ಕೆ ತನ್ನಿಂದಾದ ಧಾರ್ಮಿಕ, ಸಾಮಾಜಿಕ ಹಾಗೂ ಆರ್ಥಿಕ ಸಹಾಯ ನೀಡಲೇಬೇಕಾಗುತ್ತದೆ. ಇದು ಗೌಡ ಸಾರಸ್ವತ ಧರ್ಮದ ಪ್ರಕ್ರಿಯೆ ಅದರ ಆಚರಣೆ.

ಮುಂದಿನದು ಗೌಡ ಸಾರಸ್ವತ ಸಮಾಜದ ವೈಶಿಷ್ಟ್ಯ ಹಾಗೂ ಅದರ ಸಾಮಾಜಿಕ ಪ್ರಜ್ಞೆ.

ಪ್ರತಿಯೊಬ್ಬ ಮಾನವನೂ ತನ್ನ ಆದಾಯದ ಒಂದಿಷ್ಟು ಭಾಗವನ್ನು ದಾನ ಧರ್ಮಗಳಿಗೆ ವಿನಿಯೋಗಿಸಬೇಕಾದ್ದು ಆತನ ಕರ್ತವ್ಯ. ಜೀವನದಲ್ಲಿ ನಮಗೆಲ್ಲವನ್ನೂ ನೀಡಿದ ಭಗವದ್ ಶಕ್ತಿಗೆ ನಾವು ತೋರುವ ಕೃತಜ್ಞತೆ ಅದು. ಮಾನವ ಜೀವನಕ್ಕೆ ಉಪಯುಕ್ತವೆನಿಸುವ ಹಲವು ವಿಷಯಗಳಿಗೆ ದೈವದ ಸ್ವರೂಪವನ್ನು ಕೊಟ್ಟು ಅದರ ಹಿರಿಮೆಯನ್ನು ಬಿತ್ತರಿಸುತ್ತೇವೆ. ಗೋವಿಂದ, ಗೀತೆ, ಗಂಗಾ, ಗೋಮಾತೆ ಇವು ಅತಿ ಶ್ರೇಷ್ಠ. ಇವುಗಳನ್ನು ವ್ಯಕ್ತಿ, ಭಗವದ್ ಶಕ್ತಿಗಳೆಂದು ಗುರುತಿಸಿ ಮಾನವನಿಗಾಗಿಯೇ

ತಮ್ಮನ್ನು ತಾವೇ ಮುಡಿಪಾಗಿಟ್ಟವರು ಅಥವಾ ಪರೋಪಕಾರಿಯಾಗಿ ಪ್ರತಿಯಾಗಿ ಏನನ್ನೂ ಅಪೇಕ್ಷಿಸದೆ ಇದ್ದ ಇವು ದೈವಾಂಶಸಂಭೂತಗಳೆಂದು ಹೇಳುತ್ತೇವೆ.

**ಗೋವಿಂದ :**

ಭಗವದ್ಗೀತೆಯನ್ನು ಅರ್ಜುನನಿಗೆ ಬೋಧಿಸಿದವನೇ ಶ್ರೀಕೃಷ್ಣ. ನಂಬಿದವರ ಕೈ ಬಿಡದ, ಭಕ್ತರ ಆಪದ್ಬಾಂಧವ. ಶರಣು ಹೊಕ್ಕವರಿಗೆ ಅಭಯದಾತ.

**ಗೀತೆ :**

ಹಿಂದಣ ಎಲ್ಲಾ ಸ್ಮೃತಿ ವೇದಗಳ ಸಾರಸಂಗ್ರಹವೇ ಭಗವದ್ಗೀತೆ. ಇದು ಅರ್ಜುನನಿಗೆ ಕೇವಲ ಕೃಷ್ಣನ ಬೋಧನೆ ಅಲ್ಲ ಭಕ್ತಿ, ಜ್ಞಾನ, ಕರ್ಮಗಳ ಆವಿಷ್ಕಾರ. ಇಲ್ಲಿ ಬೃಹತ್ತಿಗಿಂತ ಮಹತ್ತು ಇವರ ಗುಣ.

**ಗಂಗಾ :**

ಶ್ರೀಮನ್ ಮಹಾ ವಿಷ್ಣುವಿನ ಪಾದಕಮಲಗಳಿಂದ ಹರಿದು ಬಂದವಳು ಗಂಗಾಮಾತೆ. ಈಕೆ ಪಾಪನಾಶಿನಿ. ಮಾತೆಯ ಪದವಿ ನೀಡಿ ಈಕೆಯನ್ನು ನಾವು ಗೌರವಿಸುತ್ತೇವೆ.

**ಗೋಮಾತೆ :**

ಜನ್ಮ ನೀಡಿದ ತಾಯಿ, ಭೂಮಿ ತಾಯಿಯಂತೆ ಗೋವನ್ನೂ ಮಾತೆ ಎಂದು ನಾವು ಸಂಬೋಧಿಸಿ ಶ್ರೇಷ್ಠ ಸ್ಥಾನ ನೀಡಿದ್ದೇವೆ. ಹೆತ್ತ ತಾಯಿ ತನ್ನ ಮಗುವಿಗೆ ಹಾಲನ್ನೂಡಿ ಪಾಲಿಸುವಂತೆ ಮನುಷ್ಯ ವರ್ಗಕ್ಕೆ ತನ್ನ ಅಮೃತ ಸಮಾನ ಹಾಲನ್ನೆರೆಯುವ ಗೋವು ಮಾತೆಯಲ್ಲದೆ ಮತ್ತೇನು ?

**ಭೂಮಾತೆ :**

ನಮ್ಮ ಪುರಾಣಗಳಲ್ಲಿ ಮಹಾವಿಷ್ಣುವಿನ ಇಬ್ಬರು ಪತ್ನಿಯರು ಶ್ರೀದೇವಿ ಭೂದೇವಿಯರು. ಸೃಷ್ಟಿಕರ್ತ ಶ್ರೀವಿಷ್ಣುವಿನ ಪತ್ನಿಯೆಂದು ಭೂದೇವಿಯನ್ನು ಪರಿಗಣಿಸಿ ಆಕೆಯ ನೆಲೆವೀಡು ಭಾರತವೆಂದು ತಿಳಿಯಲಾಗಿದೆ. ಆದ್ದರಿಂದ ಭಾರತ ವರ್ಷ ನಮ್ಮ ರಾಷ್ಟ್ರ – ಅತಿ ಶ್ರೇಷ್ಠ ಎನ್ನುವ ವಿಚಾರ ನಮ್ಮದು. ಅಶನ–ವಸನ-ವಸತಿಗಳಾಶ್ರಯ ನೀಡುವ ಈ ಭೂಮಾತೆಯೇ ನಮ್ಮ ಜೀವನ. ಆಕೆಯ ಕೃಪಾ ಕಟಾಕ್ಷದಲ್ಲಿರುವ ನಾವು ಆಕೆಯನ್ನು ಸೇವಿಸಬೇಕು. ಆಕೆಯ ಕ್ಷೇಮವೇ ನಮ್ಮ ರಕ್ಷಣೆ.

**'ಮಾನವ ಜನಾಂಗದ ಶ್ರೇಯೋನ್ನತಿ'**

ಇದು ಪ್ರಾಚೀನ ಭಾರತೀಯ ಸಂಸ್ಕೃತಿಯ ವೇದವಾಕ್ಯ. ಧರ್ಮದ

ಹಾದಿಯಲ್ಲಿ ನಡೆದು ಸಮಾಜದ ಶ್ರೇಯಸ್ಸನ್ನು ಬಯಸುವುದು. ಈ ನುಡಿಯೇ ನಮ್ಮ ಜೀವನದ ಧ್ಯೇಯವಾಗಬೇಕು.

ಬದಲಾಗುತ್ತಿರುವ ಸಮಾಜದಲ್ಲಿ ಜೀವನದ ಮೌಲ್ಯಗಳೂ ಬದಲಾವಣೆ ಹೊಂದುತ್ತಲಿರುತ್ತವೆ. ಹೀಗಾಗಿ ಇಂದಿನ ಯುವಜನತೆಗೆ ಧರ್ಮದಲ್ಲಿ ಶ್ರದ್ಧೆಯ ಕೊರತೆ ಕಂಡುಬರುವುದು. ಲೋಕ ನೀತಿಯೇ ಹಾಗಿದೆ. ದಿನ ಹೆಚ್ಚಾದರೆ ರಾತ್ರಿ ಕಡಿಮೆಯಾಗುತ್ತದೆ. ಬೆಳಕು ಅಧಿಕವಾದಲ್ಲಿ ಕತ್ತಲೆ ಕಡಿಮೆ. ಹೀಗೆ ಐಹಿಕ ಸುಖಗಳತ್ತ ಮನುಷ್ಯನ ಮನಸ್ಸು ವಾಲಿದಾಗ ಆಧ್ಯಾತ್ಮಿಕ ಆಕಾಂಕ್ಷೆ ಕಡಿಮೆಯಾಗುತ್ತದೆ. ವಿಜ್ಞಾನದ ಮುನ್ನಡೆ ನಮ್ಮ ಹಲವು ರೀತಿಯ ಆಚಾರ ವಿಚಾರಗಳ, ಕೆಲವೊಮ್ಮೆ ಮೂಢನಂಬಿಕೆಗಳ ಬುಡಕ್ಕೇ ಕೊಡಲಿ ಏಟು ಹಾಕಿದೆ. ಆದರೆ ಮಕ್ಕಳಿಗೆ ತಾಯಿಯೇ ಮೊದಲ ಗುರು, ಮಕ್ಕಳನ್ನು ಬೆಳೆಸುವಲ್ಲಿ ತಾಯಂದಿರ ಪಾತ್ರ ಅಪಾರ. ಚಿಕ್ಕಂದಿನಿಂದಲೇ ಊಟ, ಉಪಚಾರ, ಆರೋಗ್ಯವನ್ನು ತಾಯಿ ಮುತುವರ್ಜಿಯಿಂದ ನೋಡಿಕೊಳ್ಳುವಂತೆ ಅವರ ಧಾರ್ಮಿಕ ಜೀವನಕ್ಕೂ ಭದ್ರ ಬುನಾದಿಯನ್ನು ಹಾಕಬೇಕು. ಧರ್ಮದಲ್ಲಿ, ದೇವರಲ್ಲಿ ವಿಶ್ವಾಸ ಮೂಡಿಸಬೇಕು. ಧರ್ಮದ ಚೌಕಟ್ಟಿನಲ್ಲಿ ಜೀವನ ನಡೆಸಿದರೆ ಸಿಗುವ ಸಂತೃಪ್ತಿ ಮನನ ಮಾಡಿಕೊಡಬೇಕು.

**ಬುದ್ಧಿ ನಿಗ್ರಹ :**

ಮನಸ್ಸನ್ನು, ಬುದ್ಧಿಯನ್ನು, ಕಡಿವಾಣವಿಲ್ಲದ ಕುದುರೆಯಂತೆ ಹರಿಯಲು ಬಿಡಲಾಗದು. ಸದ್ಬುದ್ಧಿಯ ಅಧೀನದಲ್ಲಿ ಮನಸ್ಸಿರಬೇಕು.

**ಸತ್ಯಾಸತ್ಯ ವಿವೇಚನೆ :**

ಯಾವುದು ಸತ್ಯ, ಯಾವುದು ಮಿಥ್ಯ ಎಂಬುದನ್ನು ಅರಿತುಕೊಳ್ಳಬೇಕಾದ ಮನೋಸ್ಥಿತಿ. ಸರಿಯಾದ ದಾರಿಯಲ್ಲಿ ಸಾಗುವ ವಿವೇಚನೆ.

**ವಿದ್ಯಾಭ್ಯಾಸ :**

ಇಲ್ಲಿ ಶಾಲಾ ಕಾಲೇಜುಗಳಿಗೆ ಹೋಗಿ ಪಡೆಯುವ ವಿದ್ಯಾಭ್ಯಾಸವೇ ಒಂದು. ಧಾರ್ಮಿಕ ವಿಚಾರಗಳ ವಿದ್ಯಾಶೀಲತೆಯೇ ಇನ್ನೊಂದು. ಇದನ್ನು ಪ್ರಾಪಕಾರ್ಥವಲ್ಲಿ ಪಡೆಯತಕ್ಕದ್ದು.

**ಪ್ರಾಮಾಣಿಕತೆ :**

ಕೇವಲ ಸತ್ಯ ನುಡಿಯುವುದು ಪ್ರಾಮಾಣಿಕತೆಯಲ್ಲ. 'ನ ಬ್ರೂಯಾತ್ ಸತ್ಯಂ ಅಪ್ರಿಯಂ'. ಧರ್ಮ ಇದನ್ನೇ ಅಪೇಕ್ಷಿಸುತ್ತದೆ. ಸತ್ಯ ಕೆಲವೊಮ್ಮೆ ಅದು ಸತ್ಯವೇ ಆಗಿದ್ದರೂ ಕಹಿಯಾಗಿ, ಅಪ್ರಿಯವಾಗಿದ್ದರೆ ಅದನ್ನು ಹೇಳಲಾಗದು.

ಇಂತಹ ಅಪ್ರಿಯ ಸತ್ಯಗಳಿಂದಾಗುವ ಮನೋಪರಿಣಾಮ ಕಹಿ. ಆದ್ದರಿಂದ ಇಲ್ಲಿ ಪ್ರಾಮಾಣಿಕತೆ ಎಂಬುದು ಧರ್ಮದ ದೃಷ್ಟಿಯಲ್ಲಿ ಯಾವುದು ಸರಿ. ಯಾವುದು ಸರಿ ಅಲ್ಲದ್ದು ಎಂಬುದನ್ನು ತಿಳಿದು ಬಳಸಬೇಕಾದ ಚಾಕಚಕ್ಯತೆ. ಧರ್ಮ ಸಮ್ಮತವಾದ ಇಂತಹ ಚತುರತೆಗಳು ಪ್ರಾಮಾಣಿಕವೂ ಎನಿಸಲ್ಪಡುವುದು.

**ಕೋಪನಿಗ್ರಹ :**

ಮನುಷ್ಯನ ವಿನಾಶಕ್ಕೆ ಮೂಲ–ಕೋಪ. ತನ್ನ ಮೇಲೆ ತಾನು ನಿಯಂತ್ರಣ ಕಳೆದುಕೊಂಡು ಕೋಪಕ್ಕೆ ದಾಸನಾಗುವುದು ತನಗೆ ತಾನೇ ಶಾಪ ಕೊಟ್ಟಂತೆ. ಇಂತಹ ಕೋಪ ನಿಗ್ರಹವೇ ಧರ್ಮ.

ಇದುವೇ ಧರ್ಮ ದರ್ಶನ. ಇದರಿಂದಲೇ ಆತ್ಮೋನ್ನತಿ : ಆತ್ಮವಿಕಾಸ.

**ಸಂಪ್ರದಾಯಗಳು :**

ಭಾರತೀಯ ಸಂಪ್ರದಾಯದಂತೆ ಗೌಡ ಸಾರಸ್ವತರಲ್ಲೂ ಕೆಲವು ಪರಂಪರಾಗತ ವೈದಿಕ ಸಂಪ್ರದಾಯಗಳು ರೂಢಿಯಲ್ಲಿವೆ. ಆದರೆ ಗೌಡ ಸಾರಸ್ವತ ಸಮಾಜವು ತನ್ನದೇ ಆದ ಕೆಲವು ವೈಶಿಷ್ಟ್ಯಗಳನ್ನು ಮೆರೆದಿರುವುದುಂಟು. ಮುಖ್ಯವಾಗಿ ಶೋಡಷ ಸಂಸ್ಕಾರಗಳು. ಅಂದರೆ, ಜನನ, ಮರಣ, ಮದುವೆ, ಮುಂಜಿ, ಹಬ್ಬ ಹರಿದಿನ, ಹೋಮ ಹವನ ಇಂತಹ ಅನೇಕ ಧಾರ್ಮಿಕ ಆಚರಣೆಗಳು. ಇವುಗಳಲ್ಲಿ ವೇದೋಕ್ತ ಪರಿಪಾಠವಿದ್ದರೂ ನಾವು ಮೊದಲೇ ಹೇಳಿದಂತೆ ಗೌಡ ಸಾರಸ್ವತಕ್ಕೆ ಮೀಸಲಾದ ವಿಧಿವಿಧಾನಗಳುಂಟು.

ಗೌಡ ಸಾರಸ್ವತರಲ್ಲಿ ವಿವಾಹವು ನಾಂದಿ ದೇವತೆಯ ಪೂಜೆಯಿಂದ ಪ್ರಾರಂಭಗೊಳ್ಳುವುದು. ಇದು ಮದುವೆಯ ಮುಹೂರ್ತಕ್ಕೆ ಹನ್ನೊಂದು ದಿನಗಳ ಮೊದಲು ಕುಟುಂಬದ ಹಿರಿಯರು ಮನೆದೇವರಿಗೆ ನಿರ್ದಿಷ್ಟವಾಗಿ ವಿವಾಹ ನಡೆಸಿ ಕೊಡುವಂತೆ ಬೇಡಿಕೊಳ್ಳುವ ಒಂದು ಶುಭ ಸಮಾರಂಭ. ನಾಂದಿ ಇಟ್ಟ ಬಳಿಕ ಹುಟ್ಟು–ಸಾವಿನ ಎರಡು ಸೂತಕಗಳೂ ಬಾಧ್ಯವಲ್ಲ.

ಮುಹೂರ್ತದ ಮುನ್ನಾದಿನ ಬೀಗರು ಒಂದೆಡೆ ಸಮಾವೇಶಗೊಂಡು ಪರಸ್ಪರ ವೈನೋದಿಕವಾಗಿ ಕಾಲ ಕಳೆಯುತ್ತಾರೆ. ಇದು ಅವರವರ ಅಂತರಂಗಗಳ ಬೆರಕೆಯ ಸಂಕೇತ. ಆ ಸಂದರ್ಭದಲ್ಲಿ ಅಣಕವಾಡುಗಳನ್ನು ತಮಾಷೆಯಾಗಿ ಹಾಡಿ ಕೊಳ್ಳುವುದುಂಟು. ಬೀಗರು, ಬೀಗರನ್ನು ಜರೆಯುವ ಈ ಜಾನಪದ ಹಾಡುಗಳು ಈ ರೀತಿ ಇವೆ :

ದಾಂತೆ ಪಣಾಂಡಯಾ ತಾಂದುಲು ಸೇಸಯಾ
ಹೊರತಾ ಬಸಯಾ ಕಾರಣಾಂಕ
ದಾಂತೆ ವಾಂಡಯಾ ದಾಂತೆ ಕರಾ ತಿಟ್ಟಿ
ಪಾಂಚ ದೇವ ಉಟ್ಟೆ ಕಾರಣಾಂಕ

ಸರ್ವ ದೇವಾಂತೂಂಚಿ ಕುಲದೇವು ಹೋಡು
ತಾನ್ನಿ ದಿಲ್ಲೆ ಮಳಿ ಕಾರಣಾಂಕ
ದಾಂತೆ ವಣಾಂಡಯಾ ಉಡಿದು ಬರ್ಡಿಯಾ
ದೆವಾನ ಕೆಲ್ಲಿ ದಯಾ ಕಾರಣಾಂಕ

ರಶಾಚೆ ರಾನ್ನೀರಿ ಫಾಲಾ ಏಕ ಪ್ರೋಳೋ
ಚಾರಿ ದಿಕ್ಕ್ಯಾನ ದೊಳೊ ಚೆಲ್ಲೆಲ ಆನ್ನಾಕ
ಉಶ್ಯಾ ಥಿತ್ತರಿ ಉಶ್ಯೆ ಸಾವರಿ ಕಾಪ್ಪಾಸವ್ರುಶ್ಯೆ
ಬಾಯ್ಲೆ ಪ್ರೊಳೊಚೆ ಪಿಶ್ಯೆ ಚೆಲ್ಲ್ಯಾ ತುಕ್ಯಾ

ಅಬ್ಬಲ್ಯಾಚೇ ಪ್ರೂಲ ತಾಂಬ್ಡೆ ತಾಂಬ್ಡೆ ದಿಸ್ತಾ
ಬಾಯ್ಲೆ ಪ್ರೊಳೊನು ಹಾಸ್ತಾ ಚೆಲ್ಲ ಅವ್ಗೆಲೊ
ಕಾಳ್ಯಾಚೆ ಪಾಕ್ಯಾಕ ಬಾಂದ್ಲ್ಯಾ ಸುಂಬಾ ದೋರಿ
ಬಾಯ್ಲ ಮೆಳ್ಳಿ ಗೋರಿ ಚೆಲ್ಲಾ ತುಕ್ಯಾ

ಪಟ್ಟೆ ಬಿತ್ತರಿ ಪಟ್ಟೆ ಜಾಯ್ಲ್ಯಾ ಗಳ್ಯಾ ಪಟ್ಟೆ
ದಕ್ಷಿಣ ಗೆವ್ಹೇಕ ಗಟ್ಟೆ ಭಟ್ಟನಾವು ಅವ್ಗೆಲೊ
ಗರಾಚೆ ದೊಣ್ಯೇಕ ಆಸ್ಸಾ ಏಕ ಅಡ ಬಡ್ಡಿ
ಚಾರಿ ದಿಕ್ಕ್ಯಾನ ಗಡಬಿಡಿ ಚೆಲ್ಲೆಲ ಭಾವಾಕ

ಪ್ರೋವಾ ಥಿತ್ತರಿ ಪ್ರೋವು ಪುಲ್ಲಯಿಲೋ ಪ್ರೋವು
ಬಾಯ್ಲೆ ಮೊಗಾ ಘೂವು ಚೆಲ್ಲ ಅವ್ಗೇಲೊ
ಸೊಲ್ಲಾ ಥಿತ್ತರಿ ಸೋಲ ವಟ್ಟಾಂಚೆ ಜೇ ಸೋಲ
ಮಾಡೆ ಎದ್ದೆ ದೋಳೊ ಚೆಲ್ಲಾಲ ಆನ್ನಾಕ

ಅವ್ಗೆಲ್ ಪಿತ್ಲಾಂತು ಜಾತ್ತಾ ಶಂಕರಾಚಿ ಪ್ರೂಲ
ಹಂಕಾರಾಚಿ ಉತ್ರ ಚೆಲ್ಲೇಲ ಭಾವಾಕ
ಬಡ್ಡಿ ಥಿತ್ತರಿ ಬಡ್ಡಿ ಕಾಡ್ಡಿ ಬಿತ್ತರಿ ಕಾಡ್ಡಿ
ಬಾಯ್ಲ ಮೆಳ್ಳಿ ಗುಡ್ಡಿ ಚೆಲ್ಲ್ಯಾ ತುಕ್ಯಾ

ದೋರಿ ಥಿತ್ತರಿ ದೋರಿ ಸಪ್ರಾರಿ ಸುಂಬಾ ದೋರಿ
ಬಾಯ್ಲ ಮೆಳ್ಳಿ ಥೋರಿ ಚೆಲ್ಲ್ಯಾ ತುಕ್ಯಾ

ಆಮ್ಗೆಲ್ ಕೊಡ್ಯಾಂತು ಆಸ್ಸ ಏಕ ಪಾಡ್ಡಿ
ದಾವ್ ಮೀಸೆ ಗುಡ್ಡಿ ಚೆಲ್ಲ್ಯಾ ತುಕ್ಕಾ
ತೋಪಾ ಭಿತ್ತರಿ ತೋಪು ಕಲಯಿಚೆ ತೋಪು
ಸಾಂಕಾ ತುದೀರ ಕೋಪು ಚೆಲ್ಲ್ಯಾಲ್ ಭಾವಾಕ
ಆಮ್ಗೆಲ್ ಘರಾಂತು ಲಾಯ್ಲೆ ಏಕ ಕ್ಯಾಲೆಂಡರ
ಬಾಯ್ಲ್ಲ ಮೆಳ್ಳಿ ಭಿಲೆಂಡರ ಚೆಲ್ಲಾ ತುಕ್ಕಾ
ರಶ್ಯಾಚೆ ರಾನ್ನೀರಿ ದುದ್ದಾಚೆ ಆಯ್ದನ
ಬಾಯ್ಲ್ಲ ಮೆಳ್ಳಿ ನಿಧಾನ ಚೆಲ್ಲಾ ತುಕ್ಕಾ
ಉಡಿದು ಬರ್ಡಿತನಾ ಹೊಗುರೆತ್ತಾ ಪಾವ
ಪಾಟ್ಲಾನ ಹಾಡ್ಲಿ ಜಾಪ ಚೆಲ್ಲ್ಯಾಲ ಹೊನ್ನೀನ
ಆಮ್ಗೇಲೆ ಘರಾಂತು ಆಸ್ಸ ಏಕ ದುದ್ದೊ
ಬಾಯ್ಲೆ ಮಾರ್ಲ್ಲೊ ಗುದ್ದೊ ಚೆಲ್ಲ್ಯಾನ್ ಆಮ್ಗೇಲೆ
ಆಮ್ಗೇಲ್ ಘರಾಂತು ಆಯ್ದನಾಂಚೆ ಆಪಾವಣ
ಬಾಯ್ಲ್ಲ ಮೆಳ್ಳಿ ಪೆಪಾವಣ ಚೆಲ್ಲಾ ತುಕ್ಕಾ

o o o o

**ಚೆಲ್ಲ್ಯೇಕ ಸಾಂಗ್ಚೆ ಪದ :**

ದಾಂತೆ ಮೊಂಡಯಾ ತಾಂದುಲು ಸೇಸಯಾ
ಲಕ್ಷುಮಿ ಬೈಸಯೊ ಕಾರಣಾಂಕ
ದಾಂತೆ ಮೊಂಡಯಾ ತಾಂದುಲು ಸೇಸಯಾ
ಹೊಕ್ಲೇಕ ಬಸಯಾ ಕಾರಣಾಂಕ
ಕಾಳೆ ಕಾಪ್ಪಡ ದೆಗ್ಗಿನ ಬಾರೀಕ
ರೂಪಾನ ಮಾಣಿಕ ಚೆಲ್ಲಿ ಆಮ್ಗೇಲಿ
ನಳ್ಯಾ ಭಿತ್ತರಿ ನಳೊ ಮಂಗಳೂರಾಚೊ ನಳೊ
ಬಾಮ್ಮುಣ್ ಮೆಳ್ಳೊ ಕಾಳೊಚೆಲ್ಲಿ ತುಕ್ಕಾ
ವಾಸಾ ಭಿತ್ತರಿ ವಾಸು ಆತ್ತರಾಚೊ ವಾಸು
ಮ್ಹಾತ್ಯಾಕನಾ (ಬೋಡಾಕನಾ) ಕೇಸು ಭಟ್ಟ ಮಾವಾಕ
ಪವನಾಚೆ ಸೊರಾಕ ಘಾಲ್ಲಿ ಕುರ್ಸ್ಸತ ಬಾರಾ
ಬಾವಣ್ಣಾಲೆ ಘರ ದೂರ ಚೆಲ್ಲಿ ತುಕ್ಕಾ
ದೂರ ಜಾಲ್ಲೆ ದೋಣಿ ಚಿಂತಾಕರು ನಾಕ್ಕಾ
ಚೆಲ್ಲೊ ಬರೋ ಮ್ಹೊಣು ದಿಲ್ಲಾ ತುಕ್ಕಾ

ದೂರ ಜಾಲ್ಲೆ ದೋಣಿ ಚಿಂತಾ ಕರೊ ನಾಕ್ಕಾ
ವಾಹನಾನಿ ಆತ್ತು ಲಾಗ್ಗಿ ಜಾಲ್ಲ್ಯಾ
ರಶ್ಯಾ ಚೆ ರಾನ್ನಿಕ ಲಾಗ್ಲಾ ಏಕು ಕಾವು
ಚಾರಿ ದಿಕ್ಕ್ಯಾನ ರಾವು ಚಲ್ಲೆಲ್ ಭಾವಾಲೊ

ಆಂಬೆ ಭಿತ್ತರಿ ಆಂಬೋ ವಶಾಲಪುರಿ ಆಂಬೊ
ಜಗ್ಡೆ ಜುಜಾ ಕೊಂಬೊ ಚೆಲ್ಲೆಲ ಭಾವು
ಉಶ್ಯಾ ಭಿತ್ತರಿ ಉಶ್ಶೆ ಸಾಪ್ರಿ ಕಾಪ್ಸಾ ಉಶ್ಯೆ
ಬಾಪಶ್ಯಾ ಪ್ರೋಕೊಚೆ ಪಿಶ್ತೆ ಚೆಲ್ಯೇ ಆಮ್ಗೇಲೆ

ಆಬ್ಬಲಾಚೇ ಫ್ಲಾಲ ತಾಪ್ಸ್ಟ ತಾಪ್ಸ್ಟ ದಿಸ್ತಾ
ಬಾಪಶ್ಯಾ ಪ್ರೋಳೋನು ಹಾಸ್ತಾ ಚೆಲ್ಲಿ ಆಮ್ಗೇಲಿ
ಕುಡಿ ಕಾಡ್ಲೆ ಶೆಣ ಉಂಬ್ರಾ ಲಾಯ್ಲೊ ಗಂಥ
ದಿಲ್ಲೆಲೆ ಘರ ಚಂದ ಚೆಲ್ಲೇ ತುಕ್ಕಾ

ವಾಲ್ಲಿ ಪೈಲ್ಲೊ ದುದ್ದೊ ವಾಲ್ಲಿರಿ ಸರಸರಲೊ
ವರದಕ್ಷಿಣ ದಿತ್ತನಾ ಥರಥರಲೋ ಚೆಲ್ಲಲ ಆನು
ಹಿಲ್ಲೆ ಭಿತ್ತರಿ ಹಿಲ್ಲೆ ಕಾರತ್ಯಾಚೆ ಹಿಲ್ಲೆ
ಜಾವೆ ಪೂರ್ತಿ ಕೆಲ್ಲೆ ಚೆಲ್ಲಿಲ ಆಮ್ಮ್ಯಾನ

ನಾಂಕಾ ಫಾಲ್ಲಾ ನತ್ತು ಗಾಲ್ಲಾರಿ ಪಳ್ಳಿ ಸಾವ್ಳಿ
ಕಾಂತಯಿಲಿ ಬಾವಲಿ ಚೆಲ್ಲಿ ಆಮ್ಗೇಲಿ
ಎತ್ತಾ ಎತ್ತಾ ವೋಣೆ ವಾಟ ರಾಕ್ಕೀಲೆ
ದೋಳಿ ಭಾಗ್ಗಿಲೆ ಚೆಲ್ಲಿ ಆಮ್ಗೇಲೆ

ಪೋಡಿ ಭಿತ್ತರಿ ಪೋಡಿ ಪತ್ರಡಾಚಿ ಪೋಡಿ
ಬಾಪಶ್ಯಾತ್ರೆ ಪ್ರೋಚ್ಚಿ ತೋಡಿ ಚೆಲ್ಲಿ ಆಮ್ಗೇಲಿ
ಕುಡಿ ಕಾಡ್ಲೆ ಶೇಣ ಉಂಬ್ರಾ ಲಾಯ್ಲೊ ಗಂಧ
ವೆಲ್ಲೆಲ ಘರಾ ಆನಂದ ಚೆಲ್ಲಿ ತುಕ್ಕಾ ॥[18]

o o o o

ಕನ್ಯಾದಾನ–ಪಾಣಿಗ್ರಹಣ – ಅಶ್ಮಾರೋಹಣ – (ಅಶ್ಮವೆಂದರೆ ಕಲ್ಲು, ಸಾಣೆಕಲ್ಲಿನ ಮೇಲೆ ವಧುವನ್ನು ನಿಲ್ಲಿಸಿ ಆಕೆಯ ಕಾಲ್‌ಬೆರಳಿಗೆ ಕಾಲುಂಗುರ ತೊಡಿಸುವುದು)–ವಿವಾಹಹೋಮ–ಸಪ್ತಪದಿ–ಅರುಂಧತಿ ದರ್ಶನ ಇವೇ ಮೊದಲಾದ ಧಾರ್ಮಿಕ ಆಚರಣೆಗಳು. ಅಂತರ ಪಟ ಸರಿಸಿ. ಧಾರೆ ಎರೆದುಕೊಟ್ಟ ಘಳಿಗೆಯೇ ಮುಹೂರ್ತ. ಪಿತೃಪ್ರಧಾನ ಸಮಾಜವಾದ್ದರಿಂದ ವಧುವನ್ನು ವರನ ಮನೆಗೆ

ಕಳುಹಿಸುವ ಸಂಪ್ರದಾಯವಿದೆ. ಕೆಲವು ಮನೆತನಗಳಲ್ಲಿ 'ವಾಯಣ'ದ ಪದ್ಧತಿ ಇದೆ. ಇದನ್ನು 'ಬಾಗಿನ' ಎಂದೂ ಕರೆಯುತ್ತಾರೆ. ವಾಯಣ–ಗೌರಿ ವ್ರತವನ್ನು ಮದುವೆಯ ದಿನವೇ ವಧುವಿಗೆ ಕೊಡಿಸುತ್ತಾರೆ. ಗೌರಿಯ ವದನದಂತೆ ತೋರುವ ಅಲಂಕೃತ ಸೂರಾ ಮಟು ತೆಂಗಿನಕಾಯಿಗಳನ್ನು ಒಂದೆಡೆ ಪೇರಿಸಿಟ್ಟು ಅವುಗಳ ಮೇಲೆ ಉರಿಯುವ ಬೆಳ್ಳಿಯ ನೀಲಾಂಜನಗಳನ್ನು ಬೆಳಗಿಸಿ ಗೌರಿಯ ಆವಾಹನೆ ಮಾಡುತ್ತಾರೆ. ಗೃಹಸ್ಥಾಶ್ರಮ ಸ್ವೀಕರಿಸಲಿರುವ ವಧು, ಪತಿಯ ಶ್ರೇಯಸ್ಸಿಗಾಗಿ ತನ್ನ ಕುಂಕುಮ ರಕ್ಷೆಗಾಗಿ ಈ ವ್ರತಬದ್ಧಳಾಗುತ್ತಾಳೆ. ಈ ಪೂಜಿಸಿದ ವಾಯಣವನ್ನು ಮುತ್ತೈದೆಯರಿಗೆ ನೀಡಿ ವಧು ಆಶೀರ್ವಾದ ಪಡೆಯುತ್ತಾಳೆ. ಈ ಸಂದರ್ಭದಲ್ಲಿ ಹಾಡುವ ಸಂಪ್ರದಾಯದ ಹಾಡೊಂದು ಇಲ್ಲಿದೆ :

ವಾಯಣವ ತೆಗೆದುಕೊಳ್ಳೆ ಮಂಗಳಾಗೌರಿ
ತಾಯೆ ನಮ್ಮ ಪತಿಗಳಿಗೆ ದೀರ್ಘಾಯು ಕೊಡೇ ॥
ಕರುಣವನ್ನು ಮಾಡೋ ತಾಯೆ ಭಕ್ತವತ್ಸಲೆ
ಸೆರಗೊಡ್ಡಿ ಬೇಡುವೆವು ನಾವ್ ವರವ ದಯಮಾಡೆ ॥
ಕುಂಕುಮ ಶಾಶ್ವತ ಹೆಚ್ಚುವಂತೆ ವರವ ದಯಮಾಡು
ಪಂಕಜಾಕ್ಷಿ ದುರ್ಗಾದೇವಿ ವರವ ಮಾಡದಮಾಡೇ ॥
ಮಸ್ತಕದಲ್ಲಿ ಮುಡಿಸುವಂತಹ ಪುಷ್ಪವು ಅನುದಿನ
ಶಾಶ್ವತವಾಗಿ ಮುಡಿಸುವಂತೆ ವರವ ದಯಮಾಡು ॥
ಅನುದಿನ ಭಾಗ್ಯವ ಕೊಟ್ಟು ನಮಗೆ ರಕ್ಷಿಸು
ಮನಸಿನಲ್ಲಿ ಚರಣವೆಂಬ ಪ್ರೇಮವ ದೊರಕಿಸು ॥
ಪುತ್ರ ಸಂತತಿಯ ನಮಗೆ ಬೇಗದಿ ದಯಮಾಡೇ
ಉತ್ತಮ ಪ್ರಾಣಿಗಳನ್ನು ನಮ್ಮ ಗರ್ಭದಿ ದಯಮಾಡೇ[19] ॥

ವಿವಾಹಿತೆಯಾದ ಬಳಿಕ ಒಂದು ವರ್ಷದಲ್ಲಿ ನಡೆಯುವ ಪ್ರತಿಯೊಂದು ವಿಶೇಷ ಹಬ್ಬಕ್ಕೂ ಹೆಣ್ಣು ಪತಿಯೊಡನೆ ತವರಿಗೆ ಬರುತ್ತಾಳೆ. ವಿಶೇಷ ಉಡುಗೊರೆಯೊಂದಿಗೆ ಹಿಂತಿರುಗುತ್ತಾಳೆ.

ಬಸುರಾದ ಸ್ತ್ರೀಗೆ ಏಳು ತಿಂಗಳು ತುಂಬಿದ ಬಳಿಕ 'ಸೀಮಂತ' ಮಾಡಿ ಸೀರೆ, ಕುಪ್ಪಸ, ಹಣ್ಣುಗಳು, ಐದು ಬಗೆಯ ಸಿಹಿ ಭಕ್ಷ್ಯಗಳೊಂದಿಗೆ ಉಡಿ ತುಂಬಿಸಿ ಆರತಿ ಎತ್ತುವ ವಾಡಿಕೆ ಗೌಡಸಾರಸ್ವತರಲ್ಲಿದೆ. ಮೊದಲ ಹೆರಿಗೆ ತವರಿನಲ್ಲಿ. ಮಗು ಹುಟ್ಟಿದ ಸೂತಕ ಹನ್ನೊಂದನೆಯ ದಿನ 'ವೀಳಯ'ದೊಂದಿಗೆ ಮುಗಿಯುತ್ತದೆ. ಮಗುವಿನ ಹೊಕ್ಕುಳ ಬಳ್ಳಿ, ಹನ್ನೆರಡನೆಯ ದಿನಗಳೊಳಗೆ ಬಿದ್ದಿರುತ್ತದೆ. ಅದನ್ನು ಪೂಜಿಸುವ 'ವಾರ್ಶ್ಲ ಪೂಜಾ' ಗೌಡ ಸಾರಸ್ವತರ ಒಂದು ವಿಶಿಷ್ಟ ಸಂಪ್ರದಾಯ. ಈ

ಹೊಕ್ಕುಳ ಬಳ್ಳಿಯನ್ನು ಬಾಣಂತಿಯು ಕೈಯಲ್ಲೇ ಪೂಜಿಸಿ, ತೆಂಗಿನ ಮರದ ಬುಡದಲ್ಲಿ ಚಿಕ್ಕ ಹಳ್ಳ ತೋಡಿ ಮಣ್ಣಲ್ಲಿ ಹುಗಿದು ಹಾಕುತ್ತಾರೆ. ಅದರ ಮೇಲೆ ಹೂ, ಕುಂಕುಮವಿರಿಸಿ, ಹಾಲನ್ನ ಸುರಿದು ಭೂಮಿತಾಯಿಯೊಂದಿಗೆ ಬಾಣತಿ ತನ್ನ ಹೊಟ್ಟೆ ತಣ್ಣಗಿರಲೆಂದು ಬೇಡಿಕೊಳ್ಳುತ್ತಾಳೆ. ತಿಥಿ, ವಾರಗಳನ್ನು ನೋಡದೆ ಮಗು ಹುಟ್ಟಿದ ಹನ್ನೆರಡನೆಯ ದಿನವೇ ನಾಮಕರಣ ಮಾಡುತ್ತಾರೆ. ನಕ್ಷತ್ರನಾಮ ಪದ್ಧತಿ ಬಳಕೆಯಲ್ಲಿದೆ.

ಪುಟ್ಟ ಮಕ್ಕಳನ್ನು ಆಡಿಸುವಾಗ ಹಾಡುವ ಜಾನಪದ ಧಾಟಿಯ ಲಾಲಿ ಹಾಡುಗಳು ಈಗಲೂ ಬಳಕೆಯಲ್ಲಿವೆ. ಕನ್ನಡದ ತಾರಮ್ಮಯ್ಯಾ ಧಾಟಿಯಲ್ಲಿದೆ ಈ ಹಾಡು :

ತಾ ತಿಂಗಣ ಬಾಳಾ ಆಮ್ಗೇಲ್
ಎದ್ದೆ ವ್ಯಾಂಗಣ
ತೇ ವ್ಯಾಂಗಣಾಚೆ ಪೋಢೀನ
ತೇ ಬಾಳಾ ಆಮ್ಗೇಲ್
ಕೊಕ್ಕೊ ವಾಡೀನ[20] ॥

ಪುಟ್ಟ ಮಗುವಿನಲ್ಲಿ ತಾಯಿ ಸಾಕ್ಷಾತ್ ಶ್ರೀಕೃಷ್ಣನನ್ನೇ ಕಾಣುತ್ತಾಳೆ :

ಕುರ್‌ಕುರೇಚೇ ಕಾನ್ನಾ ಗ್ಯಾ ಮಳಿ ಗೆಲ್ಯೋ ರಾನ್ನಾ
ಲಂಬೋಣ್ ಹಾಡ್ಗಾ ಮಾಮ್ಮಾ. ಗಾಯಿ್ ಮಳ್ಯೋ ॥
ಗಾಯ್ ಮಳಿಚೋ ಗೊವಾಳೂ
ತೊ ರಾನ್ನಾ ರಘೂಡ್ಡಾ ಎಕ್ಲೊ
ಬಲಿ ಭದ್ರಾ ದಾಕ್ಲೋ, ನಾರಾಯಣೂ ॥
ನಾರಾಯಣೂ ದೆವಾ. ಕರೀಂ ತುರ್ಝೊ ಸೇವಾ
ಆಟಾಯಿಲೆ ವೆಳಾs ಪಾವ್ರೆ ದೇವಾss ॥
ಯೇರೆ ಚೆರ್ಡ್ವಾ ಧಾಪ್ಸ್ನ ತೊ ನುಸ್ನು ಕೊಕ್ಯೋ ಜಪ್ನಾ
ನುಸ್ನು ಗೋಡ್ ಜಾಲ್ಲೊ, ತೊ ಬಾಳ್ ಆಮ್ಗೇಲ್ ಹೋಡ್
ಜಾಲ್ಲೊ[21] ॥

ಅಂಬೆಗಾಲಿಕ್ಕಿ ಗೆಜ್ಜೆಯ ನಾದದೊಂದಿಗೆ ಮನೆ ತುಂಬಾ ಓಡಿಯಾಡುವ ಕಂದ ಮಾತೆಗೊಂದು ಸಂಭ್ರಮ :

ಪಾವ್ ನುದನ್ ಪಾವ್ ಸುದನ್ ಧಾವೆರೆ ಪೈಯ್ಯಾ
ತೇ ಪೇಳೂ ಗೆಲ್ಲಿಲ್ ಬಳಾ ಆಮ್ಗೇಲಾ ಘರಾ ಆಪ್ಪಯ್ಯಾ

ವಾಳೆ ಸರಪಳಿ ಘಾಲ್ಲೆಲ್ ಪಾಯು ವಹಾಂನ್ಯೆ ದಾಕ್ಕೈಯಾ
ಪಾವ ನಂದನ ಚೆರ್ಡಾ ಸಗ್ಗೈ ಸಾನ್ನಣ
ಕುಡ್ಕೆ ದಿಲ್ಲಾರಿ ಚೆರ್ಡು ನಾಕ್ಕ ಮಣ್ಣಾಲಿ
ಸಗ್ಗೈ ದಿಲ್ಲಾರಿ ಚೆರ್ಡು ಫೆವ್ವ್ನ ಥಾಂವ್ಮಲೆ
ಸಕ್ಡಾಂಕ ದೀವ್ವ್ನ ಖಾತ್ತಲೆ.[22]

ಗಂಡು ಮಕ್ಕಳಿಗೆ ಐದು ವರ್ಷದ ಒಳಗಾಗಿ 'ಚೌಲ' ಸಂಪ್ರದಾಯವಿದೆ. ಎಂಟು ವರುಷದ ಬಳಿಕ ಉಪನಯನ ಸಂಸ್ಕಾರವೂ ಇದೆ. ಗಂಡು ಮಕ್ಕಳಿಗೆ ಮಾತ್ರ ಯಜ್ಞೋಪವೀತದ ಹಕ್ಕು ಬಳಕೆಯಲ್ಲಿದೆ. ಹಿಂದೆಲ್ಲ ಯಜ್ಞೋಪವೀತ ಧಾರಣೆ ಮಾಡಿ ವಟುವಾಗಿಸಿ ಗುರುಕುಲಕ್ಕೆ ಸೇರಿಸಿ 'ಓಂ' ಕಾರದಿಂದ ವಿದ್ಯಾಭ್ಯಾಸ ಪ್ರಾರಂಭಿಸುವ ಪದ್ಧತಿ ಇತ್ತು. ಈಗ ತಂದೆಯೇ ಮಗನಿಗೆ ಇಂದ್ರಿಯ ಪ್ರಜ್ಞೆ ಕೊಟ್ಟು 'ಗಾಯತ್ರಿ'ಯನ್ನು ಹೇಳಿಕೊಡುವುದು ರೂಢಿ. ಮಾತೃಭೋಜನ, ಬ್ರಾಹ್ಮಣ ಉಪದೇಶ ಹಾಗೂ ತ್ರಿಕಾಲ ಸಂಧ್ಯಾವಂದನೆ ಅನುಷ್ಠಾನ.

**ಹಬ್ಬ :**

ಗೌಡ ಸಾರಸ್ವತರಲ್ಲಿ ಹಬ್ಬಕ್ಕೆ ವಿಶೇಷ ಪ್ರಾಮುಖ್ಯತೆ ಇದೆ. ಶ್ರಾವಣ ಶ್ರೇಷ್ಠ ಮಾಸ. ಶ್ರಾವಣದ ಶುಕ್ರವಾರ. ಭಾನುವಾರ (ಗೌಡ ಸಾರಸ್ವತರು ಸೂರ್ಯನ ಆರಾಧಕರು ಹಾಗಾಗಿ ಭಾನುವಾರಕ್ಕೆ ಮಹತ್ವವಿದೆ.) ಮುತ್ತೈದೆಯರು 'ಜೂಡಿ' ಕಟ್ಟಿ ತುಳಸೀ ಪೂಜೆ. ಸೂರ್ಯನ ಪೂಜೆ ಮಾಡುತ್ತಾರೆ. ಇದು ಈ ಸಮಾಜಕ್ಕೇ ವಿಶಿಷ್ಟವಾದುದು. ಶ್ರಾವಣ ಮಾಸದಲ್ಲಿ ಅರಳಿ ನಿಂತ ಪ್ರಕೃತಿ. ಸೂರ್ಯನ, ವರ್ಷ ಋತುವಿನ, ಭೂಮಿಯ ಅವಿನಾಭಾವ ಸಂಬಂಧ. ಹಾಗಾಗಿ ಪ್ರಕೃತಿಯಲ್ಲೇ ನೈಸರ್ಗಿಕವಾಗಿ ಹುಟ್ಟಿದ ಪರಿಮಳವಿಲ್ಲದ ಹೂಗಳನ್ನು ಗರಿಕೆಯೊಂದಿಗೆ ಗುಚ್ಛವಾಗಿ ಕಟ್ಟುವುದನ್ನು 'ಜೂಡಿ' ಎನ್ನುತ್ತಾರೆ. ಈ ಜೂಡಿಯಲ್ಲಿ ಬಳಸುವ ವನಸ್ಪತಿಗಳೆಲ್ಲ ಶ್ರಾವಣ ಮಾಸದಲ್ಲಿ ಮಾತ್ರ ಕಾಣಸಿಗುವಂಥವುಗಳು–ಲಾಯೆ ಮಾಡ್ವೊ (ಅರಳು ಹೂ); ಮಾಜ್ರಾ ನಾಂಕುಟ (ಬೆಕ್ಕಿನ ಉಗುರು) ; ದಿವ್ವಾಂಕೋರು (ಗರಿಕೆ) : ಕ್ಯಾಳಾದೋಳೊ (ಕಾಗೆ ಕಣ್ಣು)–ಇವು ವನಸ್ಪತಿಗಳು ಮಾತ್ರವಲ್ಲ ಔಷಧೀಯ ಗುಣವುಳ್ಳ, ಇವುಗಳ ಪರಿಚಯ ಸ್ತ್ರೀಯರಿಗುಂಟಾಗಲು ಹಿಂದಿನಿಂದಲೂ ಹಿರಿಯರು ನಡೆಸಿಕೊಂಡು ಬಂದ ಪದ್ಧತಿ ಇದು. ಪೂಜಿಸಿದ ಈ ಜೂಡಿ ಗುಚ್ಛವನ್ನು ಶ್ರೀತುಳಸಿಗೂ, ತೋರು ಬಾಗಿಲಿಗೂ, ಕುಲದೇವರಿಗೂ ಅರ್ಪಿಸುವುದು. ಹಿರಿಯ ಮುತ್ತೈದೆಯರಿಗೂ ನೀಡಿ ಆಶೀರ್ವಾದ ಪಡೆಯುವುದು.

ಚಾಂದ್ರಮಾನ ಯುಗಾದಿಯನ್ನು ಹೊಸ ವರುಷವಾಗಿ ಗೌಡ ಸಾರಸ್ವತರು ಆಚರಿಸುತ್ತಾರೆ. ಪರಕೆ ಇದ್ದ ಕುಟುಂಬದವರು ಮಾತ್ರ ಗಣೇಶನ ಹಬ್ಬವನ್ನು

ಆಚರಿಸುತ್ತಾರೆ. ಬ್ರಾಹ್ಮಣರು ಕಾಮ್ಯ ವ್ರತಗಳನ್ನು ಮಾಡಬಾರದು. ಹಾಗಾಗಿ ಚೌತಿಯು ಹಬ್ಬ ಕೇವಲ ಹರಕೆಯ ಕುಟುಂಬಕ್ಕೆ ಮಾತ್ರ. ಆ ಕುಟುಂಬವ ಸಂತತಿ ಅದನ್ನು ಮುಂದುವರಿಸಿಕೊಂಡು ಹೋಗತಕ್ಕದ್ದು.

ಮಾಧ್ವರಾದ ಗೌಡ ಸಾರಸ್ವತರು ಕೃಷ್ಣಾಷ್ಟಮಿಯನ್ನೂ ಮಾಡುತ್ತಾರೆ. ವಿಷ್ಣು ಸಹಸ್ರನಾಮದೊಂದಿಗೆ, ಸಹಸ್ರ ತುಳಸೀದಳ ಅರ್ಚನೆ, ಅಷ್ಟೋತ್ತರ ಪಠಣ. ಅಂತ್ಯದಲ್ಲಿ ಚಂದ್ರನಿಗೆ ಅರ್ಘ್ಯ ಕೊಡುವುದು ಮೊದಲಾದ ಕ್ರಮಗಳಿವೆ.

ದೀಪಾವಳಿ ಅತಿ ವಿಜೃಂಭಣೆಯಿಂದ ಆಚರಿಸಲ್ಪಡುತ್ತದೆ. ಹಾಗೆ ನೋಡಿದರೆ ದೀಪಾವಳಿ ವೈಶ್ಯರ ಹಬ್ಬ. ಗೌಡ ಸಾರಸ್ವತರಲ್ಲೂ ಇದೀಗ ವೈಶ್ಯ ವೃತ್ತಿ ಹೆಚ್ಚಾಗಿ. ದೀಪಾವಳಿಯೇ ಹೊಸ ವರ್ಷವೆಂದು ತಿಳಿದು ಲಕ್ಷ್ಮೀ ಪೂಜೆ ರಾತ್ರಿ, ವ್ಯಾಪಾರ ವಹಿವಾಟಿನ ಲೆಕ್ಕಪತ್ರಗಳನ್ನು ಪೂಜಿಸುವ ಕ್ರಮ ರೂಢಿಯಲ್ಲಿದೆ.

**ಊಟ :**

ಗೌಡ ಸಾರಸ್ವತ ಜನಾಂಗದಲ್ಲಿ ಹಬ್ಬಕ್ಕಿಂತಲೂ ಹಬ್ಬದ ಊಟವೇ ಅಮೋಘವಾಗಿರುತ್ತದೆ. ಹಬ್ಬಕ್ಕೆ ಇದ್ದಷ್ಟೇ ಪ್ರಾಮುಖ್ಯತೆ ಹಬ್ಬದ ಊಟಕ್ಕೂ ಇದೆ. ಇವರು ವಲಸೆ ಬಂದ ಜನರೆಂದು ಮೊದಲೇ ತಿಳಿಸಿದ್ದೇವೆ. ಹಾಗಾಗಿ ಕಂದ ಮೂಲ. ಗೆಡ್ಡೆ ಗೆಣಸುಗಳೆಂದರೆ 'ದೊರ್ಕೆ'ಗಳಿಗೆ ಬಹಳ ಪ್ರಿಯ. ಮಾಡ್ಡಿ, ಫಾಗಿಲ. ಕಳಲೆಗಳಂತಹ ವಿಶಿಷ್ಟ ರುಚಿಗಳು (delicacies) ಇವರಿಗೆ ಅಚ್ಚುಮೆಚ್ಚು. ಈ ಸಮಾಜದ್ದೇ ಆದ ವಿಶಿಷ್ಟ ರೀತಿಯ ಅಡಿಗೆ – (ತೊಗರಿ ಬೇಳೆಯ ತೊವ್ವೆ) ದಾಳಿ ತೋಯ, ಬಿಬ್ಬ್ಯಾ ಉಪ್ಕರಿ (ಗೋಡಂಬಿ ಪಲ್ಯ) ; ಅಂಬ್ಯಾ ಉಪ್ಕರಿ (ಹಣ್ಣು ಮಾವಿನ ಸೀಕರಣೆ) ಪತ್ರಡೆ (ಕೆಸುವಿನ ಎಲೆಯ ಮೇಲೆ ಮಸಾಲೆ ಹಚ್ಚಿ ಹೆಚ್ಚಾಗಿ ಮಾಡುವ ಖಾದ್ಯ) ಇವೇ ಮೊದಲಾದವು ಇತರ ಯಾವುದೇ ಜನಾಂಗದಲ್ಲಿ ಕಂಡುಬರುವುದಿಲ್ಲ. ಬಾಯಿ ರುಚಿಯಲ್ಲಿ ಗೌಡ ಸಾರಸ್ವತರು ಎಲ್ಲರನ್ನೂ ಹಿಮ್ಮೆಟ್ಟಿಸಿದ್ದಾರೆ.

— 0 —

### (ಆ) ಮಠಗಳು ಮತ್ತು ಮಠಾಧಿಪತಿಗಳು :

ಗೌಡ ಸಾರಸ್ವತ ಸಮಾಜದ ಪ್ರಾಚೀನ ಮಠ ಹಾಗೂ ಮಠಾಧಿಪತಿಗಳ ಪರಿಚಯವಾಗಲು ನಮಗೆ ದೊರಕಿದ ತಾಮ್ರಪತ್ರಗಳೇ ಸಾಕ್ಷಿ. ತಾಮ್ರಪತ್ರಗಳು ಚರಿತ್ರಾರ್ಹ ದಾಖಲೆಗಳು ಮಾತ್ರವಲ್ಲ ಅಳಿದು ಹೋದ ಇತಿಹಾಸಕ್ಕೆ ಪುನರ್ಜನ್ಮ ನೀಡುವ ಸಾಧನಗಳು. ಕೊಚ್ಚಿನ್‌ನ ಎಸ್. ಪುರುಷೋತ್ತಮ ಮಲ್ಯ ಅವರಿಗೆ ದೊರೆತ ತಾಮ್ರಪತ್ರವೊಂದು ಕನ್ನಡ ಭಾಷೆಯಲ್ಲಿದೆ. ದೇವನಾಗರಿ ಲಿಪಿಯಲ್ಲಿ ಬರೆದಿದ್ದ ಈ ತಾಮ್ರಪತ್ರ ಮುನ್ನೂರಮೂರು ವರ್ಷಗಳಷ್ಟು ಹಳೆಯದು. ಇದು ಮುರಿದು ಇಬ್ಭಾಗವಾಗಿದ್ದರೂ ಇದರಲ್ಲಿ ಬರೆದಿದ್ದ ಅಕ್ಷರಗಳೇನೂ ನಷ್ಟವಾಗಿಲ್ಲ. ಇದು ಶಕವರ್ಷ 1603ರಲ್ಲಿ (1681 ಕ್ರಿ.ಶ.) ಬರೆಯಲ್ಪಟ್ಟಿದ್ದು, ಹದಿನೇಳನೆಯ ಶತಮಾನದ ಉತ್ತರಾರ್ಧದಲ್ಲಿ ರಚಿತವಾದ ಈ ತಾಮ್ರಪತ್ರದಲ್ಲಿ ದಕ್ಷಿಣ ಭಾರತದ ಊರುಗಳಾದ ಸಾರಸಸ್ತಿ. ಭಟ್ಕಳ, ಬಸ್ರೂರು, ಕೊಚ್ಚಿ, ಕಾರ್ಕಳ ಮೊದಲಾದವುಗಳ ಹೆಸರುಗಳಿವೆ. ಆ ಕಾಲದಲ್ಲಿ ಆರ್ಯರೂ, ದ್ರಾವಿಡರೂ ಸಂಸ್ಕೃತ ಭಾಷೆಯಿಂದ ಸ್ವಲ್ಪ ಭಿನ್ನವಾದ ದೇವನಾಗರಿ ಲಿಪಿಯಲ್ಲಿ ಬರೆಯುತ್ತಿದ್ದರು ಎನ್ನುವುದಕ್ಕೆ ಈ ತಾಮ್ರಪತ್ರಗಳೇ[23] ಉತ್ತರ.

1681ರಲ್ಲಿ ಶ್ರೀ ರಾಘವೇಂದ್ರ ತೀರ್ಥರು (ಆಗಿನ ಕಾಶಿಮಠ ಸಂಸ್ಥಾನದ ಗುರುಗಳು) ಈ ತಾಮ್ರಪತ್ರವನ್ನು ಕೊಚ್ಚಿಯ ರಾಜರಿಗೆ ನೀಡಿದ್ದರು. ಈ ತಾಮ್ರಪತ್ರವನ್ನು ರಾಯಸಪತ್ರ ಎಂದೂ ಹೇಳಬಹುದು. ದ್ವೈತ ಸಿದ್ಧಾಂತವನ್ನು ಬೋಧಿಸುವ ಮಧ್ವಾಚಾರ್ಯರನ್ನು (1238-1317) ಇಲ್ಲಿ ಮೂಲ ಗುರುಗಳೆಂದು ಗುರುತಿಸಬೇಕು.

ಮಧ್ವಾಚಾರ್ಯರು ವೇದ, ಉಪನಿಷತ್, ಬ್ರಾಹ್ಮಣ, ಆರಣ್ಯಕ, ಭಗವದ್ಗೀತೆಗಳನ್ನು ಹೊಸ ಆಯಾಮದಲ್ಲಿ ನೋಡಿ, ಅವರ ಸಾರಸರ್ವಸ್ವವನ್ನೇ ಜೊತೆಗೂಡಿಸಿ ಭಾಷ್ಯಗಳನ್ನು ರಚಿಸಿದರು. ಭಾಗವತ ತಾತ್ಪರ್ಯ ನಿರ್ಣಯ, ಕೃಷ್ಣಾಮೃತ ಮಹಾರ್ಣವ, ತಂತ್ರಸಾರ, ದ್ವಾದಶ ಸ್ತೋತ್ರ–ಹೀಗೆ ತಮ್ಮ ಮೂವತ್ತೇಳು ಕೃತಿಗಳ ತಾತ್ಪರ್ಯದಿಂದ ಸರ್ವಮೂಲ ಗ್ರಂಥವನ್ನು ರಚಿಸಿದರು. ತಮ್ಮ ದ್ವೈತಸಿದ್ಧಾಂತವನ್ನು ಪ್ರಚುರಪಡಿಸಲು ಇವರು ಭಾರತ ಯಾತ್ರೆಯನ್ನು ಕೈಗೊಂಡಿದ್ದರು. ತಾವು ಪ್ರಥಮ ಶಿಷ್ಯ ತೀರ್ಥರನ್ನು ಆರಿಸಿದರು. ಇವರ ಶಿಷ್ಯ ಜಯ

ತೀರ್ಥರು. ಈತ ಉತ್ತರಾದಿ ಮಠದ ಸ್ಥಾಪಕರು. ಜಯತೀರ್ಥರ ಗುರು ಅಕ್ಷೋಭ್ಯ ತೀರ್ಥರು ಗುರುಗಳಾದ ಮಧ್ವಾಚಾರ್ಯರಿಂದ ನೇರವಾಗಿ ಆರಿಸಲ್ಪಟ್ಟುದರಿಂದ ಈ ಆದಿಮಠವನ್ನೇ ಮೂಲ ಸಂಸ್ಥಾನ ಎಂದು ಕರೆದರು. ಈ ಜಯತೀರ್ಥರ ಬಳಿಕ ಶ್ರೀ ವಿದ್ಯಾಧಿರಾಜತೀರ್ಥ, ಶ್ರೀ ಕವೀಂದ್ರತೀರ್ಥ, ಶ್ರೀ ವಾಗೀಶತೀರ್ಥ, ಶ್ರೀ ರಾಮಚಂದ್ರತೀರ್ಥ–ಹೀಗೆ ಗುರುಪರಂಪರೆ ಮುಂದುವರೆಯುತ್ತದೆ. ಸಾಮಾನ್ಯವಾಗಿ ಒಬ್ಬ ಗುರು ಒಬ್ಬ ಶಿಷ್ಯನನ್ನು ಆರಿಸುವುದು ವಾಡಿಕೆ. ಇಲ್ಲಿ ರಾಮಚಂದ್ರ ತೀರ್ಥರು ಇಬ್ಬರು ಶಿಷ್ಯರನ್ನು ಆರಿಸಿದರು : 1. ಶ್ರೀ ವಿಭುದೇಂದ್ರತೀರ್ಥ, 2. ಶ್ರೀ ವಿದ್ಯಾನಿಧಿತೀರ್ಥ. ಇವರಲ್ಲಿ ಶ್ರೀ ವಿದ್ಯಾನಿಧಿ ತೀರ್ಥರೇ ಉತ್ತರಾದಿಮಠದ ಚಾಲಕರಾಗಿ ಮುಂದುವರೆಯುತ್ತಾರೆ. ಇವರ ಶಿಷ್ಯ ಪರಂಪರೆಯಲ್ಲಿ ಬಂದವರು ಶ್ರೀ ಸತ್ಯಾಧೀಶತೀರ್ಥರು. ಈ ತಾಮ್ರಪತ್ರದಲ್ಲಿ ಬರುವ ಹೆಸರು ಈ ಸತ್ಯಾಧೀಶ ತೀರ್ಥರದು.

ರಾಮಚಂದ್ರತೀರ್ಥರ ಮತ್ತೊಬ್ಬ ಹಿರಿಯ ಶಿಷ್ಯ ವಿಭುದೇಂದ್ರತೀರ್ಥರು. ಇವರು ಕುಂಭಕೋಣದಲ್ಲೊಂದು ನವೀನ, ಸ್ವತಂತ್ರ ಮಠವನ್ನು ಸ್ಥಾಪಿಸುತ್ತಾರೆ. ಮಧ್ವಾಚಾರ್ಯರ ದ್ವೈತಸಿದ್ಧಾಂತವನ್ನು ಇದೂ ಬಿತ್ತರಿಸುವುದರಿಂದ ಈ ಕುಂಭಕೋಣ ಮಠ, ಮೂಲ ಉತ್ತರಾದಿ ಮಠದ ಒಂದು ಭಾಗ ಎಂದರೂ ತಪ್ಪಾಗಲಾರದು.

ಕುಂಭಕೋಣ ಮಠದ ಗುರು ಪರಂಪರೆ ಹೀಗಿದೆ.

ವಿಭುದೇಂದ್ರತೀರ್ಥ—ಜಿತಮಿತ್ರತೀರ್ಥ—ಸುರೇಂದ್ರತೀರ್ಥ— ವಿಷ್ಣು ತೀರ್ಥ (ಇವರೇ ವಿದ್ಯಾನಿಧಿ ತೀರ್ಥ ಹಾಗೂ ವಿಜಯೀಂದ್ರ ತೀರ್ಥ 1585)— ಸುಧೀಂದ್ರ ತೀರ್ಥ — ರಾಘವೇಂದ್ರಸ್ವಾಮಿ (ಮಂತ್ರಾಲಯ) — ಯೋಗೀಂದ್ರ ವಡಾರ.

ಈ ವಿಷ್ಣುತೀರ್ಥರು ಪ್ರಸಿದ್ಧ ವಿದ್ವಾಂಸರು. ಸುಮಾರು ನೂರಕ್ಕೂ ಮಿಕ್ಕಿನ ಕೃತಿಗಳನ್ನು ರಚಿಸಿ ಮಾಧ್ವಮತದ ಪರಮ ಭಕ್ತರಾಗಿ ಮೂಲ ಮಠಕ್ಕೆ ಹೆಸರು ತಂದವರು. ಈ ವಿಷ್ಣುತೀರ್ಥರನ್ನೇ ಅವರ ಗುರು ಸುರೇಂದ್ರತೀರ್ಥರು ವಿಜಯೀಂದ್ರ ತೀರ್ಥರೆಂದು ನಾಮಕರಣ ಮಾಡಿದರು. ಮಾತ್ರವಲ್ಲ ಇವರನ್ನು ಕುಂಭಕೋಣದ ಪೀಠಕ್ಕೆ ಆರಿಸಿದರು.

ಈ ವಿಜಯೀಂದ್ರತೀರ್ಥರು ತಮ್ಮ ಮಠ ಪ್ರಸಾರಕ್ಕಾಗಿ ದಕ್ಷಿಣ ಭಾರತ ಸಮಸ್ತಕ್ಕೂ ಯಾತ್ರೆ ಕೈಗೊಂಡಾಗ ಕೇರಳದಲ್ಲಿನ ಗೌಡ ಸಾರಸ್ವತ ಬ್ರಾಹ್ಮಣರು

ಮಾಧ್ವಮತಾವಲಂಬಿಗಳು, ಶ್ರೀ ಗುರುಗಳಲ್ಲಿ ತಮ್ಮವನೇ ಆದ ಒಬ್ಬ ಶಿಷ್ಯನನ್ನು ಆರಿಸುವಂತೆ ಕಳಕಳಿಯಿಂದ ಕೇಳಿಕೊಳ್ಳುತ್ತಾರೆ. ಹೀಗೆ ಆರಿಸಲ್ಪಟ್ಟವರೇ ಯಾದವೇಂದ್ರತೀರ್ಥರು. ಇವರು ಗೌಡಸಾರಸ್ವತ ಸಮಾಜದ ಮೊತ್ತ ಮೊದಲ ಗುರುಗಳು. ಕಾಶಿಯ ಬ್ರಹ್ಮಘಾಟಿನಲ್ಲಿ ಮೊತ್ತಮೊದಲ ಕಾಶಿಮಠ ಹೀಗೆ ಹುಟ್ಟಿಕೊಳ್ಳುತ್ತದೆ. ಹೀಗೆ ಕುಂಭಕೋಣ ಮಠದ ವಿಜಯೇಂದ್ರತೀರ್ಥರಿಂದ ಕಾಶಿಮಠ ಹುಟ್ಟಿಕೊಂಡಿತು. ಕುಂಭಕೋಣ ಮಠದ ಮೂಲ ಮಠವಾದ ಉತ್ತರಾದಿ ಮಠವೇ, ಕಾಶಿಮಠಕ್ಕೂ ಮೂಲವೆನಿಸಿತು. ಹೀಗೆ ಉತ್ತರಾದಿ ಮಠದ ಮಕ್ಕಳೇ ಕಾಶಿಮಠ ಹಾಗೂ ಕುಂಭಕೋಣ ಮಠವಾಯಿತು.

ಗೌಡ ಸಾರಸ್ವತ ಬ್ರಾಹ್ಮಣರು ಕವಲೆಮಠ, ಉತ್ತರಾದಿಮಠ, ಕಾಶೀಮಠ, ಗೋಕರ್ಣ ಪರ್ತಗಾಳಿ ಜೀವೋತ್ತಮ ಮಠ, ಚಿತ್ರಾಪುರ ಮಠ, ದಬೋಲಿ ಮಠಗಳಿಗೆ ನಡೆದುಕೊಳ್ಳುತ್ತಾರೆ. ಕರ್ನಾಟಕದಲ್ಲಿ ಶ್ರೀ ಸಂಸ್ಥಾನ ಕವಲೆ ಮಠಗಳು ಬೆಳಗಾವಿ ಜಿಲ್ಲೆಯ ಖಾನಾಪುರ, ಕಾರವಾರದ ಬಳಿಯ ಸದಾಶಿವಘಡ, ಹಲಗೆ, ಗೋಕರ್ಣ ಮೊದಲಾದೆಡೆ ಇವೆ. ವೈಷ್ಣವ ಸಾರಸ್ವತರು ಮೂಲತಃ ಉತ್ತರಾದಿ ಮಠಕ್ಕೆ ಸೇರಿದವರು. ತೀರ್ಥಹಳ್ಳಿ ಹಾಗೂ ಉತ್ತರ ಕನ್ನಡ ಜಿಲ್ಲೆಯ ಹಲವು ಭಾಗಗಳವರು ವಿಶೇಷವಾಗಿ ಈ ಸಂಸ್ಥಾನ ಮಠದ ಭಕ್ತರು. ಕಾಶೀಮಠದ ಸಂಸ್ಥಾನ ಮಠಗಳು, ಬಂಟ್ವಾಳ, ಕಾರ್ಕಳ, ಮುಲ್ಕಿ, ಪಣಂಬೂರು, ಕೊಚ್ಚಿ, ಆಲಪ್ಪಿ, ಕ್ವಿಲೋನ್ ಮೊದಲಾದೆಡೆಗಳಲ್ಲಿವೆ. ಗೋಕರ್ಣ ಪರ್ತಗಾಳಿ ಜೀವೋತ್ತಮ ಮಠವು ಬಸ್ರೂರು, ಭಟ್ಕಳ, ಮಂಗಳೂರು, ಅಂಕೋಲ, ಕಾರವಾರ, ಶಿರಸಿ, ಬೀಳಗಿ ಹಾಗೂ ಉತ್ತರ ಕನ್ನಡ ಜಿಲ್ಲೆಯ ಕೆಲವು ಭಾಗಗಳಲ್ಲಿವೆ. ಚಿತ್ರಾಪುರ ಸಂಸ್ಥಾನ ಮಠಗಳು ಗೋಕರ್ಣ, ಉತ್ತರ ಕನ್ನಡ ಜಿಲ್ಲೆಯ ಮಲ್ಲಾಪುರ ಮತ್ತು ಮಂಗಳೂರುಗಳಲ್ಲಿವೆ. ಚಿತ್ರಾಪುರ ಮಠವನ್ನು ಬರೀ ಸಾರಸ್ವತ ಮಠವೆಂದು ಕರೆಯುತ್ತಾರೆ.

ಪ್ರಸ್ತುತ ಗೌಡ ಸಾರಸ್ವತ ಬ್ರಾಹ್ಮಣ ಸಮಾಜವು ಈ ಕೆಳಗಣ ಮೂರು ಮಠಗಳಿಗೆ ನಡೆದುಕೊಳ್ಳುತ್ತದೆ.[24]

1. ಶ್ರೀ ಸಂಸ್ಥಾನ ಕೈವಲ್ಯ ಮಠ (ಕವಲೇ ಮಠ)
2. ಶ್ರೀ ಸಂಸ್ಥಾನ ಗೋಕರ್ಣ ಪರ್ತಗಾಳಿ ಜೀವೋತ್ತಮ ಮಠ.
3. ಶ್ರೀ ಸಂಸ್ಥಾನ ಕಾಶೀಮಠ

ಶ್ರೀ ಕೈವಲ್ಯ ಮಠ ಅತಿ ಪ್ರಾಚೀನ ಮಠ. ಇದರ ಶಿಷ್ಯ ಸಮುದಾಯದವರು ಶೈವ ಮತಾನುಯಾಯಿಗಳೂ, ಅದ್ವೈತ ತತ್ವಪಾಲಕರೂ ಆಗಿದ್ದಾರೆ. ಗೋಕರ್ಣ ಹಾಗೂ ಕಾಶೀಮಠಗಳ ಶಿಷ್ಯ ಸಮುದಾಯದವರು ವೈಷ್ಣವರೂ, ದ್ವೈತ ಸಂಪ್ರದಾಯಿಗಳೂ ಆಗಿದ್ದಾರೆ.

ಯಾವುದೇ ಒಂದು ಸಮಾಜವನ್ನು ಮಠಗಳು ನಿರ್ದೇಶಿಸುತ್ತವೆ. ಈ ಮಠಗಳನ್ನು ಗುರು ಪರಂಪರೆಯಲ್ಲಿ ಬರುವ ಶ್ರೀ ಗುರುಗಳು ಮಠಾಧಿಪತಿಗಳಾಗಿ ನಡೆಸುತ್ತಾರೆ. ಸಮಾಜದ ಆಗುಹೋಗುಗಳನ್ನು ಪ್ರಸ್ತುತ ಸಮಸ್ಯೆಗಳನ್ನು ಮಠಾಧಿಪತಿಗಳ ಗಮನಕ್ಕೆ ತರಲಾಗುವುದು. ಸಮಾಜ ಕಲ್ಯಾಣ ಕಾರ್ಯಗಳು, ಮತೀಯ ವೈಮನಸ್ಯ ನಿವಾರಣೆ ಮೊದಲಾದವುಗಳಿಗೆ ಸಂಬಂಧಿಸಿದಂತೆ ಮಠಾಧಿಪತಿಗಳು ತಮ್ಮ ಪೀಠದಲ್ಲಿದ್ದುಕೊಂಡು ಆದೇಶಿಸುತ್ತಾರೆ.

ಗೌಡ ಸಾರಸ್ವತರು ಮೂಲತಃ ವೈದಿಕರು. ಪೂರ್ವದಲ್ಲಿ ಇವರು ಕೈವಲ್ಯ ಮಠದ ಅನುಯಾಯಿಗಳು. ಈಮಠದ ಮೂಲ ಗುರು ಶ್ರೀ ವಿವರಣಾಚಾರ್ಯರು. ಇವರ ಇಬ್ಬರು ಶಿಷ್ಯರಲ್ಲಿ ಒಬ್ಬರು ಗೌಡಪಾದಾಚಾರ್ಯರು. ಇವರು ಬರೆದ 'ಮಾಂಡುಕ್ಯ ಕಾರಿಕಾ' ಗೌಡ ಸಾರಸ್ವತರಿಗೆ ಮೂಲ ಗ್ರಂಥ. ಈ ಗ್ರಂಥಕ್ಕೆ ಶ್ರೀ ಶಂಕರಾಚಾರ್ಯರು ವ್ಯಾಖ್ಯಾನ ಬರೆದಿದ್ದಾರೆ. ಈ ಮೂಲ ಗ್ರಂಥವನ್ನೇ ಶ್ರೀ ಶಂಕರಾಚಾರ್ಯರು ಅನುಮೋದಿಸಿದ್ದಾರೆ ಕೂಡ. ಸು. 777–820ರಲ್ಲಿ ಶ್ರೀ ಶಂಕರಾಚಾರ್ಯರು ಶ್ರೀ ಗೌಡಪಾದಾಚಾರ್ಯರನ್ನು ಭೇಟಿಯಾಗಿದ್ದರು. ಇವರು ತಮ್ಮ ಶಿಷ್ಯ ಶ್ರೀ ಗೋವಿಂದ ಪಾದಾಚಾರ್ಯರಿಂದ ಶ್ರೀ ಶಂಕರಾಚಾರ್ಯರಿಗೆ ದೀಕ್ಷೆ ಕೊಡಿಸಿದ ಬಗ್ಗೆ ಐತಿಹಾಸಿಕ ಉಲ್ಲೇಖವಿದೆ. ಶ್ರೀ ಶಂಕರಾಚಾರ್ಯರ ಅದ್ವೈತ ತತ್ತ್ವದ ಪ್ರತಿಪಾದನೆಯನ್ನೇ ಗೌಡ ಸಾರಸ್ವತರು ಒಪ್ಪಿಕೊಂಡಿದ್ದಾರೆ. ಈ ವರ್ಗ ಶಿವೋಪಾಸಕ ಗೌಡ ಸಾರಸ್ವತ ಎಂದಾಯಿತು.

ಸುಮಾರು ಹದಿನೈದನೆಯ ಶತಮಾನದಲ್ಲಿ ಮತ್ತೊಂದು ಘಟನೆಯು ಸಂಭವಿಸಿತು. ಉತ್ತರಾದಿ ಮಠದ ಶ್ರೀ ಗುರು ಶ್ರೀ ರಾಮಚಂದ್ರಸ್ವಾಮಿಯವರಿಗೂ ಅವರ ಶಿಷ್ಯ ಶ್ರೀ ವಿಭುದೇಂದ್ರತೀರ್ಥಸ್ವಾಮಿಯವರಿಗೂ ಅಭಿಪ್ರಾಯ ಭೇದ ಉಂಟಾಗಿ ಅವರು ಇನ್ನೊಬ್ಬ ಶಿಷ್ಯರಿಗೆ ಸನ್ಯಾಸ ದೀಕ್ಷೆಯನ್ನಿತ್ತರು. ಹೀಗೆ ಉತ್ತರಾದಿ ಮಠದಲ್ಲಿ ಬಿರುಕು ಬಿದ್ದ ಮೇಲೆ ಶ್ರೀ ವಿಭುದೇಂದ್ರತೀರ್ಥ ಸ್ವಾಮಿಗಳು ಕುಂಭಕೋಣದಲ್ಲಿ ತಮ್ಮ ಹೊಸ ಮಠ — 'ಕುಂಭಕೋಣಮಠ' ಪ್ರಾರಂಭಿಸಿದರು. ಈ ವಿಭಜನೆಯ ಬಳಿಕ ಭಟ್ಕಳದಿಂದ ಗೋವೆಯ ವರೆಗಿನ ಶಿಷ್ಯ ವರ್ಗದವರು, ಉತ್ತರಾದಿ ಮಠವನ್ನೂ, ಮಂಗಳೂರಿನಿಂದ ತ್ರಿವೇಂಡ್ರಂ (ಕೇರಳ) ದವರೆಗಿನ ಶಿಷ್ಯ ವರ್ಗದವರು ಕುಂಭಕೋಣ ಮಠವನ್ನೂ ಅನುಸರಿಸುವಂತಾಯಿತು. ಭಟ್ಕಳ ಮತ್ತು ಮಂಗಳೂರಿನ ನಡುವಿನ ಶಿಷ್ಯ ವರ್ಗದವರಲ್ಲಿ ಕೆಲವರು ಉತ್ತರಾದಿ ಮಠಕ್ಕೂ, ಕೆಲವರು ಕುಂಭಕೋಣ ಮಠಕ್ಕೂ ಸೇರಿದರು. ಹೀಗೆ ಮೂಲ ಉತ್ತರಾದಿಮಠದ ವಿಭಜನೆ ಹದಿನಾರನೆಯ ಶತಮಾನದ ಪೂರ್ವಾರ್ಧದಲ್ಲೇ ಆಗಿಹೋಯಿತು.

ಕೊಚ್ಚಿಯ ಸಾರಸ್ವತ ಬ್ರಾಹ್ಮಣರು ಕುಂಭಕೋಣ ಮಠಾನುಯಾಯಿಗಳು. ಅಂದಿನ ಶ್ರೀ ಕುಂಭಕೋಣ ಮಠಾಧಿಪತಿಗಳಾದ ಶ್ರೀ ಸುರೇಂದ್ರತೀರ್ಥಸ್ವಾಮಿಗಳ ಶಿಷ್ಯ ಶ್ರೀ ವಿಜಯೇಂದ್ರತೀರ್ಥ ಸ್ವಾಮಿಗಳಲ್ಲಿ ತಮ್ಮಲ್ಲಿನ ಒಬ್ಬ ಬ್ರಹ್ಮಚಾರಿಗೆ ಸನ್ಯಾಸ ದೀಕ್ಷೆ ಕರುಣಿಸಬೇಕೆಂದು ಬಿನ್ನವಿಸಿಕೊಳ್ಳುತ್ತಾರೆ. ಅದರಂತೆಯೇ ಶ್ರೀ ವಿಜಯೇಂದ್ರತೀರ್ಥ ಸ್ವಾಮಿಗಳು ಶಿಷ್ಯರ ಮನವಿಯನ್ನು ಒಪ್ಪಿ ಯೋಗ್ಯ ಬಾಲಕನೊಬ್ಬನನ್ನು ಆರಿಸಿ, ಆತನನ್ನು ಕುಂಭಕೋಣಕ್ಕೆ ಕರೆದೊಯ್ದು ಶಿಕ್ಷಣ ನೀಡಿ ವೇದ ಪಾರಂಗತನನ್ನಾಗಿ ಮಾಡುತ್ತಾರೆ. ಶ್ರೀ ಕಾಶೀಕ್ಷೇತ್ರದಲ್ಲಿ ಆ ಬ್ರಹ್ಮಚಾರಿಗೆ ಸನ್ಯಾಸ ದೀಕ್ಷೆಯನ್ನು ದಯಪಾಲಿಸಿ ಶ್ರೀ ಯಾದವೇಂದ್ರತೀರ್ಥರೆಂದು ನಾಮಕರಣ ಮಾಡುತ್ತಾರೆ. ನವೀನವಾಗಿ ಶ್ರೀ ಸಂಸ್ಥಾನ ಕಾಶೀಮಠ ಪ್ರಾರಂಭವಾದದ್ದು ಆಗಲೇ. ಅಷ್ಟು ಮಾತ್ರವಲ್ಲದೆ ಶ್ರೀ ಯಾದವೇಂದ್ರತೀರ್ಥರಿಗೆ ಶ್ರೀ ರಾಮದೇವರ ಒಂದು ಪ್ರತಿಮೆಯನ್ನೂ, ಶ್ರೀ ವೇದವ್ಯಾಸದೇವರ ಒಂದು ಪ್ರತಿಮೆಯನ್ನೂ, ಸಾಲಿಗ್ರಾಮ, ಪಲ್ಲಕ್ಕಿ, ಶ್ವೇತಛತ್ರ, ಉಭಯ ಚಾಮರಗಳನ್ನೂ ಶ್ರೀ ವಿಜಯೇಂದ್ರತೀರ್ಥ ಸ್ವಾಮಿಗಳು ನೀಡುತ್ತಾರೆ. ಇವನ್ನು ಶ್ರೀ ಸುಧೀಂದ್ರತೀರ್ಥಸ್ವಾಮಿಗಳು ಇಂದಿಗೂ ಪೂಜಿಸಿಕೊಂಡು ಬಂದಿದ್ದಾರೆ. ಕ್ರಿ.ಶ. 1542ರ ದೇವನಾಗರಿ ಲಿಪಿಯಲ್ಲಿನ ಒಂದು ತಾಮ್ರಶಾಸನ ಈ ಮೇಲಿನ ಘಟನೆಯನ್ನು ಸಮರ್ಥಿಸುತ್ತದೆ.[25]

## ಕಾಶೀಮಠದ ಶ್ರೀಗುರು ಪರಂಪರೆ :

### ಶ್ರೀ ಯಾದವೇಂದ್ರತೀರ್ಥರು :

ಶ್ರೀ ಮಧ್ವಾಚಾರ್ಯರಿಂದ ಪ್ರಾರಂಭಗೊಂಡ ಉತ್ತರಾದಿಮಠದ ಒಂದು ಶಾಖೆ ಕಾಶೀಮಠವನ್ನು ಗೌಡ ಸಾರಸ್ವತರಲ್ಲಿನ ಒಂದು ವರ್ಗ ಮಾನ್ಯಮಾಡಿರುತ್ತದೆ. ಈ ಕಾಶೀಮಠದ ಮೊದಲ ಗುರು ಶ್ರೀ ಯಾದವೇಂದ್ರತೀರ್ಥರು. ಇವರಿಂದ ಈ ಮಠದ ಗುರುಪರಂಪರೆ ಪ್ರಾರಂಭಗೊಳ್ಳುತ್ತದೆ.

### ಶ್ರೀ ಯಾದವೇಂದ್ರತೀರ್ಥರು :

ಇವರು ಕಾಶಿ ಮತ್ತು ಭಟ್ಕಳ ಮಠಗಳ ಸಂಸ್ಥಾಪಕರು. ಇವರಿಗೆ ಭಟ್ಕಳದ ಜೋಗನಾಲ್ಕ ಎನ್ನುವವರು ಕೆಲವು ಭೂಭಾಗಗಳನ್ನು ಶಾಸನದ ಮೂಲಕ ಸಮರ್ಪಿಸಿದ್ದರು. 1608ರಲ್ಲಿ ಇವರು ಭಟ್ಕಳದಲ್ಲಿ ವೃಂದಾವನಸ್ಥರಾದರು.

### ಶ್ರೀ ಕೇಶವೇಂದ್ರತೀರ್ಥರು :

ಶ್ರೀ ಯಾದವೇಂದ್ರತೀರ್ಥರ ಉತ್ತರಾಧಿಕಾರಿಯಾಗಿ ಇವರು ವಯ ಮಾಡಿಸುತ್ತಾರೆ. ಕುಂದಾಪುರ ತಾಲ್ಲೂಕಿನ ಬಸ್ರೂರಿನಲ್ಲಿ ಶ್ರೀ ಸಂಸ್ಥಾನದ ಒಂದು

ಶಾಖೆಯನ್ನು ತೆರೆಯುತ್ತಾರೆ. 1670ರಲ್ಲಿ ಬಸ್ರೂರಿನಲ್ಲಿ ವೃಂದಾವನಸ್ಥರಾಗುತ್ತಾರೆ.

**ಶ್ರೀ ಉಪೇಂದ್ರತೀರ್ಥರು :**

ಇವರ ನಂತರ ಮೂರನೆ ಗುರುಗಳಾಗಿ ಶ್ರೀಮದ್ ಉಪೇಂದ್ರತೀರ್ಥ ಶ್ರೀಪಾದಂಗಳವರು ವಿಯುನಾಡಿಸುತ್ತಾರೆ. ಶ್ರೀ ಯಾದವೇಂದ್ರತೀರ್ಥರು ಕಾಶಿಯಲ್ಲಿ ಖರೀದಿಸಿದ ಭೂಭಾಗವನ್ನು ಇವರು ವಿಸ್ತರಿಸಿದರು. ಇವರ 1674ರಲ್ಲಿ ಕಾಶಿಯಲ್ಲಿ ವಿಷ್ಣುಪದವನ್ನೈದಿದರು. ಆದರೆ ಅವರ ಹೆಸರಿನಲ್ಲಿ ಅಲ್ಲಿ ಬೃಂದಾವನ ನಿರ್ಮಿತವಾಗಲಿಲ್ಲ. ಪಾವನಗಂಗೆಯಲ್ಲಿಯೇ ಅವರು ತಮ್ಮ ಪಾರ್ಥಿವ ಶರೀರವನ್ನು ಸಮರ್ಪಿಸಿಕೊಂಡರು.

**ಇಮ್ಮಡಿ ಶ್ರೀ ಯಾದವೇಂದ್ರತೀರ್ಥರು :**

ಶ್ರೀಗಳವರು ಕಾಶಿಮಠದ ಚತುರ್ಥ ಗುರುವರ್ಯರಾಗಿ ಅಧಿಕಾರ ವಹಿಸಿಕೊಳ್ಳುತ್ತಾರೆ. ಇವರು ಕಾಶಿಯಿಂದ ಕರ್ನಾಟಕಕ್ಕೆ ಬಂದು 1711ರಲ್ಲಿ ಹೆಮ್ಮಾಡಿಯಲ್ಲಿ ಮುಕ್ತಿ ಹೊಂದುತ್ತಾರೆ. ಹೆಮ್ಮಾಡಿಯಲ್ಲಿ ಇವರ ವೃಂದಾವನ ಇದೆ.

**ಶ್ರೀ ರಾಘವೇಂದ್ರತೀರ್ಥರು :**

ಪರಮ ತಪೋನಿಧಿಗಳೂ, ಪ್ರಕಾಂಡ ಪಂಡಿತರೂ, ಪ್ರತಿಭಾ ಸಂಪನ್ನರೂ ಆದ ಶ್ರೀ ರಾಘವೇಂದ್ರತೀರ್ಥ ಶ್ರೀ ಪಾದಂಗಳವರು ಶ್ರೀ ಕಾಶಿಮಠದ ಐದನೆಯ ಪೀಠಾಧಿಪತಿಗಳು. ಇವರಿಗೂ ಕುಂಭಕೋಣ ಮಠದ ಶ್ರೀ ಯೋಗೀಂದ್ರತೀರ್ಥ ಸ್ವಾಮಿಯವರಿಗೂ ಅಭಿಪ್ರಾಯಭೇದವಿದ್ದಂತೆ ತೋರುತ್ತದೆ.

ಇಲ್ಲಿನ ತಾಮ್ರಪತ್ರ ಈ ವಿಷಯನ್ನು ಸಮರ್ಥಿಸುತ್ತದೆ. ಈ ತಾಮ್ರಪತ್ರ ಕಾಶಿಮಠದ ಶ್ರೀ ರಾಘವೇಂದ್ರತೀರ್ಥರನ್ನೂ, ಉತ್ತರಾದಿ ಮಠದ ಸತ್ಯಾಧೀಶ ತೀರ್ಥರನ್ನೂ ಕುರಿತದ್ದು.

ತಾಮ್ರಪತ್ರದ ಪ್ರಕಾರ ರಾಘವೇಂದ್ರ ಮಠದ ಯೋಗೀಂದ್ರವಡಾರರು, ಕೊಚ್ಚಿಗೆ ಬಂದಾಗ ಕಾಶಿಮಠದಿಂದ ತಮಗೆ ಸಲ್ಲಬೇಕಾಗಿದ್ದ ಗೌರವ ಸಲ್ಲಲಿಲ್ಲ ಎಂಬುದು ಅವರ ಆಪಾದನೆ. ತಮಗಾದ ಅಪಮಾನಕ್ಕೆ ಪ್ರತಿಯಾಗಿ ಅವರು 'ತಮ್ಮ ಕುಂಭಕೋಣ ಮಠದ ಹಿರಿಯರಿಂದ ಈ ಕಾಶೀಮಠ ಪ್ರಾರಂಭವಾಗಿ ಇಂದು ಇದೇ ಮಠದಿಂದ ತಮಗೆ ಗೌರವ ಸಲ್ಲಲಿಲ್ಲ ಎಂದು 'ಮಂತ್ರ ಮುದ್ರಾಧಾರಣೆ' ಆಗಕೂಡದೆಂದು' ಕಾಶಿಮಠದ ರಾಘವೇಂದ್ರ ಸ್ವಾಮಿಗಳಿಗೆ ತಿಳಿಸುತ್ತಾರೆ. ಈ

ಮಂತ್ರ 'ಮುದ್ರಾಧಾರಣೆ' ಎಂಬುದು ಸ್ವಾಮಿ ಹಾಗೂ ಶಿಷ್ಯರ ಸಂಬಂಧವನ್ನು ಭದ್ರಪಡಿಸುವಂತಹದು. ಯೋಗೀಂದ್ರ ವಡಾರರು, ರಾಘವೇಂದ್ರ ಸ್ವಾಮಿಗಳನ್ನು ತಮ್ಮ ಕರ್ತವ್ಯದಿಂದ ಪದಚ್ಯುತಗೊಳಿಸಿದ್ದನ್ನು ತಿಳಿದ ಕೊಚ್ಚಿಯ ಮಹಾರಾಜರು ಯೋಗೀಂದ್ರ ವಡಾರರನ್ನು 'ರಾಘವೇಂದ್ರ ಮಠ'ದ ಸ್ವಾಮಿಗಳೆಂದು ಮಾನ್ಯ ಮಾಡಲಿಲ್ಲ.

ಕಾಶೀಮಠಕ್ಕೂ, ರಾಘವೇಂದ್ರ ಮಠಕ್ಕೂ ಕುಂಭಕೋಣ ಮಠವೇ ಮಾತೃ ಸಂಸ್ಥಾನ. ಈ ಮಾತೃಸಂಸ್ಥಾನದ ಆದೇಶವನ್ನು ಎರಡೂ ಮಠಗಳು ಪಾಲಿಸಲೇಬೇಕಾಗಿತ್ತು. ಇದು ತಮ್ಮ ಮಠದ ಅಳಿವು ಉಳಿವಿನ ಪ್ರಶ್ನೆಯಾಗಲು ಕಾಶಿಮಠದ ಶ್ರೀ ರಾಘವೇಂದ್ರ ಸ್ವಾಮಿಗಳು ನಡೆದ ವಿಚಾರವನ್ನು ಮೂಲ ಸಂಸ್ಥಾನವಾದ ಉತ್ತರಾದಿ ಮಠಕ್ಕೆ ಬರೆದು ತಿಳಿಸಬೇಕಾಗಿತ್ತು. ಆದ್ದರಿಂದ ರಾಘವೇಂದ್ರ ತೀರ್ಥರು ತಾಮ್ರಪತ್ರವನ್ನು ಬರೆದು ಉತ್ತರಾದಿ ಮಠದ ಸತ್ಯಾಧೀಶತೀರ್ಥರಿಗೆ ಕಳುಹಿಸಿಕೊಡುತ್ತಾರೆ. ನಡೆದ ಘಟನೆಯನ್ನು ಕೂಲಂಕಷವಾಗಿ ಸಮಾಲೋಚಿಸಿದ ಸತ್ಯಾಧೀಶತೀರ್ಥರು–ಕಾಶೀಮಠಕ್ಕೆ ಪುನಃ ರಾಘವೇಂದ್ರಸ್ವಾಮಿಗಳನ್ನು ಮಾನ್ಯಮಾಡಿ ತಾಮ್ರಪತ್ರದಲ್ಲಿ–'ಮೂಲ ಸಂಸ್ಥಾನಾಧಿಪತಿ' (Head of the original) ಎಂದೇ ಸಂಬೋಧಿಸುತ್ತಾರೆ. ಕಳೆದು ಹೋದ ಅವರ ಗೌರವ ಹಿಂದಕ್ಕೆ ಕೊಟ್ಟು ಮಂತ್ರ ಮುದ್ರಾಧಾರಣೆಗೆ ಅವಕಾಶ ಕೊಡುತ್ತಾರೆ. ಮಾತ್ರವಲ್ಲ ಆ ಕಾಲಕ್ಕೆ ಕೊಂಕಣ ರಾಜ್ಯಗಳಾಗಿದ್ದ ಸಾಸಸ್ಟಿ, ಅಂತ್ರುಜ್, ಭಟ್ಕಳ, ಬಸ್ರೂರ್, ಕೊಚ್ಚಿನ್ ಮೊದಲಾದುವುಗಳನ್ನು ತಾಮ್ರಪತ್ರ ಸ್ಥಿರಪಡಿಸಿತ್ತು. ಯೋಗೀಂದ್ರ ವಡಾರರೊಂದಿಗೆ ಸಂಬಂಧವನ್ನು ಸಂಪೂರ್ಣ ಕಳಕೊಳ್ಳುವಂತೆ ರಾಘವೇಂದ್ರರಿಗೆ ಸೂಚನೆಯನ್ನಿತ್ತಿತು. ರಾಘವೇಂದ್ರರನ್ನು 'ಮೂಲ ಸಂಸ್ಥಾನಾಧಿಪತಿ' ಎಂದು ಕರೆದು ಅವರ ಅಧಿಕಾರ ಕೊಟ್ಟಿದ್ದು ಮಾತ್ರವಲ್ಲ ಮೂಲ ಸಂಸ್ಥಾನವಾದ ಉತ್ತರಾದಿ ಮಠಕ್ಕೆ ಈ ಕಾಶೀಮಠ ಸರಿಸಮ ಎಂದೂ ಆ ತಾಮ್ರಪತ್ರದಲ್ಲಿ ಸೇರಿಸಿದ್ದರು.

ಈ ತಾಮ್ರಪತ್ರವನ್ನು ರಾಘವೇಂದ್ರ ಸ್ವಾಮಿಗಳು, ಕೊಚ್ಚಿಯ ಮಹಾರಾಜರಿಗೆ ಪ್ರಮಾಣ ಪತ್ರವಾಗಿ ತೋರಿಸಿ ಹಕ್ಕುಗಳನ್ನು ಹಾಗೂ ಮಾನ್ಯತೆಯನ್ನು (re-recognition) ಹಿಂದಕ್ಕೆ ಕೇಳುತ್ತಾರೆ. ಈ ತಾಮ್ರಪತ್ರದ ಪುರಾವೆಯಿಂದ ಮಹಾರಾಜರು ರಾಘವೇಂದ್ರರನ್ನು ಮಧ್ವಾಚಾರ್ಯರ ಮಠದ ಮೂಲ ಸಂಸ್ಥಾನಾಧಿಪತಿ ಎಂದೇ ಗುರುತಿಸಿ ಗೌಡ ಸಾರಸ್ವತ ಸಮಾಜಕ್ಕೆ ಅವರನ್ನೇ ಮಠಾಧಿಪತಿಗಳನ್ನಾಗಿ ಮಗದೊಮ್ಮೆ ನೇಮಕ ಮಾಡುತ್ತಾರೆ.

ಶ್ರೀ ರಾಘವೇಂದ್ರತೀರ್ಥರು ಕಾಶಿಯಲ್ಲಿ ಲಕ್ಷ್ಮೀನರಸಿಂಹಮೂರ್ತಿಯನ್ನು ಪ್ರತಿಷ್ಠಾಪಿಸಿ 1725ರಲ್ಲಿ ಕಾಶಿಯಲ್ಲೇ ವಿಷ್ಣುಪದವನ್ನು ಸೇರುತ್ತಾರೆ.

**ಶ್ರೀ ದೇವೇಂದ್ರತೀರ್ಥ ಶ್ರೀಪಾದಂಗಳವರು :**

ಇವರು ಕಾಶೀಮಠದ ಆರನೆಯ ಗುರುವರ್ಯರು. 1734ರಲ್ಲಿ ಕೆಳದಿ ಸಂಸ್ಥಾನದ ರಾಜನಾದ ಸೋಮಶೇಖರ ನಾಯಕನು ಇವರಿಗೆ ಒಂದು ಸನದನ್ನು ಒಪ್ಪಿಸಿದ್ದಾನೆ. ಶ್ರೀಗಳವರು 1719ರಲ್ಲಿ ವೆಂಕಟಪತಿ ದೇವಾಲಯವನ್ನು ಜೀರ್ಣೋದ್ಧಾರ ಮಾಡಿರುವುದಾಗಿ ತಿಳಿಯುತ್ತದೆ. ಇವರು ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳದಲ್ಲಿ ಬೃಂದಾವನಸ್ಥರಾದದ್ದು ತಿಳಿಯುತ್ತದೆ.

**ಶ್ರೀ ಮಾಧವೇಂದ್ರತೀರ್ಥರು :**

ಶ್ರೀ ಕಾಶೀಮಠ ಏಳನೆಯ ಗುರುವರ್ಯರು. ಇವರು ದಕ್ಷಿಣ ಕನ್ನಡ ಜಿಲ್ಲೆಯ ಗುರುಪುರದ ಶ್ರೀ ವೆಂಕಟರಮಣ ದೇವಾಲಯವನ್ನು ನಿರ್ಮಿಸಿ 1742ರಲ್ಲಿ ಮೂರ್ತಿಯನ್ನು ಪ್ರತಿಷ್ಠಾಪಿಸಿದರು. ಮುಂಬಯಿಯ ವಾಲ್ಕೇಶ್ವರದಲ್ಲಿ (ಬಾಣಗಂಗೆ) ಒಂದು ಮಠವನ್ನು ಕಟ್ಟಿಸಿದರು. ಕ್ರಿ.ಶ. 1775ರಲ್ಲಿ ಪೂಜ್ಯರು ಸಜೀವ ಸಮಾಧಿಯನ್ನೈದಿದರು. ಇವರ ವೃಂದಾವನವು ವಾಲ್ಕೇಶ್ವರದ ಬಾಣಗಂಗೆಯಲ್ಲಿದೆ.

**ಶ್ರೀ ಜ್ಞಾನೇಂದ್ರತೀರ್ಥರು :**

ಶ್ರೀ ಸಂಸ್ಥಾನ ಕಾಶೀಮಠದ ಅಷ್ಟಮ ಗುರುಗಳು ಶ್ರೀ ಜ್ಞಾನೇಂದ್ರ ತೀರ್ಥರು. ಬಹಳ ವರ್ಷಗಳ ಕಾಲ ಇವರು ಕಾಶಿಯಲ್ಲಿದ್ದು ಅನಂತರ ಕೊಚ್ಚಿಗೆ ದಯಮಾಡಿಸುವಾಗ ಹಾದಿಯಲ್ಲಿ ನಾಸಿಕ್ ಕ್ಷೇತ್ರದಲ್ಲಿ ವಿಷ್ಣುಪದವನ್ನೈದಿದರು.

**ಶ್ರೀ ಮುಮ್ಮಡಿ ಯಾದವೇಂದ್ರತೀರ್ಥರು :**

ಒಂಬತ್ತನೆಯ ಗುರುಗಳಾಗಿ ಶ್ರೀ ಕಾಶೀಮಠಕ್ಕೆ ದಯಮಾಡಿಸಿದವರು. ಭಕ್ತರಿಗೆ ಧರ್ಮಬೋಧೆಯನ್ನು ಮಾಡುತ್ತಾ 1773ರಲ್ಲಿ ಹೊನ್ನಾವರದಲ್ಲಿ ವೃಂದಾವನಸ್ಥರಾದರು.

**ಇಮ್ಮಡಿ ಉಪೇಂದ್ರತೀರ್ಥ ಶ್ರೀಪಾದಗಳವರು :**

ಹತ್ತನೆಯ ಗುರುವರ್ಯರು. ಕಾಶಿಯಲ್ಲಿದ್ದ ಮೂಲ ಮಠದ ವಿಸ್ತರಣೆಗಾಗಿ ಹೋರಾಟಮಾಡಿ ಜಯಗಳಿಸಿದವರು. ಕಡೆಯವರೆಗೂ ಕಾಶಿಯಲ್ಲಿಯೇ ಇದ್ದು ಕ್ರಿ.ಶ. 1791ರಲ್ಲಿ ವಿಷ್ಣುಪದವನ್ನೈದಿದರು

**ಶ್ರೀ ರಾಜೇಂದ್ರತೀರ್ಥ ಸ್ವಾಮಿಗಳು :**

ಶ್ರೀ ಕಾಶೀಮಠದ ಹನ್ನೊಂದನೆಯ ಪೀಠಾಧಿಪತಿಗಳು. ಸಂಸ್ಕೃತದಲ್ಲಿ ಪ್ರಕಾಂಡ ಪಂಡಿತರಾಗಿದ್ದ ಇವರು ಪ್ರಯಾಗ್‌ದಲ್ಲಿ ಕ್ರಿ.ಶ. 1781ರಲ್ಲಿ ಒಂದು ಮಠ

ವನ್ನು ಕಟ್ಟಿಸಿದರು. 1799ರಲ್ಲಿ ತ್ರಾವನ್‌ಕೂರ್ ರಾಜ್ಯದ ತಿರವೂರಿನಲ್ಲಿ ವೃಂದಾವನಸ್ಥರಾದರು. ಇವರು ತಮ್ಮ ಇಬ್ಬರು ಶಿಷ್ಯರಿಗೆ ಸನ್ಯಾಸ ದೀಕ್ಷೆಯನ್ನು ದಯಪಾಲಿಸಿದ್ದರು. ಮೊದಲನೆಯ ಶಿಷ್ಯ ಶ್ರೀ ಸುಧೀಂದ್ರತೀರ್ಥ ಮತ್ತು ಎರಡನೆಯ ಶಿಷ್ಯ ಶ್ರೀ ವಿಷ್ಣುತೀರ್ಥ ಶ್ರೀಗಳವರು.

**ಶ್ರೀ ಸುಧೀಂದ್ರತೀರ್ಥರು :**

ಇವರು ಹನ್ನೆರಡನೆಯ ಗುರುವರ್ಯರಾಗಿ ಬಂದ ಮೇಲೆ ಕಾಶೀಮಠದ ಸಂಪತ್ತು ಹೆಚ್ಚಿತು. ಇವರು ಈಸ್ಟ್ ಇಂಡಿಯಾ ಕಂಪೆನಿಗೆ 12,500 ರೂ.ಗಳನ್ನು ಆ ಕಾಲದಲ್ಲಿ ಸಾಲವಾಗಿ ಕೊಟ್ಟಿದ್ದರು. 1831ರಲ್ಲಿ ಆಲಪ್ಪಿಯಲ್ಲಿ ವೃಂದಾವನಸ್ಥರಾದರು,

**ಶ್ರೀ ವಿಷ್ಣುತೀರ್ಥರು :**

ಶ್ರೀ ರಾಜೇಂದ್ರತೀರ್ಥರ ಕರಕಮಲ ಸಂಜಾತರಾದ ಶ್ರೀ ವಿಷ್ಣುತೀರ್ಥರು ಹದಿಮೂರನೆಯ ಗುರುವರ್ಯರು. ಕಾಶಿಯಲ್ಲೇ ಇದ್ದು ಜಲಸಮಾಧಿ ಹೊಂದಿದರು.

**ಶ್ರೀ ವಿಭುದೇಂದ್ರತೀರ್ಥರು :**

ಉದ್ದಾಮ ಪಂಡಿತರೂ, ಖ್ಯಾತ ಭಾಷ್ಯಕಾರರೂ ಆದ ಶ್ರೀ ವಿಭುದೇಂದ್ರತೀರ್ಥರು ಹದಿನಾಲ್ಕನೆಯ ಗುರುಗಳಾಗಿ ಶ್ರೀ ಮಠಕ್ಕೆ ದಯಮಾಡಿಸಿದರು. ಇವರು ದ್ವೈತ ಸಿದ್ಧಾಂತಗಳ ಮೇಲೆ ಅನೇಕ ಭಾಷ್ಯಗಳನ್ನು ಸಂಸ್ಕೃತದಲ್ಲಿ ಬರೆದಿದ್ದಾರೆ. 1834ರಲ್ಲಿ ಮಂಜೇಶ್ವರದಲ್ಲಿ ಹರಿಪಾದವನ್ನು ಸೇರಿದರು. ಇವರ ವೃಂದಾವನವು ಮಂಜೇಶ್ವರದಲ್ಲಿದೆ.

**ಶ್ರೀ ಸುಮತೀಂದ್ರತೀರ್ಥರು :**

ಹದಿನೈದನೆಯ ಗುರುಗಳು. ಮಠದ ಪ್ರಗತಿಗಾಗಿ ಹಲವು ಹೋರಾಟ ನಡೆಸಿ 1852ರಲ್ಲಿ ವಿಷ್ಣುಪದವನ್ನೈದಿದರು. ಇವರ ಶ್ರೀ ವೃಂದಾವನವು ಆಲಪ್ಪಿಯ ಶ್ರೀ ವೆಂಕಟಪತಿ ದೇವಾಲಯದಲ್ಲಿದೆ.

**ಶ್ರೀ ವಸುದೇಂದ್ರತೀರ್ಥರು :**

ಕಾಶೀಮಠದ ಹದಿನಾರನೆಯ ಗುರುಗಳು. ಶ್ರೀ ಸುಮತೀಂದ್ರತೀರ್ಥರು ಬಾಲವಟುವಿಗೆ ದೀಕ್ಷೆ ಕೊಟ್ಟು, ಶ್ರೀ ಭುವನೇಂದ್ರತೀರ್ಥ ಎಂದು ನಾಮಕರಣ ಮಾಡಿದರು. ಈ ಭುವನೇಂದ್ರತೀರ್ಥರು ಇನ್ನೂ ಮೈನರ್ ಆಗಿದ್ದರಿಂದ ವಸುದೇಂದ್ರತೀರ್ಥರು ಪಾಲಕರಾಗಿ ನಿಷ್ಠೆಯಿಂದ ಕಾರ್ಯನಿರ್ವಹಿಸಿದರು.

ಕ್ರಿ.ಶ. 1859ರಲ್ಲಿ ಇವರು ಹರಿಪದವನ್ನೈದಿದರು. ಇವರ ವೃಂದಾವನವು ಮಂಜೇಶ್ವರದ ಮಠದಲ್ಲಿದೆ.



**ಶ್ರೀ ಭುವನೇಂದ್ರ ತೀರ್ಥರು :**

ಮೈನರ್ ಆಗಿದ್ದ ಶ್ರೀ ಭುವನೇಂದ್ರ ತೀರ್ಥರು ಹದಿನೇಳನೆಯ ಗುರುಗಳಾಗಿ ಶ್ರೀ ಕಾಶೀಮಠದ ಪೀಠಾಧಿಪತಿಗಳಾಗಿ ಅಧಿಕಾರ ಸ್ವೀಕರಿಸಿದರು. ಇವರು ಪ್ರತಿಭಾವಂತರೂ ಹೌದು, ಮಹಾ ತಪಸ್ವಿಗಳೂ ಹೌದು. ಇವರೊಬ್ಬ ಪವಾಡ ಪುರುಷರೂ ಆಗಿದ್ದರು. ಇವರು ಬಿದನೂರು, ಅಲಹಾಬಾದ್, ಮದ್ರಾಸ್ ಮುಂತಾದ ಕಡೆಗಳಲ್ಲಿ ದೇಶ ಸಂಚಾರ ಮಾಡಿ ಅನೇಕ ದೇವಾಲಯಗಳನ್ನೂ ದೇವ ಮೂರ್ತಿಗಳನ್ನೂ ಪ್ರತಿಷ್ಠಾಪಿಸಿ ಬಸ್ರೂರಿನಲ್ಲಿ 1886ರಲ್ಲಿ ವಿಷ್ಣುಪದವನ್ನೈದಿದರು. ಇವರ ವೃಂದಾವನವು ಬಸ್ರೂರಲ್ಲೇ ಇದೆ.

**ಶ್ರೀ ವರದೇಂದ್ರ ತೀರ್ಥರು :**

ಪೀಠದ ಹದಿನೆಂಟನೆಯ ಗುರುಗಳಾದ ಶ್ರೀಗಳವರು ಸಂಸ್ಕೃತದಲ್ಲಿ ಉದ್ದಾಮ ಪಂಡಿತರು : ಕವಿಗಳೂ ಹೌದು. ಹಲವು ಸ್ತೋತ್ರ ಗೀತೆಗಳನ್ನೂ, ಭಕ್ತಿ ಗೀತೆಗಳನ್ನೂ ರಚಿಸಿದ್ದಾರೆ. ಶ್ರೀ ರಾಮಚಂದ್ರಾಷ್ಟಕ, ಶ್ರೀ ಕೃಷ್ಣಾಷ್ಟಕ ಮೊದಲಾದ ಕೃತಿಗಳನ್ನು ಕೊಟ್ಟಿದ್ದಾರೆ. ಇವರು ರಾಮೇಶ್ವರದಿಂದ ಕಾಶಿಯವರೆಗೆ ಕಾಲ್ನಡಿಗೆಯಲ್ಲಿ ಹೋಗಿ ಮಠಕ್ಕೆ ಸಂಬಂಧಿಸಿದ ಗ್ರಂಥಗಳನ್ನೆಲ್ಲ ಕ್ರೋಢೀಕರಿಸಿ ಭುವನೇಂದ್ರ ದೇವಾಲಯವನ್ನು ಸ್ಥಾಪಿಸಿದರು. ಶ್ರೀಗಳವರು 24–6–1914ರಲ್ಲಿ ಮುಂಬಯಿಯಲ್ಲಿ ವೃಂದಾವನಸ್ಥರಾದರು.

**ಶ್ರೀ ಸುಕೃತೀಂದ್ರ ತೀರ್ಥರು :**

ಮಹಾ ತಪಸ್ವಿಗಳಾದ ಶ್ರೀ ಸುಕೃತೀಂದ್ರರು ಪೀಠದ ಹತ್ತೊಂಬತ್ತನೆಯ ಗುರುಗಳು. ಶ್ರೀಗಳವರು ಬಂಟ್ವಾಳ, ಉಳ್ಳಾಲ, ಕಾಪು, ಮೂಡುಬಿದ್ರೆ, ಉದ್ಯಾವರ, ಮುಂಡ್ಕೂರುಗಳಲ್ಲಿ ಶ್ರೀ ವೆಂಕಟರಮಣ ದೇವಾಲಯವನ್ನೂ, ಕಾರ್ಕಳದಲ್ಲಿ ಪದ್ಮಾವತಿ ದೇವಾಲಯವನ್ನೂ, ಕ್ರೀಗನೂರಿನ ಶ್ರೀ ರಾಜಗೋಪಾಲಕೃಷ್ಣ ದೇವಾಲಯವನ್ನೂ, ರಾಮೇಶ್ವರದ ಶ್ರೀ ಕೋದಂಡ ರಾಮಸ್ವಾಮಿ ದೇವಾಲಯಗಳನ್ನೂ ಜೀರ್ಣೋದ್ಧಾರ ಮಾಡಿದರು. ಶ್ರೀಗಳವರು 1949ರಲ್ಲಿ ವಿಷ್ಣು ಪದವನ್ನೈದಿದರು ಇವರ ವೃಂದಾವನವು ಕೊಚ್ಚಿಯ ವೆಂಕಟಪತಿ ದೇವಾಲಯದಲ್ಲಿದೆ. ಕೊಚ್ಚಿ ಶ್ರೀಗಳವರ ಜನ್ಮಸ್ಥಳವೂ ಹೌದು, ವೃಂದಾವನಸ್ಥರಾದ ಸ್ಥಳವೂ ಹೌದು.

**ಶ್ರೀ ಸುಧೀಂದ್ರತೀರ್ಥರು :**

ಕ್ರಿ.ಶ. 1608ರಲ್ಲಿ ಯಾದವೇಂದ್ರ ತೀರ್ಥರಿಂದ ಪ್ರಾರಂಭಗೊಂಡ ಗುರು ಪರಂಪರೆಯಲ್ಲಿ ಶ್ರೀ ಸುಧೀಂದ್ರತೀರ್ಥರು ಇಪ್ಪತ್ತನೆಯ ಧರ್ಮಗುರುಗಳಾಗಿ ಕಾಶೀಮಠದ ಪೀಠವನ್ನು ಅಲಂಕರಿಸಿದ್ದಾರೆ.

## ಸದಾಶಿವ ಶೆಣೈ ಸುಧೀಂದ್ರ ತೀರ್ಥರಾದದ್ದು

ಇಂದಿಗೆ ಆರವತ್ತೈದು ವರುಷಗಳ ಹಿಂದೆ ಕೇರಳದ ಎರ್ನಾಕುಳಂ ಪಟ್ಟಣದಲ್ಲಿ ರಾಮದಾಸ ಶೆಣೈ ದಂಪತಿಗಳ ಮಗನಾಗಿ ಹುಟ್ಟಿದ ಬಾಲಕ ಸದಾಶಿವ. ಶ್ರೀ ರಾಮದಾಸಶೆಣೈ ಅವರು ಎರ್ನಾಕುಳಂನ ವೆಂಕಟರಮಣ ದೇವಾಲಯದ ಟ್ರಸ್ಟಿಗಳೂ ಆಗಿದ್ದರು. ಕಟ್ಟುನಿಟ್ಟಿನ ಸಂಪ್ರದಾಯವಾದಿಗಳ ವೈದಿಕ ಮನೆತನದಲ್ಲಿ ಹುಟ್ಟಿದ ಸದಾಶಿವನ ಬಾಲ್ಯ ಸ್ವಲ್ಪ ಕಠಿಣತಮ ಎಂದೇ ಹೇಳಬೇಕು. ಹುಟ್ಟಿದ ಎರಡೂವರೆ ವರುಷಗಳಲ್ಲಿಯೇ ತಾಯಿಯನ್ನು ಕಳೆದುಕೊಂಡು ತಬ್ಬಲಿಯಾದವನು. ಹೀಗೆ ಈತನಿಗೆ ಎರಡನೆಯ ತಾಯಿಯ ಸ್ಥಾನದಲ್ಲಿ ಒದಗುತ್ತಾಳೆ ಹಿರಿಯ ಅಕ್ಕ. ಆಕೆಗೂ ಸದಾಶಿವನಿಗೂ ವಯಸ್ಸಿನಲ್ಲಿ ಅತೀ ಅಂತರ. ಹಾಗಾಗಿ ಅಕ್ಕ ಅಕ್ಕನಾಗದೆ ತಾಯಿಯೂ ಆಗಿದ್ದಳು. ಆಕೆಗೂ ಸದಾಶಿವನ ವಯಸ್ಸಿನವನೇ ಒಬ್ಬ ಮಗನೂ ಇದ್ದುದರಿಂದ ತನ್ನ ಮಗನೊಂದಿಗೇ ಸದಾಶಿವನನ್ನು ನೋಡಿಕೊಳ್ಳುವುದು ಆಕೆಗೂ ಸುಲಭವಾಯಿತು.

ಅಂದಿನ ಸಾಮಾಜಿಕ ಸ್ಥಿತಿ ಗತಿಯೇ ಹಾಗಿತ್ತು. ಪತ್ನಿಯನ್ನು ಕಳೆದುಕೊಂಡ ಸದಾಶಿವನ ತಂದೆ ಮರು ವಿವಾಹವಾದರು. ಬಾಲಕ ಸದಾಶಿವ ಇದಾದ ಬಳಿಕ ಅಕ್ಕನೊಂದಿಗಿರುವುದು ಮತ್ತೂ ಅನಿವಾರ್ಯವೆನಿಸಿತು. ಈ ತಬ್ಬಲಿ ಹುಡುಗನನ್ನು ಹಿರಿಯಕ್ಕನೇ ಬೆಳೆಸಿದಳು. ತಾಯಿಯ ಮರಣ ಸದಾಶಿವನಿಗೆ ಇನ್ನೂ ಕನಸಿನಲ್ಲಿದ್ದಂತೆ. ಪಂಚಭೂತಗಳಿಂದ ನಿರ್ಮಿತ ಶರೀರ 'ಜೀವನ್ಮುಕ್ತಿ' ಯಾದಲ್ಲಿ ಮಣ್ಣನ್ನು ಸೇರಲೇಬೇಕು. ಅದು ದೈವ ನಿಯಮ. ಸೃಷ್ಟಿಯ ಸತ್ಯತೆ. ಅಮ್ಮನ ಮೃತ ಶರೀರ ಹಿರಿಯರು ಎತ್ತಿ ಒಯ್ದುದ್ದು, ಆ ಗೋಳಾಟ ಇವು ಕನಸಿನಲ್ಲಿದೆಯೋ ಎನ್ನುವಂತೆ ಬಾಲಕನಿಗೆ ಗೋಚರ. ಒಂಟಿತನ, ತಬ್ಬಲಿತನ ಹುಟ್ಟನೊಂದಿಗೇ ಕೆಲವರಿಗೆ ಕಟ್ಟಿಟ್ಟ ಬುತ್ತಿ. ಸದಾಶಿವ ಅನಕ್ಕೆ ಹೊರತಾಗಲಿಲ್ಲ. ಆದರೆ ಅದೃಷ್ಟದ ಆಟ ವಿಧಿಯ ಕೂಟ ಬಲ್ಲವರಿದ್ದಾರೆಯೇ ? ಬಾಲಕ ಸದಾಶಿವ ಸೈಂಟ್ ಆಲ್‌ಬರ್ಟ್ ಶಾಲೆಯಲ್ಲಿ ತನ್ನ ಪ್ರಾಥಮಿಕ ವಿದ್ಯಾಭ್ಯಾಸ ಪ್ರಾರಂಭಿಸಿದ. ಮಹಾರಾಜಾಸ್ ಕಾಲೇಜಿ

ನಲ್ಲಿ ಇಂಟರ್‌ಮೀಡಿಯಟ್ ಓದಿದ. ಮುಂದೆ ಓದಬೇಕಾಗಿತ್ತು, ಮನಸ್ಸೂ ಇತ್ತು. ಆದರೆ ವಿಧಿ ?

ಧಾರ್ಮಿಕ ವಾತಾವರಣದ ಮನೆ. ಮನೆಯಲ್ಲಿ ಪುರಾಣ ಪ್ರವಚನ ದೈನಂದಿನ ಜೀವನದ ಅವಿಭಾಜ್ಯ ಅಂಗವಾಗಿತ್ತು. 'ಭಕ್ತಿ ವಿಜಯ'ದ ಕತೆಯನ್ನು ಮಕ್ಕಳಿಗೆ ಓದಿ ಹೇಳಿ ಮನೆಯ ಮಕ್ಕಳಿಗೆಲ್ಲಾ ಧಾರ್ಮಿಕ ಗುರುವಾದಳು ಸದಾಶಿವನ ಹಿರಿಯ ಸಹೋದರಿ. ಹಿರಿಯರಿಂದ ನಡೆದುಕೊಂಡು ಬಂದ ಹಲವು ಹತ್ತು ಪುಣ್ಯ ಕಾರ್ಯಗಳು, ಪರಂಪರೆಗಳು. ಮನೆಯಲ್ಲಿ ದೇವರು, ಮಡಿಕೆಯ ಪರಿಪಾಠ. ಬಂದು ಹೋಗುವವರು, ಉಣ್ಣುವವರು, ನೆಲಸುವವರು ಇವರಿಗೆ ಸದಾಶಿವನ ಮನೆ ಧರ್ಮ ಛತ್ರದಂತೆ.

ಪ್ರಾಪ್ತ ವಯಸ್ಕ ಸದಾಶಿವನಿಗೆ ಬ್ರಹ್ಮೋಪದೇಶಗೈದು ವಟುವಾಗಿಸಿದರು. ಶಾಲೆಗೆ ಎಷ್ಟೇ ತಡವಾದರೂ ಪೂಜೆ, ನೈವೇದ್ಯಗಳನ್ನು ಮಾಡಿ ಮುಗಿಸಿಯೇ ಶಾಲೆಗೆ ಹೋಗಬೇಕಾಗಿತ್ತು. ಇಂತಹುದೇ ವಾತಾವರಣದಲ್ಲಿ ಬಾಲಕ ಶಾಲೆಯನ್ನು ಮುಗಿಸಿ ಕಾಲೇಜು ಮೆಟ್ಟಿಲು ಹತ್ತಿದ–ಮನಸಸ್ಸು ತುಂಬಾ ಕನಸು ತುಂಬಿ. ತಾನು ಡಾಕ್ಟರಾಗಬೇಕು. ಸಮಾಜ ಸೇವೆಗೈಯ ಬೇಕು ಎಂಬ ಧ್ಯೇಯ. ಸಂಸಾರದಲ್ಲಿ ಹೇಳಿಕೊಳ್ಳುವಂತಹ ಆರ್ಥಿಕ ಅಡಚಣೆಗಳು ಇಲ್ಲದಿದ್ದರೂ ವೃತ್ತಿಪರ ಅಭ್ಯಾಸಕ್ಕೆ ಸೇರುವುದಿದ್ದರೆ ಧನ ಆವಶ್ಯಕವಾಗಿತ್ತು. ಹಿರಿಯ ಅಣ್ಣ ಮಿಲಿಟರಿಯಲ್ಲಿದ್ದ. ಬ್ರಿಟಿಷರ ಆಳ್ವಿಕೆಯ ಕಾಲವದು. ದೇಶಸೇವೆಯಲ್ಲೇ ಈಶಸೇವೆಯನ್ನು ಕಾಣಲು ಮಿಂದ ಉತ್ಸುಕರಾಗಿದ್ದ ಸಮಯವದು. ತಮ್ಮನನ್ನು ಮೆಡಿಕಲ್ ಓದಿಸುವುದಾಗಿ ಅಣ್ಣ ಹಿಂದೆಯೇ ಮಾತು ನೀಡಿದ್ದ. ಸ್ವತಂತ್ರ ವಿಚಾರಗಳನ್ನು ಬೆಳೆಸಿಕೊಂಡು ಬಂದ ಸದಾಶಿವನಿಗೆ ಡಾಕ್ಟರಾಗಿ ಸಮಾಜ ಸೇವೆಗೆ ಟೊಂಕಕಟ್ಟಿ ನಿಲ್ಲಬೇಕೆಂಬ ಹಂಬಲ. ಅದಕ್ಕೆ ಪೂರಕವಾಗಿ ಹಿರಿಯಣ್ಣನ ವಚನ. ಹಾಗಾಗಿ ತಾನು ಭವಿಷ್ಯದಲ್ಲಿ ಒಬ್ಬ ಸಮಾಜ ಸೇವಕ ವೈದ್ಯನಾಗಿ ಜನರ ನಾಡಿಯೊಂದಿಗೆ ಸ್ಪಂದಿಸುವ ಕನಸು ಕಾಣುತ್ತಿದ್ದ ಸದಾಶಿವ. ಅಣ್ಣನಿಗೆ ಮಾತು ಕೊಟ್ಟು ಅದರಂತೆಯೇ ನಡೆದುಕೊಳ್ಳುವುದಾಗಿ ಹೇಳಿ ಪಾಠ ಪ್ರವಚನಗಳಲ್ಲಿ ಹೆಚ್ಚಿನ ಆಸಕ್ತಿ ತೋರಿಸುತ್ತಿದ್ದ.

ಹೌದು: ಈ ಕತೆ ಹೀಗೇ ಮುಂದುವರಿದರೆ ಸದಾಶಿವ ಕೇವಲ ಸದಾಶಿವ ಶೆಣೈ ಆಗಿಯೇ ಉಳಿಯುತ್ತಿದ್ದ. ನಮ್ಮ ನಿಮ್ಮಂತೆ ಓರ್ವ ಶ್ರೀ ಸಾಮಾನ್ಯನಾಗುತ್ತಿದ್ದ. ಶ್ರೀ ಸುಧೀಂದ್ರ ತೀರ್ಥರಾಗಲು ಸಾಧ್ಯವಿತ್ತೇ ? ಅದನ್ನೇ ಅಲ್ಲವೇ ನಾವು ವಿಧಿ ಅನ್ನುವುದು ! ಯೋಗ ಅನ್ನುವುದು !! ಕಣ್ಣಿಗೆ ಕಾಣಸದಿದ್ದರೂ ಭವಿತವ್ಯವನ್ನು ರೂಪಿಸಿ ಮನುಷ್ಯ ಅದರಲ್ಲಿ ಪಾತ್ರಧಾರಿಯಾಗುತ್ತಾನೆ.

ಅಂದು ಕೊಚ್ಚಿಯ ತಿರುಮಲದೇವಸ್ಥಾನದಲ್ಲಿ ಬಹು ದೊಡ್ಡ ಉತ್ಸವ. ಹಿರಿಯರ ಸ್ವಾಮೀಜಿ ಶ್ರೀ ಸುಕೃತೀಂದ್ರ ತೀರ್ಥರು ದಯಮಾಡಿಸಿದ್ದರು. ವರೇಣ್ಯರ ದರ್ಶನಕ್ಕೆ ಸಾಲುಗಟ್ಟಿ ನಿಲ್ಲುವ ಭಕ್ತಬಾಂಧವರು. ಸದಾಶಿವ ಹಿರಿಯ ಸ್ವಾಮೀಜಿಗಳ ಬಗ್ಗೆ ಕೇಳಿ ತಿಳಿದವನಾಗಿದ್ದರೂ ಸ್ವತಃ ಕಂಡಿರಲಿಲ್ಲ. ಹಿರಿಯ ಸ್ವಾಮೀಜಿಯವರಿಗೂ ವಯಸ್ಸಾಗಿತ್ತು. ಪೀಠಕ್ಕೆ ಒಬ್ಬ ಉತ್ತರಾಧಿಕಾರಿಯನ್ನು ಆರಿಸುವತ್ತ ಸ್ವಾಮೀಜಿ ಗಮನ ಹರಿಸಿದ್ದರು. ಇಂತಹ ಸಂದರ್ಭದಲ್ಲಿ ಕೆಲವು ಕಾಯಿದೆಗಳನ್ನು ರೂಢಿಸಿಕೊಳ್ಳಬೇಕಾಗಿತ್ತು. ಹಿರಿಯ ಸ್ವಾಮೀಜಿಗಳಿಗೆ ಒಂದು ಶುಭ ಮುಹೂರ್ತದಲ್ಲಿ ಸದಾಶಿವನ ಇರವಿನ ಅರಿವಾಯಿತು. ಜಾತಕ ಶೋಧನೆಯೂ ಅದಕ್ಕೆ ಪೂರಕ, ಪ್ರೇರಕವಾದವು. ತಡವೇನು ? ಸದಾಶಿವನಿಗೆ ಮಠದಿಂದ ಕರೆ ಹೋಯಿತು. ಆ ಸಮಯದಲ್ಲಿ ಕುಟುಂಬದ ಹಿತಚಿಂತಕ ವೈದ್ಯ, ಪಡಿಯಾರರು ಹಿರಿಯ ಸ್ವಾಮೀಜಿಯವರ ಇಂಗಿತ ಅರಿತು ಸದಾಶಿವನಲ್ಲಿಗೆ ಬಂದು ವಿಷಯ ಸ್ಥಿತಿ ತಿಳಿಸುತ್ತಾರೆ. ಸದಾಶಿವನಿಗೋ ಆಶ್ಚರ್ಯವಾದರೂ ವಿಶೇಷವೆನಿಸಲಿಲ್ಲ. ಕುಟುಂಬದಲ್ಲಿನ ಧಾರ್ಮಿಕ ಹಿನ್ನಲೆ ಹಾಗೂ ವಿಚಾರವಂತ ಮನಸ್ಸು. ದೇವ. ಪಿತೃಗಳು ಒಪ್ಪಿದರೆ ತನ್ನಿಂದ ಯಾವ ಅಡ್ಡಿಯೂ ಇಲ್ಲ ಎಂದು ಹೇಳಿಯೇ ಬಿಟ್ಟ. ಸದಾಶಿವನ ಒಪ್ಪಿಗೆಯನ್ನು ತಿಳಿಸಲು ಪಡಿಯಾರರು ಸ್ವಾಮೀಜಿಯವರಲ್ಲಿಗೆ ಧಾವಿಸಿದರು. ಇದೊಂದು ಶುಭ ಸಮಾಚಾರ. ಎಷ್ಟು ಹೊತ್ತಿಗೆ ಹೋಗಿ ತಾನು ಮೊದಲು ತಿಳಿಸುವೆನೋ ಎನ್ನುವ ಧಾವಂತ ಅವರಿಗೆ! ಆದರೆ ಅಲ್ಲೇ ನಡೆದದ್ದು ಸ್ವಲ್ಪ ಎಡವಟ್ಟು. ಆ ರಾತ್ರಿ ಸದಾಶಿವನಿಗೆ ಜಾಗರಣೆ. ತಾನೆಲ್ಲೋ ತಪ್ಪಿದ್ದೇನೆ. ತಾನು ಭಾವಿಸಿದ್ದೇನು ? ತಾನು ಮಾಡುತ್ತಿರುವುದಾದರೂ ಏನು ? ವೈದ್ಯನಾಗಲೇಬೇಕೆಂಬ ತನ್ನ ಆಸೆಗೆ ತಿಲತರ್ಪಣ ನೀಡಬೇಕೇ ? ಅಣ್ಣನಿಗೆ ಕೊಟ್ಟ ಮಾತಿನ ಗತಿಯೇನು ? ವಚನ ಭ್ರಷ್ಟನಾಗಲೇ ? ಇವರಲ್ಲಿ ಯಾವುದು ತಾನು ಆರಿಸಬೇಕಾದ ದಾರಿ ? ಯಾವುದು ಸರಿ ? ಯಾವುದು ತಪ್ಪು ? ಹದಿನೆಂಟರ ಹುಡುಗನಿಗೆ ಇಂತಹ ಕ್ಷಣಕಾಲದಲ್ಲಿ ನಿರ್ಣಯವನ್ನು ತೆಗೆದುಕೊಳ್ಳುವ ಅಧಿಕಾರ ಕೊಟ್ಟವರಾರು ? ಅಂತೂ ರಾತ್ರಿ ಕಳೆದು ಬೆಳಕು ಹರಿದಾಗ ಮನಸ್ಸು ಸ್ಥಿಮಿತಕ್ಕೆ ಬಂದಿತ್ತು. ಹೌದು. ಇದೇ ಸರಿಯಾದ ನಿರ್ಧಾರ. ತನ್ನ ಮನೋ ಇಂಗಿತ. ಅಣ್ಣನಿಗೆ ನೀಡಿದ ವಚನ ಇಲ್ಲಿ ನೈಜತೆ ಪಡೆಯಲು ಇದನ್ನು ಮಾಡಲೇಬೇಕು. ಮಾಡಿದನೂ ಕೂಡಾ. ಹಿರಿಯ ಸ್ವಾಮೀಜಿಯವರಿಗೆ ಸದಾಶಿವ ನೇರವಾಗಿ ಪತ್ರ ಬರೆದು ಹಾಕಿದ—ತನ್ನನ್ನು ಮಾಫಿ ಮಾಡುವಂತೆ. ಅಣ್ಣನಿಗೆ ಮಾತು ಕೊಟ್ಟಿದ್ದೇನೆ. ಭ್ರಾತೃ ಋಣ ಪೀಡಿತನಾಗಿದ್ದೇನೆ. ತಾನೀಗ ಸ್ವಾಮಿ ಪಟ್ಟ ಪಡೆದಲ್ಲಿ ಮಾತುಕೊಟ್ಟು ತಪ್ಪಿದ, ತಪ್ಪಿತಸ್ಥ ಭಾವನೆಗೆ ತನ್ನ ಭವಿಷ್ಯದಲ್ಲಿ ಭದ್ರಸ್ಥಾನ ಕೊಡಬೇಕು. ಅದರ ಬದಲು ತನ್ನ ಪರಿಸ್ಥಿತಿಯನ್ನು ಅರ್ಥೈಸಿ, ತನ್ನ ಕೈ ಬಿಡಬೇಕೆಂದು ಆಗ್ರಹಿಸಿ ಸದಾಶಿವ ನಿಶ್ಚಿಂತನಾಗುತ್ತಾನೆ. ಆದರೆ ವಿಷಯ ಸದಾಶಿವ ಭಾವಿಸಿದಷ್ಟು

ಹಗುರವಾಗಿರಲಿಲ್ಲ. ಹಿರಿಯ ಸ್ವಾಮೀಜಿಗಳಿಂದಲೇ ಮುಂದಿನ ತಮ್ಮ ಪೀಠಕ್ಕೆ ವಾರಸುದಾರ ಆರಿಸಲ್ಪಟ್ಟಿರುವಾಗ ಬಾಲಕ ಉದ್ಧಟತನದಿಂದ ಪತ್ರ ಬರೆದು ನಿರಾಕರಿಸಿದ್ದು ಮಹಾಪರಾಧವಾಗಿತ್ತು. ಅದು ಹಿರಿಯರೆಲ್ಲರ, ಮತ್ತು ಸಮಸ್ತರ ಭಾವನೆ. ವಿಷಯ ಎಲ್ಲರ ಕೈ ಮೀರಿತ್ತು. ಸಿಟ್ಟಿಗೆದ್ದ ಪಡಿಯಾರರು ನೇರವಾಗಿ ಸದಾಶಿವನಲ್ಲಿಗೆ ಬಂದು– ಹಿರಿಯ ಸ್ವಾಮೀಜಿಗಳಿಗೆ ಪತ್ರ ಬರೆದು 'ನ'ಕಾರ ಸೂಚಿಸುವಷ್ಟು ನೀನು ಬೆಳೆದುಬಿಟ್ಟೆಯೇನೋ" ಎಂದು ಗದರಿಸಿದರು. ಸದಾಶಿವನಿಗೆ ಹೇಳಲಾದರೂ ಏನೂ ಉಳಿದಿರಲಿಲ್ಲ. ತನಗೆ ಅನ್ನಿಸಿದ್ದನ್ನು ಮಾಡಿ ತೋರಿಸಿದ್ದ ಅಷ್ಟೇ. ಹಿರಿಯರಿಗೆ ಅದು ಉದ್ಧಟತನವಂತೆ ತೋರಿದರೆ ಅದು ಸದಾಶಿವನ ತಪ್ಪೆ ?

ತನಗೆ ಸರಿ ಅನ್ನಿಸಿದ್ದನ್ನು ತಾನು ಮಾಡುವುದೇ ಲೇಸು. ಇದು ಪ್ರತಿಯೊಬ್ಬನೂ ಅನುಸರಿಸುವ ದಾರಿ. ಸದಾಶಿವ ಅದಕ್ಕೆ ಹೊರತಾಗಲಿಲ್ಲ. ತನ್ನ ಮುಂದಿರುವ ಸಮಸ್ಯೆ. ತಾನು ಕೊಟ್ಟ ವಚನ. ಅದನ್ನು ಮುರಿಯಬೇಕಾಗಿ ಬಂದ ಪ್ರಸಂಗ. ಅದನ್ನು ಸದಾಶಿವ ಪಡಿಯಾರರಿಗೆ ಬಿಡಿಸಿ ಹೇಳಬೇಕಾಯಿತು. 'ಸಹೋದರರಾಗಿ ಹುಟ್ಟಿದ ಬಳಿಕ. ಹಂಚಿಕೊಂಡ ರಕ್ತದ ಋಣ ಇಬ್ಬರು ಅಣ್ಣ ತಮ್ಮಂದಿರಿಗೂ ಸಮಾನ. ವೈದ್ಯನಾಗಿ ಮಾಡುವ ಸಮಾಜ ಸೇವೆ ಒಂದು ಮುಖ. ಧಾರ್ಮಿಕ ರೀತಿಯ ಸೇವೆ ಇನ್ನೊಂದು ಮುಖ. ನಿನ್ನ ಸ್ವಾಮೀಜಿಯ ಪಟ್ಟವನ್ನು ನಿನ್ನ ಅಣ್ಣ ನಿನ್ನಿಂದ ಖಂಡಿತ ಅಪೇಕ್ಷಿಸಿರಲಾರ,ನಿನ್ನ ಜೀವನದಲ್ಲಿ ಇಂತಹ ಒಂದು ಸುಯೋಗ ಒದಗುವ ಸಂದರ್ಭ ಬರಬಹುದೆಂಬ ನಿರೀಕ್ಷೆ ಸ್ವತಃ ನಿನ್ನನ್ನು ಹುಟ್ಟಿಸಿದ ತಂದೆಗೂ, ಒಡಹುಟ್ಟಿದ ಸಹೋದರನಿಗೂ ಇದ್ದಿರಲಾರದು. ನಿನಗೆ ನಿನ್ನ ಅಣ್ಣನಲ್ಲಿರುವಂತೆ ಆತನಿಗೂ ನಿನ್ನಲ್ಲಿ ಋಣಭಾರವಿದೆ. ಮನುಷ್ಯ ಶರೀರಧಾರಿಯಾದಾಗ ಎಂದೂ ಋಣಭಾರನೇ. ಆಚಾರ್ಯ ಋಣ. ಪಿತೃ ಋಣ. ಮಾತೃ ಋಣದಿಂದ ಆತನಿಗೆ ಮುಕ್ತಿ ಇದೆಯೇ ? ದೈವ ಋಣವೂ ಒಂದಿದೆ. ಅದು ಯೋಗ, ಸುಯೋಗ. ನಿನ್ನ ಪಾಲಿಗೆ ಅದು ಬಂದಿದೆ. ಒಪ್ಪಿಸಿಕೋ, ಧರಿಸಿಕೋ." ಪಡಿಯಾರರ ಹಿತವಚನ ಸದಾಶಿವನ ಚಿತ್ತದ ಮೇಲೆ ಗಾಢ ಪರಿಣಾಮ ಬೀರಿತು. ಸಹೋದರಿಯೂ ಸದಾಶಿವನಿಗೆ ಮನಮುಟ್ಟುವಂತೆ ಹೇಳಿ ಹಿರಿಯ ಸ್ವಾಮೀಜಿಯವರ ಕರೆಗೆ 'ಓ'ಗೊಡುವಲ್ಲಿ ಸಹಾಯಕಳಾದಳು. ಹುಟ್ಟಿದಾಗಲೇ ಅಮ್ಮನನ್ನು ಕಳೆದುಕೊಂಡಿದ್ದ ಸದಾಶಿವ ಅಮ್ಮನ ಪ್ರೀತಿಗೆ ಕೊರತೆ ಬರದಂತೆ ಅಕ್ಕ ನೋಡಿಕೊಂಡರೂ ಅಮ್ಮ ಬಿಟ್ಟುಹೋದ ಆ ಜಾಗ ಅಂದೇ ತೆರವಾಗಿತ್ತು. ಸಂಸಾರದಲ್ಲಿ ಕೈ ಹಿಡಿದು ಕರೆಯುವಂತಹ ಮೋಹಪಾಶ ಅಲ್ಲೇನೂ ಇರಲಿಲ್ಲ. ಈಗ ಬಂದ ಅವಕಾಶ ಯತಿವರೇಣ್ಯರಾಗುವಂತಹುದು. ಸದಾಶಿವ 'ಹೂಂ' ಅಂದ.

1944ನೇ ಮೇ ತಿಂಗಳ ಇಪ್ಪತ್ತನಾಲ್ಕರಂದು ಮುಲ್ಕಿಯ ವೆಂಕಟರಮಣ ದೇವಾಲಯದಲ್ಲಿ ಸದಾಶಿವನ ದೀಕ್ಷಾಬೋಧೆಯಾಯಿತು. (Initiation

ceremony) ಸದಾಶಿವ ಶೆಣೈ ಶ್ರೀ ಸುಧೀಂದ್ರತೀರ್ಥ ಸ್ವಾಮಿಜಿಯಾದ 'ಭೂತಿ ವಿಭೂತಿ ಆಯಿತು ! ಭೂತಿ ಎಂದರೆ ಇರುವಿಕೆ. ವಿಭೂತಿ ಎಂದರೆ ವಿಶಿಷ್ಟ ರೀತಿ ಯಲ್ಲಿ ಆಗುವಿಕೆ. ನಾರಣಪ್ಪ ವಿಭೂತಿಯಾದರೆ ಕುಮಾರವ್ಯಾಸ ಶ್ರೀಮದ್ ವಿಭೂತಿ. ಗದಾಧರ ಭೂತಿಯಾದರೆ ರಾಮಕೃಷ್ಣ ಪರಮಹಂಸ ವಿಭೂತಿ. ನರೇಂದ್ರ ಭೂತಿ ಯಾದರೆ, ಸ್ವಾಮಿ ವಿವೇಕಾನಂದ ವಿಭೂತಿ.[27] ಹೀಗೆ ಸದಾಶಿವನೆಂಬ ಶ್ರೀ ಸಾಮಾನ್ಯ ಭೂತಿಯಾದರೆ ಪುರುಷೋತ್ತಮ ಸ್ವರೂಪಿಯಾದ ಶ್ರೀ ಸುಧೀಂದ್ರತೀರ್ಥರೆಂಬ ಮಹಾ ಚೇತನ ಶ್ರೀಮದ್ ವಿಭೂತಿ !

ಶ್ರೀಸುಧೀಂದ್ರತೀರ್ಥರು ಧರ್ಮಪೀಠದಲ್ಲಿದ್ದು ಮಠಾಧಿಪತಿಗಳಾಗಿ ಗೌಡ ಸಾರಸ್ವತ ಜನಾಂಗವನ್ನು ಧಾರ್ಮಿಕ ರೀತಿನೀತಿಗಳಿಗೆ ಅನುಗುಣವಾಗಿ ನಡೆಸಿಕೊಂಡು ಹೋಗುವ ಪರಿ ಶ್ಲಾಘನೀಯ. ವೇದ ವಿದ್ಯಾಪ್ರಚಾರ, ಪ್ರವಚನ, ಹಿತೋಪದೇಶ ಗಳಿಂದ ಸಮಾಜವನ್ನು ತಿದ್ದಲು ಸ್ವಾಮೀಜಿಯವರ ಅಹರ್ನಿಶಿ ಯತ್ನ. ಇವರೊಬ್ಬ ಸಮಾಜ ಸೇವಕರೂ ಹೌದು. ಸನಾತನ ಧರ್ಮದಲ್ಲಿ ಅವಿಛಿನ್ನ ವಿಶ್ವಾಸವನ್ನು ಇಟ್ಟವರೂ ಹೌದು. ಶ್ರೀ ಸ್ವಾಮಿಗಳು ಸಂಸ್ಕೃತ ಭಾಷೆಯ ಕಲಿಯುವಿಕೆಯೊಂದಿಗೆ ಧರ್ಮ ಶಾಸ್ತ್ರಗಳನ್ನೂ ಕಾರ್ಕಳದ ಭುವನೇಂದ್ರ ಕಾಲೇಜಿನಲ್ಲೇ ಕಲಿತರು.[28] ಅಲ್ಲಿನ 'ಶ್ರೀನಿವಾಸ ಆಶ್ರಮ'ದಲ್ಲಿ ಸ್ವಾಮೀಜಿಯವರು ತಮ್ಮ ಮುದ್ದಿನ ಸಾಕು ಪ್ರಾಣಿ ಗಳೊಂದಿಗೆ ಬಿಡುವಿನ ವೇಳೆ ಕಳೆಯುತ್ತಿದ್ದರು. ಒಂದು ಪುಟ್ಟ ಮರಿ ಮರಿ ಹಾಗೂ ಜಿಂಕೆ ಶ್ರೀ ಸ್ವಾಮಿಗಳ ಒಡನಾಡಿಗಳಾಗಿದ್ದವು.

ಅಸಾಧಾರಣ ಸ್ಮರಣ ಶಕ್ತಿ ಹಾಗೂ ತೀಕ್ಷ್ಣ ಬುದ್ಧಿಮತ್ತೆ ಶ್ರೀ ಸ್ವಾಮೀಜಿಗೊಂದು ವರ. ಹಾಗಾಗಿ ಅಲ್ಪ ಕಾಲದಲ್ಲೇ ಇವರು ಬ್ರಹ್ಮಸೂತ್ರ, ಭಗವದ್ಗೀತೆ, ಉಪನಿಷತ್ತುಗಳು (ಪ್ರಸ್ಥಾನತ್ರಯಗಳು) ಈ ಮೂರರಲ್ಲಿನ ಪಾಂಡಿತ್ಯ ಶ್ರೀಗಳಿಗೆ ದ್ವೈತ ತತ್ವದ ಮೇಲೆ ಪ್ರಭುತ್ವ ತಂದೊಡ್ಡಿತು. ಆಗಮಶಾಸ್ತ್ರದ ಅನ್ವಯ ಶ್ರೀ ವ್ಯಾಸ ರಘುಪತಿಯ ಪೂಜಾ ವಿಧಾನವನ್ನು ಹಿರಿಯ ಗುರುಗಳಿಂದ ಶ್ರೀ ಸುಧೀಂದ್ರತೀರ್ಥರು ಸವಿವರವಾಗಿ ತಿಳಿದುಕೊಂಡರು. ಗುರುಗಳ ಪವತಲ ದಲ್ಲಿದ್ದುಕೊಂಡೇ ಕಾಶಿಮಠದ ಸಮಸ್ತ ಪರಂಪರೆ ಆಚಾರ ವಿಚಾರಗಳನ್ನು ತಮ್ಮ ದನ್ನಾಗಿಸಿಕೊಂಡರು. 1949ರಲ್ಲಿ ಹಿರಿಯ ಗುರುಗಳು ವೃಂದಾವನಸ್ಥರಾದಾಗ ನೈತಿಕ ಧೈರ್ಯ ಸ್ಥೈರ್ಯಗಳೊಂದಿಗೆ ಶ್ರೀ ಸುಧೀಂದ್ರರು ಪೀಠದ ವಾರಸುದಾರರಾ ದರು.

ಶ್ರೀ ಸುಧೀಂದ್ರತೀರ್ಥರು ಭಾರತದ ಉದ್ದಗಲಕ್ಕೂ ಯಾತ್ರೆ ಕೈಗೊಂಡಿ ದ್ದರು. ಕನ್ಯಾಕುಮಾರಿಯಿಂದ ಬದರಿನಾಥದವರೆಗಿನ ಇವರ ಯಾತ್ರೆಯ ಸಮಯ

ವಲ್ಲಿ ಹಾದಿಯುದ್ದಕ್ಕೂ ತಮ್ಮ ಅನುಯಾಯಿಗಳನ್ನು ಭೇಟಿಯಾಗಿದ್ದರು. ಜನರಲ್ಲಿ ಧಾರ್ಮಿಕ ಚಿಂತನೆ ಮೂಡಿಸುವಲ್ಲಿ ಪ್ರಚೋದಕರಾಗಿದ್ದರು. ಕನ್ಯಾಕುಮಾರಿ, ರಾಮೇಶ್ವರ, ಪಳನಿ, ಕುಂಭಕೋಣ, ಶ್ರೀರಂಗ, ಮಧುರೈ, ತಿರುಪತಿ,ಕಾಶಿ,ಹರದ್ವಾರ, ಹೃಷಿಕೇಶ, ಪ್ರಯಾಗ, ಮಥುರಾ, ಕುರುಕ್ಷೇತ್ರ, ಉಜ್ಜೈನಿ, ನಾಸಿಕ ಹೀಗೆ ಎಲ್ಲಾ ಧಾರ್ಮಿಕ ಕ್ಷೇತ್ರಗಳಿಗೆ ಭೇಟಿ ನೀಡಿ ಜನರ ನಾಡಿಮಿಡಿತವನ್ನು ಅರಿತಿದ್ದರು.

ಶ್ರೀ ಸುಧೀಂದ್ರತೀರ್ಥರು, ಶ್ರೀ ಕಾಶೀಮಠ ಸಂಸ್ಥಾನದ ಇನ್ನಿತರ ಸ್ವಾಮಿಗಳಂತೆ ಹಲವು ದೇವಾಲಯಗಳ ಜೀರ್ಣೋದ್ಧಾರವನ್ನೂ ಮೂರ್ತಿ ಪ್ರತಿಷ್ಠಾಪನೆಯನ್ನೂ ಮಾಡಿದ್ದಾರೆ. ಕುಂದಾಪುರದ ಶ್ರೀ ವೆಂಕಟರಮಣ ದೇವಾಲಯದ ಜೀರ್ಣೋದ್ಧಾರ ಹಾಗೂ ಮೂರ್ತಿ ಪ್ರತಿಷ್ಠಾಪನೆಯನ್ನು ಕ್ರಿ.ಶ. 20-5-1959ರಲ್ಲಿ ಮಾಡಿರುವರು. ಹೊಸದುರ್ಗದ ಶ್ರೀ ವೆಂಕಟರಮಣ ದೇವಾಲಯದ ಮೂರ್ತಿ ಸ್ಥಾಪನಾ ಕಾರ್ಯ ಕ್ರಿ.ಶ. 4–3–1960ರಲ್ಲಿ ಜರುಗಿತು. ಮುಂಬಯಿಯ ಶ್ರೀ ಬಾಲಾಜಿ ಮಂದಿರದಲ್ಲಿ ವೆಂಕಟರಮಣ ಮೂರ್ತಿಯ ಸ್ಥಾಪನೆ ಕ್ರಿ.ಶ. 20–3–1973 ರಲ್ಲಿ ನಡೆಯಿತು. ಕಾಸರಗೋಡಿನ ಶ್ರೀ ವೆಂಕಟರಮಣ ದೇವಾಲಯ, ಗುರುಪುರದ ವರದರಾಜ ವೆಂಕಟರಮಣ ದೇವಾಲಯ, ಮಂಗಳೂರಿನ ಶ್ರೀಕೃಷ್ಣ ದೇವಾಲಯ, ಕೋಟೆಕಾಡಿಯ ವೆಂಕಟರಮಣ ದೇವಾಲಯ, ಕೋಟದ ಶ್ರೀ ಮುರಲೀಧರ ಕೃಷ್ಣ ದೇವಾಲಯ, ಮುಂಬೈಯ ವಿಲ್ಲೆಪಾರ್ಲೆಯ ರಾಮಾಂಜನೇಯ ದೇವಾಲಯ, ಉಪ್ಪಿನಂಗಡಿಯ ಶ್ರೀ ವೆಂಕಟರಮಣ ದೇವಾಲಯ ಹಾಗೂ ಮೂಡಬಿದ್ರೆಯ ಶ್ರೀ ಲಕ್ಷ್ಮೀವೆಂಕಟೇಶ ದೇವಾಲಯ ಈ ಎಲ್ಲಾ ದೇವಾಲಯಗಳಲ್ಲಿ ಶ್ರೀ ಸುಧೀಂದ್ರತೀರ್ಥರು ಮೂರ್ತಿ ಪ್ರತಿಷ್ಠಾಪನೆ ಇಲ್ಲವೆ ಜೀರ್ಣೋದ್ಧಾರ ಕಾರ್ಯ ಮಾಡಿದ್ದಾರೆ.

ಇಡೀ ಕೊಂಕಣಿ ಸಮಾಜಕ್ಕೇ ಅತಿ ವಿಶಿಷ್ಟ ಹಾಗೂ ಪವಿತ್ರವೆನಿಸಿದ 'ರಾಮನಾಮಯಜ್ಞ' ಶ್ರೀ ಸುಧೀಂದ್ರತೀರ್ಥರಿಂದಲೇ ನಿರ್ವಹಿಸಲ್ಪಟ್ಟಿತು. ಧಾರ್ಮಿಕ ಭಜನಾ ಸಪ್ತಾಹದ ರಜತ ಮಹೋತ್ಸವವು ಕಾಸರಗೋಡಿನ ಶ್ರೀ ವೆಂಕಟರಮಣ ದೇವಾಲಯದಲ್ಲಿ ಆಚರಿಸಲ್ಪಟ್ಟಿತು. ದೇಶದಾದ್ಯಂತ ಧಾರ್ಮಿಕ ವ್ಯಕ್ತಿಗಳು ಭಕ್ತಿಪೂರ್ವಕವಾಗಿ ಬರೆದ ಐವತ್ತೆರಡು ಕೋಟಿ ರಾಮನಾಮವನ್ನು ಯಜ್ಞಾಹುತಿ ಮಾಡುವ ಅಪೂರ್ವ ಸಂದರ್ಭವದು. ಈ ಕಾರ್ಯಕ್ರಮವನ್ನು ತಮ್ಮ ದಕ್ಷ ನಿರ್ದೇಶನದೊಂದಿಗೆ ಅದ್ಭುತ ರೀತಿಯಲ್ಲಿ ನಡೆಸಿಕೊಟ್ಟ ಖ್ಯಾತಿ ಶ್ರೀ ಸುಧೀಂದ್ರತೀರ್ಥರಿಗೆ ಸಲ್ಲಬೇಕು.

ಗೌಡ ಸಾರಸ್ವತ ಸಮಾಜದ ಇತಿಹಾಸದಲ್ಲೇ ಸುವರ್ಣಾಕ್ಷರಗಳಲ್ಲಿ ಬರೆಯಬಹುದಾದ ಘಟನೆಯೊಂದು 1963ರಲ್ಲಿ ಕಾರ್ಕಳದಲ್ಲಿ ಜರುಗಿತು. ಗೌಡ

ಸಾರಸ್ವತ ಜನಾಂಗವು ಹಮ್ಮಿಕೊಳ್ಳುವ ಮೂರು ಪ್ರಮುಖ ಮಠಗಳ ಪೀಠಾಧೀಶರು ಏಕ ಕಾಲದಲ್ಲಿ ಏಕ ಸ್ಥಳದಲ್ಲಿ ಚಾತುರ್ಮಾಸಕ್ಕಾಗಿ ನೆಲೆಸಿದ್ದು ಅತಿ ವಿಶೇಷ ವಿಚಾರ. ಶ್ರೀ ಗೋಕರ್ಣ ಪರ್ತಗಾಳಿ ಜೀವೋತ್ತಮ ಮಠದ ಶ್ರೀ ದ್ವಾರಕಾನಾಥತೀರ್ಥ ಸ್ವಾಮೀಜಿಯವರೂ, ಶ್ರೀ ಕೈವಲ್ಯ ಮಠಾಧೀಶರಾದ ಶ್ರೀ ಸಚ್ಚಿದಾನಂದ ಸರಸ್ವತಿ ಯವರೂ, ಶ್ರೀ ಕಾಶೀಮಠದ ಶ್ರೀ ಸುಧೀಂದ್ರತೀರ್ಥ ಸ್ವಾಮೀಜಿಗಳು, ಕಾರ್ಕಳದ ಶ್ರೀ ವೆಂಕಟರಮಣ ದೇವಾಲಯದಲ್ಲಿ ಏಕಕಾಲದಲ್ಲಿ ನಲೆ ನಿಂತರು, ಮಾತ್ರವಲ್ಲ ಅಲ್ಲೇ ಚಾತುರ್ಮಾಸವನ್ನೂ ಆಚರಿಸಿದರು. ಈ ಚಾತುರ್ಮಾಸ ಎನ್ನುವುದು ಒಂದು ವಿಶೇಷ ರೀತಿಯ ಪದ್ಧತಿ. ತಮ್ಮ ತಮ್ಮ ಶಿಷ್ಯವರ್ಗವಿರುವ ಬೇರೆ ಬೇರೆ ಊರುಗಳಲ್ಲಿ ವರ್ಷದ ನಾಲ್ಕು ತಿಂಗಳು ಇದ್ದು ವ್ರತವನ್ನು ಆಚರಿಸುವ ಪರಿಯನ್ನು ಚಾತುರ್ಮಾಸ ಎನ್ನುತ್ತಾರೆ. ಚಾತುರ್ಮಾಸವೆಂದರೆ ನಾಲ್ಕು ತಿಂಗಳು : ವರುಷದ ಎಂಟು ತಿಂಗಳು ಧರ್ಮ ಪ್ರಚಾರಗೈದ ಪೀಠಾಧೀಶರಿಗೆ ವಿಶ್ರಾಂತಿಯ ಸಮಯವದು. ಶಾಸ್ತ್ರಾಧ್ಯಯನ, ವೇದಾಧ್ಯಯನ ಸಮಯವೂ ಹೌದು. ಪೀಠಾಧೀಶರೊಂದಿಗೆ ಸಮಾಜ ಬಾಂಧವರು ನೇರ ಸಂಪರ್ಕ ಪಡೆಯುವ ಸಂದರ್ಭವೂ ಹೌದು. ಇದೇ ಚಾತುರ್ಮಾಸದ ವಿಶೇಷತೆ.

1969ರಲ್ಲಿ ಕಾರ್ಕಳದ ಶ್ರೀ ವೆಂಕಟರಮಣ ದೇವಾಲಯದಲ್ಲಿ ಹಾಗೂ 1971ರಲ್ಲಿ ಉಡುಪಿಯ ಶ್ರೀ ಲಕ್ಷ್ಮೀವೆಂಕಟೇಶ ದೇವಾಲಯದಲ್ಲಿ ಶ್ರೀ ಸುಧೀಂದ್ರ ತೀರ್ಥ ಸ್ವಾಮಿಗಳು ಸಹಸ್ರ ಕುಂಭಾಭಿಷೇಕವನ್ನು ನಡೆಸಿಕೊಟ್ಟರು.

ಮಠ ಸ್ಥಾಪನೆಯಲ್ಲೂ ಶ್ರೀ ಗುರುಗಳು ಹಿಂದುಳಿಯಲಿಲ್ಲ. ಭಾಗ ಮಂಡಲದ ಕಾವೇರಿಯ ತೀರದಲ್ಲಿ ಹಾಗೂ ಗೋವಾಪ್ರಾಂತದ ಬಂದೋಡಾದಲ್ಲಿ ಸ್ವಾಮೀಜಿಯವರು ಎರಡು ಮಠಗಳನ್ನು ಹುಟ್ಟುಹಾಕಿದ್ದಾರೆ. ಹರಿದ್ವಾರದಲ್ಲೂ, ಕಾಶಿ, ಬದರಿ ಹಾಗೂ ತಿರುಪತಿಯಲ್ಲೂ ಕಾಶೀಮಠಗಳನ್ನು ತೊಡಗಿಸಿದ್ದಾರೆ. ಬಸ್ರೂರಿನಲ್ಲಿ 1965ರಲ್ಲಿ ಶ್ರೀಗಳವರಿಂದ ಪ್ರಾರಂಭಗೊಂಡ ಶ್ರೀ ಭುವನೇಂದ್ರ ಬಾಲಕಾಶ್ರಮ ಹೆಸರಿಸಲೇಬೇಕಾದ ಒಂದು ಸಂಸ್ಥೆ. ಹದಿನೈದು ಬಾಲಕರಿಗೆ ಧಾರ್ಮಿಕ ರೀತಿಯ ವಿದ್ಯಾಭ್ಯಾಸವನ್ನು ಈ ಸಂಸ್ಥೆ ನೀಡುತ್ತದೆ. ಮಾತ್ರವಲ್ಲ ಬಾಲಕರ ಸಮಸ್ತ ಖರ್ಚು ಹಾಗೂ ಹೊಣೆಗಾರಿಕೆಯನ್ನು ಸಂಸ್ಥೆಯೇ ವಹಿಸಿಕೊಂಡಿದೆ. ಉಡುಪಿಯಲ್ಲಿ 1956ರಲ್ಲಿ ಪ್ರಾರಂಭಗೊಂಡ ಶ್ರೀ ಕಾಶೀಮಠ ಸಂಸ್ಥಾನ ವೆಲ್‌ಫೇರ್ ಫಂಡ್ ಒಂದು ಉತ್ಕೃಷ್ಟ ಸಂಸ್ಥೆ. ಶ್ರೀ ಗುರುಗಳಿಂದಲೇ ನೇಮಕಾತಿಗೊಂಡ ಇಪ್ಪತ್ತು ಜನ ಸದಸ್ಯರು ಈ ಸಂಸ್ಥೆಯನ್ನು ನಡೆಸಿಕೊಂಡು ಹೋಗುತ್ತಾರೆ. ಈ ಸಂಸ್ಥೆಗೆ ತನ್ನದೇ ಆದ ಒಂದು ಸಂವಿಧಾನವೂ ಇದೆ. ಹದಿನಾರು ತತ್ವಗಳ ಒಂದು ವಿಶಿಷ್ಟ ಸಂಯೋಜನೆ ಯನ್ನು ಈ ಸಂಸ್ಥೆ ಹಮ್ಮಿಕೊಂಡಿದೆ. ಧಾರ್ಮಿಕ, ನೈತಿಕ, ಸಾಮಾಜಿಕ, ಶೈಕ್ಷಣಿಕ,

ಸಾಂಸ್ಕೃತಿಕ ಪ್ರಜ್ಞೆಯನ್ನು ಗೌಡ ಸಾರಸ್ವತ ಮತ ಬಾಂಧವರಲ್ಲಿ ಬೆಳೆಸುವುದು ಮೊದಲನೆಯದು. ಅರ್ಹ ವಿದ್ಯಾರ್ಥಿಗಳಿಗೆ, ಬಡ ವಿದ್ಯಾರ್ಥಿಗಳಿಗೆ ವೈದಿಕ ಶಿಕ್ಷಣವೂ ಧರ್ಮಶಾಸ್ತ್ರದ ಶಿಕ್ಷಣವೂ, ವಿಜ್ಞಾನ, ಕಲಾ, ಕಾಮರ್ಸ್ ಶಿಕ್ಷಣವೂ ಅಗತ್ಯ ಬಿದ್ದಲ್ಲಿ ವೃತ್ತಿಪರ ಶಿಕ್ಷಣವನ್ನು ಪಡೆಯಲು ಅಗತ್ಯವಿರುವ ಹಣವನ್ನು ಸಾಲವಾಗಿಯೂ ಸ್ಕಾಲರ್‌ಶಿಪ್ ರೂಪದಲ್ಲಿಯೂ ಕಡಿಮೆ ಬಡ್ಡಿದರದಲ್ಲಿಯೂ ಕೊಡಲಾಗುವುದು. ಬಡ ಮಕ್ಕಳಿಗೆ ವಾಸ್ತವ್ಯಕ್ಕೆ ಅನುಕೂಲ ಮಾಡಿಕೊಡುವುದು. ಅನಾಥಾಶ್ರಮಗಳನ್ನೂ ಅಭಯಾಶ್ರಮಗಳನ್ನೂ ನಡೆಸುವುದು, ಸಮಾಜಕ್ಕೆ, ಧರ್ಮಕ್ಕೆ ಸಂಬಂಧಪಟ್ಟ ವಿಷಯಗಳ ಬಗ್ಗೆ ಗ್ರಂಥಗಳ ಪ್ರಕಟಣೆ ಮಾಡುವುದು, ಹಳೆಯ ದೇವಾಲಯಗಳ ಜೀರ್ಣೋದ್ಧಾರ, ನವೀನ ದೇವಾಲಯಗಳನ್ನು ಕಟ್ಟಿಸುವುದು. ವಿವಾಹ, ಋಜುಪಾಕರ್ಮಗಳಿಗೆ ಧನಸಹಾಯದ ಕಾರ್ಯವನ್ನು ಸಂಸ್ಥೆಯು ಹೊತ್ತುಕೊಂಡಿದೆ. ದಾನಿಗಳು–ಪೋಷಕರು, ಮಹಾಪೋಷಕರಾಗಿ ನೀಡಿದ ಧನ ಸಹಾಯದಿಂದ ಈ ಸಂಸ್ಥೆಯನ್ನು ನಡೆಸಲಾಗುವುದು. ಶ್ರೀ ಗುರುಗಳೇ 1971ರಲ್ಲಿ ಮುಂಬಯಿಯಲ್ಲಿ 'ಭಾರತೀಯ ಸಾಂಸ್ಕೃತಿಕ ಪ್ರಕಟಣಾಲಯ'ವನ್ನು ಸ್ಥಾಪಿಸಿದರು. ವೇದಕ್ಕೆ, ಭಾರತೀಯ ಸಂಸ್ಕೃತಿಗೆ ಸಂಬಂಧಪಟ್ಟ ಕೃತಿಗಳನ್ನು ಪ್ರಕಟಿಸುವ ಉದ್ದೇಶವನ್ನು ಈ ಪ್ರಕಟಣಾಲಯ ಹೊಂದಿಕೊಂಡಿದೆ. ಸ್ವಾಮೀಜಿಯವರಿಂದಲೇ ನೇಮಿಸಲ್ಪಟ್ಟ ಹನ್ನೊಂದು ಮಂದಿಗಳ ಒಂದು ಸಮಿತಿ ಈ ಪ್ರಕಟಣಾಲಯದ ಉಸ್ತುವಾರಿಯನ್ನು ನೋಡಿಕೊಳ್ಳುತ್ತದೆ. 'ಹನುಮದ್ ರಾಮಾಯಣ' ಎನ್ನುವ ಕನ್ನಡ ಕೃತಿ 1972ರಲ್ಲಿ ಇಲ್ಲಿ ಪ್ರಕಟಗೊಂಡಿದೆ.

ಶ್ರೀ ಸುಧೀಂದ್ರತೀರ್ಥರು ನಡೆಸಿಕೊಂಡು ಹೋಗುವ ಕಾಶೀಮಠವು ಹಮ್ಮಿಕೊಂಡಿರುವ ಕೆಲವು ಕಾರ್ಯಕ್ರಮಗಳು ಹೀಗಿವೆ :

ಶ್ರೀ ಸುಕೃತೀಂದ್ರ ಓರಿಯಂಟಲ್ ರಿಸರ್ಚ್ ಇನ್ಸ್‌ಟಿಟ್ಯೂಟ್ ಪ್ರತಿಭಾವಂತ ವಿದ್ಯಾರ್ಥಿಗಳಿಗೊಂದು ವರದಾನ. ಎರ್ನಾಕುಳಂನಲ್ಲಿರುವ ಈ ಸಂಸ್ಥೆ ಸಂಸ್ಕೃತದಲ್ಲಿ ಡಾಕ್ಟರೇಟ್ ಮಾಡುವವರಿಗೆ ಅವಕಾಶ ಮಾಡಿಕೊಡುತ್ತದೆ. ಜಾಣ ವಿದ್ಯಾರ್ಥಿಗಳಿಗೆ ಸ್ಕಾಲರ್‌ಶಿಪ್ ನೀಡುವ ವ್ಯವಸ್ಥೆಯೂ ಕಾಶೀಮಠದ ಉಡುಪಿಯಲ್ಲಿನ ವೆಲ್‌ಫೇರ್‌ಫಂಡ್ ಹಮ್ಮಿಕೊಂಡಿದೆ. ಕೊಚ್ಚಿಯಿಂದ ಪ್ರಾರಂಭವಾಗಿ ಕಾರ್ಕಳದಂತಹ ಪುಟ್ಟ ಊರುಗಳಲ್ಲಿಯೂ ಅನಾಥ ಬಾಲಕರಿಗಾಗಿ ಅಭಯಾಶ್ರಮಗಳೂ ವಿದ್ಯಾಶ್ರಮಗಳೂ ಹಲವಿವೆ. ಇಲ್ಲಿ ಹತ್ತನೆಯ ತರಗತಿಯವರೆಗೆ ಉಚಿತ ಶಿಕ್ಷಣ, ಊಟೋಪಚಾರಗಳನ್ನು ನೀಡಲಾಗುವುದು. ಮಾತ್ರವಲ್ಲ ಭವಿಷ್ಯದಲ್ಲಿ ಬದುಕಲು ಜೀವನಾವಶ್ಯಕ ಉದ್ಯೋಗ ಒಂದನ್ನು ಒದಗಿಸಿಕೊಡುವ ಜವಾಬ್ದಾರಿಯನ್ನೂ ಇದೇ ಹೊತ್ತಿದೆ. ಹರಿದ್ವಾರದಲ್ಲಿ ಬಡ ಜನರಿಗೆ ನಿತ್ಯಭೋಜನ ಹಾಗೂ ಉಚಿತ ವೈದ್ಯಕೀಯ ತಪಾಸಣೆಗ

ವ್ಯವಸ್ಥೆ ಇದೆ. ಬೆಂಗಳೂರಿನ ಶ್ರೀ ಕಾಶೀಮಠದಲ್ಲೂ ಒಂದು ಚಾರಿಟಿ ಪ್ರಾರಂಭಿಸಲಾಗಿದೆ.

ಶ್ರೀ ಸುಧೀಂದ್ರತೀರ್ಥರು ಸಮಾಜ ಕಲ್ಯಾಣಕ್ಕಾಗಿ ಕೈಗೆತ್ತಿಕೊಂಡ ಹಲವು ಕಾರ್ಯಕ್ರಮಗಳು ಇನ್ನೂ ಪೂರ್ಣಾವಧಿ ಹೊಂದಿಲ್ಲ. ಪೀಠಕ್ಕೆ ಉತ್ತರೋತ್ತರ ವಾರಸುದಾರನ ಆಯ್ಕೆಯ ಜವಾಬ್ದಾರಿಯನ್ನು ಈಗಾಗಲೇ ಮುಗಿಸಿದ್ದಾರೆ. ಧಾರ್ಮಿಕವಾಗಿ, ಸಾಮಾಜಿಕವಾಗಿ ಗೌಡ ಸಾರಸ್ವತ ಬ್ರಾಹ್ಮಣ ಸಮಾಜವನ್ನು ಪ್ರವಚನಗಳ ಮೂಲಕ ವಿದ್ವತ್ಸಭೆಗಳ ಮೂಲಕ ತಿದ್ದಲು ಯತ್ನಿಸುತ್ತಾರೆ. ಇಂದು ಜಗತ್ತಿಗೆ ಇತರ ಯಾವೆಡೆಯೂ ಕಾಣದ ಸ್ತ್ರೀಧನ ಸಮಾಜಕ್ಕೆ ತಗುಲಿದ ಗ್ರಹಣವಾಗಿ ಗೌಡ ಸಾರಸ್ವತ ಸಮಾಜದಲ್ಲಿ ಬೇರುಬಿಟ್ಟಿದೆ. ಸುಭಾಷಿತದ ಪ್ರಕಾರ ಸ್ತ್ರೀಧನ ಅಪೇಕ್ಷಿಸುವಾತ ಹೀನಾತಿಹೀನ. ಈ ಹಾನಿಕಾರಕ ಸಾಮಾಜಿಕ ಪೀಡೆ ನಿಲ್ಲಿಸುವಲ್ಲಿ ಸ್ವಾಮಿ ಶ್ರೀ ಸುಧೀಂದ್ರರು ತಮ್ಮ ಪ್ರವಚನಗಳಲ್ಲಿ ಸಂದೇಶ ನೀಡುತ್ತಲಿರುತ್ತಾರೆ. ಬಳಲು ಬಿಟ್ಟ ಈ ವಿಷ ವೃಕ್ಷವನ್ನು ಬೇರು ಸಹಿತ ಕೀಳಲು ಇನ್ನೂ ಮೂರು ನಾಲ್ಕು ದಶಕಗಳಾದರೂ ಬೇಕು. ಈ ಬಗ್ಗೆ ಅವರು ಆಶಾಭಾವವನ್ನು ವ್ಯಕ್ತಪಡಿಸುತ್ತಾರೆ.

ಶ್ರೀ ಸುಧೀಂದ್ರತೀರ್ಥ ಸ್ವಾಮಿಗಳು ಉದ್ದಾಮ ಸಂಸ್ಕೃತ ಪಂಡಿತರು. ಹಿರಿಯ ಸ್ವಾಮೀಜಿ ಶ್ರೀ ಸುಕೃತೀಂದ್ರತೀರ್ಥರಿಂದ ಸನ್ಯಾಸ ದೀಕ್ಷೆ ಪಡೆದ ಬಳಿಕ ಕಾರ್ಕಳದಲ್ಲೇ ನೆಲೆಸಿ ಶ್ರೀ ಭುವನೇಂದ್ರ ಸಂಸ್ಕೃತ ಕಾಲೇಜಿನಲ್ಲಿ ಸಂಸ್ಕೃತ ಭಾಷೆಯಲ್ಲಿ ಉಚ್ಚ ಶಿಕ್ಷಣವನ್ನು ಪಡೆದರು. ಶ್ರೀ ಗುರುಗಳು ಸಂಸ್ಕೃತದಲ್ಲೇ ಮನೋಜ್ಞವಾಗಿ ಶ್ರೀ ಬಾದರಾಯಣ ಸುಪ್ರಭಾತ ಕೃತಿ ರಚಿಸಿದ್ದಾರೆ. ಶ್ರೀ ಗುರುಗಳು ಪೀಠವನ್ನು ಅಲಂಕರಿಸಿದ ಬಳಿಕ ಇವರಿಗೆ ಹಲವು ಗೌರವಗಳು ಲಭ್ಯವಾಗಿದೆ. ಮೈಸೂರು ಸರಕಾರದಿಂದ ದೊರಕಿದ ಗೌರವವು ಅವುಗಳಲ್ಲಿ ಒಂದು. ಆ ಗೌರವದ ಪ್ರತಿಯಂತೆ ಸ್ವಾಮೀಜಿಯವರಿಗೆ ಮೈಸೂರು ರಾಜ್ಯದಲ್ಲೆಲ್ಲಾ ಬಿರುದಾವಳಿಗಳೊಂದಿಗೆ ಸಂಚರಿಸುವ ಹಕ್ಕು ನೀಡಲಾಗಿದೆ. ಅಲ್ಲದೆ ಅವರು ಸಂಚರಿಸುವ ಮುಖ್ಯ ಪಟ್ಟಣಗಳಲ್ಲೂ ಗಡಿನಾಡಿನಲ್ಲೂ ಸರಕಾರಿ ಅಧಿಕಾರಿಗಳು ಸ್ವತಃ ಬಂದು ಶ್ರೀ ಸ್ವಾಮಿಗಳನ್ನು ಎದುರುಗೊಳ್ಳಬೇಕಾಗಿದೆ. ಶ್ರೀಗಳ ಬೆಂಗಳೂರು ಭೇಟಿಯ ಸಮಯದಲ್ಲಿ ಭಿಕ್ಷೆಯಾಗಿ ಮೈಸೂರು ಸರಕಾರ ರೂಪಾಯಿ ಐವತ್ತನ್ನು ಕೊಡತಕ್ಕದ್ದು. ಮೈಸೂರಿಗೆ ಶ್ರೀಗಳು ದಯಮಾಡಿಸುವಾಗ ಮೈಸೂರು ಅರಮನೆಯ ಬಿರುದಾವಳಿಗಳೊಂದಿಗೆ ಇವರನ್ನು ಗೌರವಪೂರ್ವಕವಾಗಿ ಪಲ್ಲಕ್ಕಿ ಸೇವೆಯೊಡಗೂಡಿ, ಅರಮನೆಯ ವಾದ್ಯವೃಂದ ಸಮೇತವಾಗಿ ಮೆರವಣಿಗೆಯ ಮೂಲಕ ಬರಮಾಡಿಕೊಳ್ಳಬೇಕಾಗಿದೆ. ಅಂದಿನ ಭಿಕ್ಷೆಯಾಗಿ ರೂಪಾಯಿ ಇನ್ನೂರನ್ನೂ, ಒಂದು ಜೋಡು ಪೀತಾಂಬರವನ್ನೂ ಶ್ರೀಗಳಿಗೆ ಒಪ್ಪಿಸಬೇಕು.

ಒಂದು ಸಮಾಜದ ಬೆಳವಣಿಗೆಯಲ್ಲಿ ದೇವಾಲಯಗಳು, ಮಠಗಳು ವಿಶೇಷ ಪಾತ್ರವಹಿಸುತ್ತವೆ. ಮಠಾಧಿಪತಿಗಳನ್ನೂ ಸಾಮಾನ್ಯ ಜನರನ್ನೂ ಒಂದೇ ತಲದಲ್ಲಿ ತಂದು ನಿಲ್ಲಿಸಿ ಸಮಾಜದ ಲೋಪದೋಷಗಳನ್ನು ಜನತೆಯೊಂದಿಗೆ ಮಠಾಧಿಪತಿಗಳೂ ಸ್ಪಂದಿಸುವಂತೆ ಮಾಡುತ್ತವೆ. ಇದೊಂದು ಆರೋಗ್ಯಕರ ಬೆಳವಣಿಗೆ. ಈಗಾಗಲೇ ಶ್ರೀ ಸುಧೀಂದ್ರತೀರ್ಥರು ನಡೆಸುವ ಗ್ರಾಮಸಭೆಗಳು ಸಮಾಜ ಕಲ್ಯಾಣದ ಇನ್ನೊಂದು ಮುಖ. ನೂರು ಮನೆಗಳಿಗೊಂದರಂತೆ ಸಭೆ ಏರ್ಪಡಿಸಿ ಜನರ ಕಷ್ಟ ಸುಖಗಳನ್ನು ಸನಿಹದಿಂದ ಅರಿತು ಸಹಕರಿಸಿ ಸುಧಾರಿಸುವ ಈ ಯೋಜನೆ ಸ್ವಾಗತಾರ್ಹ. ಸರ್ವ ಸಂಗ ಪರಿತ್ಯಾಗಿಗಳ ಸಮಾಜೋದ್ಧಾರದ ಒಂದು ಚಿತ್ರಣ ಇದು.

ಶ್ರೀಗಳವರ ದ್ವಾದಶ ಸೂತ್ರಗಳು[30] :

1 ಪ್ರಾತಃಕಾಲ ಎದ್ದೊಡನೆ ಪುರುಷರು ದೇವರ ಧ್ಯಾನ ಮಾಡಬೇಕು.

2 ಸ್ತ್ರೀಯರು ತಮ್ಮ ಮಾಂಗಲ್ಯ ರಕ್ಷಣೆಗಾಗಿ ದೇವರನ್ನು ಪ್ರಾರ್ಥಿಸಬೇಕು.

3 ಆತ್ಮೋದ್ಧಾರಕ್ಕಾಗಿ ಶಾಸ್ತ್ರವು ವಿಧಿಸಿದಂತೆ ಸಂಧ್ಯಾವಂದನೆ ಮೊದಲಾದ ಧಾರ್ಮಿಕ ವಿಧಿಗಳನ್ನು ಅನುದಿನವೂ ನೆರವೇರಿಸಬೇಕು.

4 ಪ್ರತೀ ದಿನವೂ ಆರಾಧ್ಯ ದೇವತೆ, ಕುಲದೇವತೆ, ಇಷ್ಟದೇವತೆ ಹಾಗೂ ಧರ್ಮಗುರುಗಳನ್ನು ಸ್ಮರಿಸಿ ಅವರಿಗೆ ವಂದನೆಗಳನ್ನು ಸಲ್ಲಿಸಬೇಕು.

5 ಎಲ್ಲರನ್ನೂ ದಯಾಭಾವದಿಂದ ಕಾಣಬೇಕು.

6 ಯಾವುದೇ ರೀತಿಯಲ್ಲಿ ಯಾರನ್ನೂ ಪೀಡಿಸಿ ಮನನೋಯಿಸಬಾರದು.

7 ಶಕ್ತ್ಯಾನುಸಾರ ದಾನ ಧರ್ಮಾದಿಗಳ ಮೂಲಕ ಇತರರಿಗೆ ಸಹಾಯವನ್ನೀಯಬೇಕು.

8 ಮಾತಾಪಿತರು ಗುರು–ಹಿರಿಯರು ಇವರನ್ನು ಸದಾ ಸಂತೋಷದಲ್ಲಿಡಬೇಕು. ಮನನೋಯಿಸಬಾರದು.

9 ನಿಮಗಿಂತ ಜ್ಞಾನ, ವಯಸ್ಸು, ಸದ್ಗುಣ ಹಾಗೂ ಸ್ಥಾನ ಮಾನಗಳಲ್ಲಿ ಹಿರಿಯರಾದವರಿಗೆ ಮರ್ಯಾದೆಯನ್ನು ಸಲ್ಲಿಸಬೇಕು. ಯಾರನ್ನೂ ನಿಂದಿಸಕೂಡದು.

10 ಏನನ್ನೂ ಕದಿಯಬಾರದು. ಭೋಗಗಳ ಅತ್ಯಾಶೆಯನ್ನು ಮಾಡಕೂಡದು.

11 ದೇವರಲ್ಲಿ ಭಕ್ತಿಯನ್ನು ಪ್ರಚೋದಿಸುವಂತಹ ದೇವರ ಹಾಗೂ ದೈವ ಭಕ್ತರ ಚರಿತ್ರೆಗಳನ್ನೊಳಗೊಂಡ ಸಾಹಿತ್ಯವನ್ನೋದಬೇಕು.

12 ಪ್ರತಿದಿನ ರಾತ್ರಿ ಮಲಗುವ ಮುನ್ನ ದೇವರಿಗೆ ಶರಣಾಗತನಾಗಿ ದಿನವಿಡಿ ಮಾಡಿರಬಹುದಾದ ತಪ್ಪುಗಳಿಗೆ ಆತನಲ್ಲಿ ಕ್ಷಮೆಯನ್ನು ಬೇಡಿ ಆ ಬಳಿಕ ನಿದ್ರಿಸಬೇಕು.



ಗೌಡ ಸ್ವಾರಸ್ವತರ ಮನೆ ಮಾತು ಕೊಂಕಣಿ. ಕೊಂಕಣದವರಾಡುವ ನುಡಿ ಕೊಂಕಣಿ. ಹಾಗಾದರೆ ಕೊಂಕಣ ಯಾವುದು? ಈಗಿನ ಗೋವಾ ಮತ್ತು ಮಹಾರಾಷ್ಟ್ರದ ರತ್ನಗಿರಿ ಜಿಲ್ಲೆ, ವಿಶೇಷವಾಗಿ ಅರಬ್ಬೀ ಸಮುದ್ರ ಮತ್ತು ಸಹ್ಯಾದ್ರಿ ಶ್ರೇಣಿಯ ನಡುವಣ ಕರಾವಳಿ ಪ್ರದೇಶ. ಈ ಪ್ರದೇಶದವರ ದೇಶಭಾಷೆ ಕೊಂಕಣಿ. ಗೋವಠಾಂತಕದಲ್ಲಿ 'ಕಾಣ್‌ಕೋಣ್' ಎಂಬ ಊರಿದೆ. ಈ ಕಾಣ್‌ಕೋಣದವರು ಮಾತನಾಡುವ ಭಾಷೆ ಕೊಂಕಣಿ. ಪುರಾಣದ ಪ್ರಕಾರ ಪರಶುರಾಮನು ತನ್ನ ಗಂಡು ಗೊಡಲಿಯನ್ನು ಬೀಸಿ ನಿರ್ಮಿಸಿದ ಸಪ್ತ ದೇಶಗಳಾದ ಕೇರಳ, ತುಳಂಗ, ಸೌರಾಷ್ಟ್ರ, ಕೊಂಕಣ, ಕರಹಾಟ, ಕರ್ನಾಟಕ ಮತ್ತು ಬರ್ಬರ–ಇವುಗಳಲ್ಲಿ ಕೊಂಕಣವೂ ಒಂದು.[31] ಕೊಂಕಣ ಎಂಬ ದೇಶದ ಉಲ್ಲೇಖ ವ್ಯಾಸರ ಮಹಾಭಾರತ,[32] ವರಾಹಮಿಹಿರನ ಬೃಹತ್ ಸಂಹಿತೆ,[33] ದಂಡಿಯ–ದಶಕುಮಾರ ಚರಿತ್ರೆ,[34] ಮೊದಲಾದ ಪ್ರಾಚೀನ ಗ್ರಂಥಗಳಲ್ಲಿ ದೊರೆಯುತ್ತವೆ. ಗ್ರೀಸಿನ ಪೆರಿಪ್ಲಸ್ ಆಫ್ ದ ಎರಿತ್ರಿಯನ್ ಸೀ (80, A.D) ಎಂಬ ಗ್ರಂಥದ ಅಜ್ಞಾತ ಲೇಖಕನು ಥಾನಾ ಎಂಬುದು ಕೊಂಕಣ ಎಂಬ ಆರ್ಯ ದೇಶದಲ್ಲಿದೆ ಎಂದಿದ್ದಾನೆ. ಚೀನಾ ದೇಶದ ಯಾತ್ರಿಕ ಹುಯೆನ್‌ತ್ಸಾಂಗ್–ಕೊಂಕಣಪುರ ಎಂದು ಒಂದೆಡೆ ಕರೆದಿದ್ದಾನೆ. ಹೇಮಾದ್ರಿಯು 'ಕಾಮಸೂತ್ರ'ಕ್ಕೂ 'ರಾಜ ಪ್ರಶಸ್ತಿ'ಗೂ ಬರೆದ ವ್ಯಾಖ್ಯಾನಗಳಲ್ಲಿ ಕೊಂಕಣದ ಹೆಸರು ಬಂದಿದೆ. ಕ್ರಿ.ಶ. 1148 ರಲ್ಲಿದ್ದ ಕಲ್ಹಣನು ತನ್ನ 'ರಾಜತರಂಗಿಣಿ'ಯಲ್ಲಿ ಕೊಂಕಣ ಮತ್ತು ಸಪ್ತ ಕೊಂಕಣಗಳನ್ನು ಹೆಸರಿಸಿದ್ದಾನೆ. ಕೊಂಕಣ ಮತ್ತು ಸಪ್ತ ಕೊಂಕಣ ಎಂಬ ಈ ಎರಡೂ ಹೆಸರುಗಳು ಚಾಲುಕ್ಯ ಚಕ್ರವರ್ತಿಗಳ ಅನೇಕ ಶಾಸನಗಳಲ್ಲೂ ಉಲ್ಲೇಖಿತ ವಾಗಿವೆ.

ಇಂತಹ ಕೊಂಕಣದಲ್ಲಿದ್ದ ಜನರಾಡುವ ಭಾಷೆ–ಕೊಂಕಣಿ ಭಾಷೆ. ಇದು ಇಂಡೋ ಆರ್ಯನ್ ಕುಟುಂಬಕ್ಕೆ ಸೇರಿದ ಆರ್ಯಭಾಷೆ. ಆದರೆ ಮರಾಠಿ ಜನ್ಯವಲ್ಲ. ಇದು ಅರ್ಧ ಮಾಗಧಿ ಮತ್ತು ಶೂರಸೇನಿ ಭಾಷೆಯ ಒಂದು ಉಪಭಾಷೆ–ಅಂದರೆ ಡಯಲೆಕ್ಟ್ ಎಂದು ಕರೆಯಲ್ಪಡುತ್ತದೆ. ಈ ಬಗ್ಗೆ ರಾಷ್ಟ್ರಕವಿ ದಿ. ಗೋವಿಂದ ಪೈ ಅವರು—"ಗೋವೆಗೆ ಕೊಂಕಣಿ ಭಾಷೆಯನ್ನು ತಂದವರು ಸಾರಸ್ವತರೇ. ಬಿಹಾರದಿಂದ ಬಂದವರಾದ ಇವರು ಮಾಗಧೀ ಪ್ರಾಕೃತವನ್ನು ಅನುಕರಿಸಿದರು. ಇದು ಅವರ ಒಂದು ಉಪಭಾಷೆಯಾಗಿ ಅಸ್ತಿತ್ವ ಪಡೆಯಿತು. ಈ ಕಾರಣದಿಂದಾಗಿ ಕೊಂಕಣಿಯು ಮರಾಠಿಯಿಂದ ಹುಟ್ಟಿದ ಉಪಭಾಷೆಯಂತೂ ಅಲ್ಲವೇ ಅಲ್ಲ. ಮೇಲಾಗಿ ಅದು

ನೋಡಿದರೆ ಕೊಂಕಣಿ ಭಾಷೆಯು, ಮರಾಠಿ, ಗುಜರಾಥಿ ಭಾಷೆಯ ಉಪಭಾಷೆಗಳಿಗೆ ಹೆಚ್ಚು ಹತ್ತಿರ ಎನ್ನುತ್ತಾರೆ—

Konkani agrees in the majority of its characteristics with the south western group of languages to which Marathi and Perhaps Gujarathi bclong; and partially with the central group to which Hindi, Central Behari, Nepali, Behari and other languages belong. That Konkani belongs to the south western group; and that the differentiation in the formation of the direct singular of masculine nouns in their extended form and the divergent past positions for the dative elearly mark it as a language separate from Marathi—"

ಡಾ॥ ಆರ್. ಜಿ. ಭಂಡಾರ್‌ಕರ್‌ರವರೂ ಸಹ ಮರಾಠಿ ಮೂಲವನ್ನು ಒಪ್ಪುವುದಿಲ್ಲ. ಡಾ॥ ವಿ. ಎನ್ ಕುಡ್ವರವರೂ ಭಂಡಾರ್‌ಕರ್ ಅವರ ಅಭಿಮತವನ್ನು ಅನುಮೋದಿಸುತ್ತಾರೆ. 'ಅಂದರೆ, ಸ್ವತಂತ್ರ ಭಾಷೆಯಾಗಿ ಕೊಂಕಣಿ ಬಹಳಷ್ಟು ಹಿಂದೆಯೇ ರೂಪುಗೊಂಡಿತ್ತು. ಮರಾಠಿ ಭಾಷೆಯಲ್ಲಿ ಕಾಣಲು ಸಿಗದ ಶಬ್ದಗಳು ಹಾಗೂ ವ್ಯಾಕರಣ ಪ್ರಕಾರಗಳು ಕೊಂಕಣಿ ಭಾಷೆಯಲ್ಲಿವೆ ಪ್ರಾಚೀನ ಕೊಂಕಣಿ ಹಾಗೂ ಪ್ರಾಚೀನ ಮರಾಠಿ ಭಾಷೆಗಳಲ್ಲಿ ಯಥಾವಥ್ ಸಾಮ್ಯವಿದೆ. ಹಾಗಾಗಿ ಮರಾಠಿ ಸೋದರ ಭಾಷೆ, 'ಜ್ಞಾನೇಸ್ವರಿ'ಯಲ್ಲಿ ಬಳಸಲಾದ ಬಹಳಷ್ಟು ಶಬ್ದಗಳು ಹಾಗೂ ಇಡಿಯಂಗಳು ಈಗ ಕೊಂಕಣಿಯಲ್ಲಿ ಮಾತ್ರ ಬಳಕೆಯಲ್ಲಿವೆ. ಮರಾಠಿಯಲ್ಲಂತೂ ಇವು ಈಗ ಇಲ್ಲವೇ ಇಲ್ಲ—'41 ಎನ್ನುವ ಅಭಿಪ್ರಾಯವನ್ನು ಇಬ್ಬರೂ ಒಪ್ಪುತ್ತಾರೆ.

ಡಾ॥ ವಿ. ಪಿ. ಚವ್ಹಾನ್‌ರವರು ಕೊಂಕಣಿಯ ಬಹುತೇಕ ಪದಗಳು ಸಂಸ್ಕೃತದಿಂದ ಬಂದವುಗಳಾಗಿವೆ. ಕೆಲವು ಪದಗಳು ಗುಜರಾತಿಯೊಡನೆ ಸಾಮ್ಯ ಪಡೆದಿವೆ ಎಂದು ಹೇಳುತ್ತಾರೆ. ಅಂತೆಯೇ ಅವರು ಮುಂದುವರಿದು ಪ್ರಾಚೀನ ಗುಜರಾತಿ ಭಾಷೆಯ ಶಬ್ದಗಳು ಇಂದೂ ಕೊಂಕಣಿಯಲ್ಲಿ ಬಳಕೆಯಲ್ಲಿವೆ. ಆದರೆ ಸ್ವತಃ ಗುಜರಾತಿಯಲ್ಲೇ ಆ ಪದಗಳು ಬಳಕೆಯಲ್ಲಿಲ್ಲ ಎನ್ನುತ್ತಾರೆ. ಮರಾಠಿಯಲ್ಲಾಗಲಿ, ಗುಜರಾತಿಯಲ್ಲಾಗಲಿ, ಎಲ್ಲೂ ಕಂಡುಬರದ ಮೂಗಿನಲ್ಲಿ ಸ್ವರ ಹೊರಡಿಸಿ

ನೇರವಾಗಿ ಬಂದ ಪದಗಳು. ಗೋವೆಯಲ್ಲಿ ನೆಲೆಸಿರುವ ಕೊಂಕಣಿಗರ ಭಾಷೆಯಲ್ಲಿ ಬಹಳಷ್ಟು ಪುರಾಣ ಪದಗಳಿವೆ. ಈ ಬದಲಾವಣೆ ಹಿಂದೂ ಜನಾಂಗದಲ್ಲಾದಷ್ಟು ಕ್ರೈಸ್ತ ಜನಾಂಗದ ಕೊಂಕಣಿ ಭಾಷೆಯಲ್ಲಿ ಆಗಲಿಲ್ಲ. ಪುರಾಣಿಯ ಪ್ರಭಾವ ಕ್ರಿಶ್ಚನ್ ಕೊಂಕಣಿಯ ಮೇಲೆ ಕಡಿಮೆ ಆಗಿದೆ. ಅವರು ಪೋರ್ಚುಗೀಸ್ ಶಬ್ದವನ್ನು ಬಹಳಷ್ಟು ಬಳಸಿ ಉಳಿಸಿಕೊಂಡಿದ್ದಾರೆ. ಕ್ರಿಶ್ಚನ್ ಕೊಂಕಣಿಯಲ್ಲಿ ಪತ್ತರಲ್ಲಿ ಒಂದು ಭಾಗ ಪೋರ್ಚುಗೀಸ್ ಶಬ್ದಗಳಿವೆ ಎಂದು ಡಾಲ್‌ಗಾಡೊ ಅಭಿಪ್ರಾಯ ಪಡುತ್ತಾರೆ.[44]

ಕೊಂಕಣಿ ಭಾಷೆ ತನ್ನ ಪ್ರಾಚೀನ ಸ್ವರೂಪವನ್ನು ಉಳಿಸಿಕೊಂಡದ್ದು ಉತ್ತರ ಕರ್ನಾಟಕದಲ್ಲಿಯೇ ಎಂದು ಹೇಳಬಹುದು. ಇವರು ಬಳಸುವ ಭಾಷೆ ಸ್ಪಷ್ಟ ಕೊಂಕಣಿಯಾಗಿದ್ದು ಪೋರ್ಚುಗೀಸ್ ಪದ ಕೇವಲ ಅಲ್ಲೊಂದು, ಇಲ್ಲೊಂದು ಮಾತ್ರ ಕಂಡುಬರುತ್ತದೆ. ಕೊಂಕಣಿಯ ಮೂಲರೂಪವಾದ ಅನುನಾಸಿಕದ ಬಳಕೆ ಇಲ್ಲಿ ಅಧಿಕವಾಗಿದ್ದು ಆಚಾರದ ಮಾತುಗಳಿಲ್ಲ. ಕರ್ನಾಟಕದಲ್ಲಿ ಮಾತನಾಡುವ ಕೊಂಕಣಿ ಭಾಷೆಯಲ್ಲಿ ಪರ್ಶಿಯನ್ ಮತ್ತು ಅರೇಬಿಕ್ ಶಬ್ದಗಳು ಹಲವಿವೆ. ಬಿಜಾಪುರದಲ್ಲಿ ಮುಸ್ಲಿಂ ರಾಜರ ಆಳ್ವಿಕೆಯ ಕಾಲದಲ್ಲಿ ಸೇರಿದ ಶಬ್ದಗಳಿವು. ಕೊಚ್ಚಿಯ ಕೊಂಕಣಿ ಭಾಷೆಯಲ್ಲಿ ಗೋವನ್ ಭಾಷೆಯ ಶಬ್ದಗಳು ಅಧಿಕವಾಗಿವೆ. ಆದರೆ ಮಲೆಯಾಳಿ ಭಾಷೆಯ ಪ್ರಭಾವದಿಂದಾಗಿ ಮಲೆಯಾಳಿ ಶಬ್ದ ಹಾಗೂ ಮಲೆಯಾಳಿ ರೀತಿಯ ಉಚ್ಚಾರಣೆಯೂ ರೂಢಿಯಲ್ಲಿದೆ.

ಮೊದಲಿನಿಂದಲೂ ಪೋರ್ಚುಗೀಸರಿಗ ಸ್ಥಳೀಯ ಕೊಂಕಣಿ ಭಾಷೆಯ ಮೇಲೆಯೇ ಕಣ್ಣು. ಇವರು ಕೊಂಕಣಿ ಭಾಷೆಯನ್ನು—ಲಿಂಗ್ವಾ ಕನರಿಂ ಅಥವಾ ಕನರಿನಾ ಎಂದು ಕರೆದರು. ಫಾದರ್ ಥೋಮಸ್ ಸ್ಟಿಫನ್ ಅವರು ಇದನ್ನು—ಬ್ರಾಹ್ಮಣಾಚಿ ಭಾಷಾ. ಕಣ್ಯಾಚಿ ಭಾಷಾ ಎಂದೂ ಕರೆದರು.[45] ಹದಿನಾರನೆಯ ಶತಮಾನದಲ್ಲೇ--'ಅರ್ಟೆ ಡಿ ಲಿಂಗೋಸ್ ಕನರಿಂ' ಎನ್ನುವ ವ್ಯಾಕರಣ ಗ್ರಂಥವೂ, ಕ್ರೈಸ್ತರ ಪುರಾಣ ಗ್ರಂಥವೂ ಮೊದಲ ಬಾರಿಗೆ ಕೊಂಕಣಿ ಭಾಷೆಯಲ್ಲೇ ಪ್ರಕಟವಾದವು. ಜನರನ್ನು ಮತಾಂತರಗೊಳಿಸುವ ಉದ್ದೇಶದಿಂದ ಯುರೋಪಿಯನ್ ಮಿಶನರಿಗಳು ತಮ್ಮ ಮತೀಯ ಗ್ರಂಥಗಳನ್ನು ಭಾರತೀಯ ಭಾಷೆಯಲ್ಲಿಯೇ ಬರೆದು ಮತಪ್ರಚಾರಕ್ಕೆ ತೊಡಗಿದರು. ಹಾಗಾಗಿ ಈ ಮಿಶನರಿಗಳ ಕಾಲದಲ್ಲೇ ಕೊಂಕಣಿ ಪ್ರವರ್ಧಮಾನಕ್ಕೆ ಬಂದಿತು. ಕ್ರಿಶ್ಚನ್ ಸಂತರ ಜೀವನ ಚರಿತ್ರೆ (ಸ್ತುತಿಗಳು), ರೋಮನ್ ಹಾಗೂ ದೇವನಾಗರಿ ಲಿಪಿಯಲ್ಲೇ ಬರೆಯಲ್ಪಟ್ಟವು. ಕೊಂಕಣಿ ಭಾಷೆಯಲ್ಲಿ ವ್ಯಾಕರಣ, ನಿಘಂಟು, ಹಾಗೂ ಪದಕೋಶ (Vocabulary)ಗಳು ಫಾದರ್ ಫ್ರಾನ್ಸಿಸ್ ಕ್ಸೇವಿಯರ್ ಮಾಫೇರಿಂ ಅವರಿಂದಲೂ ಬರೆಯಲ್ಪಟ್ಟಿತು. ಕೊಂಕಣಿ ದಿನ ಪತ್ರಿಕೆಗಳೂ. ಜರ್ನಲ್‌ಗಳೂ ರೋಮನ್ ಭಾಷೆಯಲ್ಲಿ ಗೋವೆಯಲ್ಲಿ ಪ್ರಕಟ

ಅವರು ಬಹಳಷ್ಟು ಕೃತಿಗಳನ್ನೂ, ಕೊಂಕಣಿ ನಾಟಕಗಳನ್ನೂ ರಚಿಸಿದ್ದಾರೆ. 1879ರಲ್ಲಿ ಗೋವೆಯಲ್ಲಿ ಹುಟ್ಟಿದ ಇವರು ಒಬ್ಬ ಪ್ರತಿಭಾವಂತ ಬರಹಗಾರರು. 'ಶೆಣ್ಯೆ ಗೊಯಾ ಬಾಬಾ' ಎನ್ನುವ ಕಾವ್ಯನಾಮದಲ್ಲಿ ಕೊಂಕಣಿ, ದೇವನಾಗರಿ, ಮರಾಠಿ ಹಾಗೂ ರೋಮನ್ ಲಿಪಿಯಲ್ಲೂ ಕೃತಿಗಳನ್ನು ಬರೆದಿದ್ದಾರೆ.

ಮೊದಲೇ ತಿಳಿಸಿದಂತೆ 1614ರಲ್ಲಿ 'ಕ್ರೈಸ್ತ ಪುರಾಣ' ಎಂಬ ಕೃತಿ ಹಿಂದೂ ಪುರಾಣ ಗ್ರಂಥಗಳಂತೆ ಪದ್ಯ ರೂಪದಲ್ಲಿ ಪ್ರಕಟವಾಯಿತು. ಇದರ ರಚನೆಯಲ್ಲಿ ಮರಾಠಿಯ ಸಾಹಿತ್ಯಕ ಪ್ರಭಾವ ಬಹಳಷ್ಟು ಕಂಡುಬರುತ್ತದೆ. ಮರಾಠಿಯ 'ಓವಿ' ಬಳಕೆ ಇಲ್ಲೂ ಬಳಸಿದ್ದಾರೆ. ಏಕನಾಥ, ಮುಕ್ತೇಶ್ವರ, ಧ್ಯಾನದೇವರುಗಳು ಪ್ರಚಲಿತಗೊಳಿಸಿದ ಈ ಓವಿ ಧಾಟಿ ಮುಂದೆ ಕೊಂಕಣಿ ಜಾನಪದದಲ್ಲೂ ಕಂಡು ಬಂದಿದೆ. ವಿವಾಹ ಸಮಯದಲ್ಲಿ ಹೆಣ್ಣು ಗಂಡಿನ ಕುಟುಂಬದವರು ಬಿಗುಮಾನ ಕಡಿಮೆಯಾಗಲು ಪರಸ್ಪರ ವಿನೋದವಾಗಿ ಅಣಕವಾಡುವ ಕೊಂಕಣಿಯ ಜಾನಪದ ಹಾಡು ಇಂದೂ ಬಳಕೆಯಲ್ಲಿದೆ. ಇದರಲ್ಲೂ ಮರಾಠಿಯ ಓವಿ ಪ್ರಭಾವ ಇದೆ.

ಇಂದು ಕೊಂಕಣಿ ಭಾಷೆಯನ್ನಾಡುವವರು ಭಾರತದ ಉದ್ದಗಲಕ್ಕೂ ಹರಡಿ ಗಣನೀಯ ಸ್ಥಾನವನ್ನು ಗಳಿಸಿದ್ದಾರೆ. ಕೇರಳದಲ್ಲಿ ಎಂಟನೆಯ ಒಂದು ಭಾಗ ಜನಸಂಖ್ಯೆ ಕೊಂಕಣಿ ಭಾಷೆಯನ್ನು ಆಡುವವರು. ಮುಂಬೈಯಲ್ಲಿ ಇವರು ನಾಲ್ಕನೆಯ ಸ್ಥಾನವನ್ನು ಪಡೆದಿದ್ದಾರೆ ಅನ್ನುತ್ತಾರೆ. ಇಂದು ಭಾರತದಲ್ಲಿ ಐದು ಮಿಲಿಯ ಕೊಂಕಣಿಗರು ಇರಬಹುದೆಂದು ಅಂದಾಜು ಮಾಡಲಾಗಿದೆ.

ಪ್ರಪಂಚದಲ್ಲಿ ಸುಮಾರು ಮೂರುವರೆ ಸಾವಿರ ಭಾಷೆಗಳಿವೆ. ಅವೆಲ್ಲವೂ ಒಂದೇ ರೂಪದವುಗಳಲ್ಲ ಅಥವಾ ಒಂದೇ ಸ್ವರೂಪದವುಗಳೂ ಅಲ್ಲ. ಒಂದೊಂದರಲ್ಲೂ ವೈಶಿಷ್ಟ್ಯ ಇದ್ದೇ ಇರುತ್ತದೆ. ಅವುಗಳನ್ನು ಗುರುತಿಸಿ ಭಾಷಾವಿಜ್ಞಾನಿಗಳು ಅಧ್ಯಯನದ ಅನುಕೂಲಕ್ಕಾಗಿ ವರ್ಗೀಕರಿಸಿಕೊಂಡಿದ್ದಾರೆ. ಅವುಗಳಲ್ಲಿ ಪ್ರಮುಖವಾದವು ಈ ನಾಲ್ಕು :[47]

1 ಭೌಗೋಳಿಕ ವರ್ಗೀಕರಣ.

2 ಜಾನಾಂಗಿಕ ವರ್ಗೀಕರಣ.

3 ಪ್ರಾರೂಪಿಕ ವರ್ಗೀಕರಣ.

4 ವಾಂಶಿಕ ವರ್ಗೀಕರಣ.

ಈ ನಾಲ್ಕು ವರ್ಗೀಕರಣಗಳಲ್ಲಿ ವಾಂಶಿಕ ವರ್ಗೀಕರಣ ತುಂಬಾ ಸಾಂಪರ್ಕ ಮತ್ತು ಬಹುಜನ ಸ್ವೀಕೃತ. ಸ್ಥೂಲ ನೋಟಕ್ಕೆ ಕೆಲವು ಭಾಷೆಗಳು ಭಿನ್ನ

...ನ್ನವೆಂದು ಕಂಡರೂ ಮೂಲ ಒಂದೇ. ಒಂದು ಮೂಲ ಭಾಷೆಯನ್ನಾಡುತ್ತಿದ್ದ ...ಂದು ಜನಾಂಗ ಬೇರೆಡೆಗೆ ವಲಸೆ ಹೋಗಿ ನೆಲೆಸಿದ ಮೇಲೆ ತಮ್ಮ ತಾಯಿ ನುಡಿಯ ...ಂಪರ್ಕ ಕಳೆದುಕೊಳ್ಳುವುದು ಸಹಜ. ಹಾಗಾದಾಗ ಒಬ್ಬರಿಗೊಬ್ಬರಿಗೆ ಸಂಪರ್ಕ ಇಲ್ಲ ...ಾಗಿ, ಕೆಲವು ವೈಶಿಷ್ಟ್ಯಗಳನ್ನು ಬೆಳೆಸಿಕೊಂಡು ಮೂಲ ಭಾಷೆಯಿಂದ ಭಿನ್ನರಾಗು ...ತ್ತಾರೆ. ಇಲ್ಲವೇ ತಮ್ಮವೇ ವೈಶಿಷ್ಟ್ಯಗಳನ್ನು ಬೆಳೆಸಿಕೊಂಡು ಸ್ವತಂತ್ರ ಭಾಷೆಗಳಾಗು ...ವೆ.

ವಾಂಶಿಕ ವರ್ಗೀಕರಣದಲ್ಲಿ ಹನ್ನೆರಡು ವಿಭಾಗಗಳಿವೆ.[48]

ಇಂಡೋ–ಯುರೋಪಿಯನ್ ಭಾಷಾ ವರ್ಗ : ಇದು ಪ್ರಪಂಚದ ಬಹು ದೊಡ್ಡ ಭಾಷಾ ಪರಿವಾರ. ಇದರಲ್ಲಿ ಇಂಗ್ಲೀಷ್, ಜರ್ಮನ್, ಡಚ್ ಮೊದಲಾದ ಜರ್ಮ್ಯಾನಿಕ್ ಭಾಷೆಗಳೂ; ಫ್ರೆಂಚ್, ಪೋರ್ಚುಗೀಸ್, ಸ್ಪ್ಯಾನಿಶ್ ಇಟ್ಯಾಲಿಯನ್ ಮೊದಲಾದ ರೋಮನ್ ಭಾಷೆಗಳೂ; ರೂಸಿ, ಪೋಲಿಶ್, ಮೊದಲಾದ ಸ್ಲಾವಿಕ್ ಭಾಷೆಗಳೂ; ವೆಲ್ಷ್, ಐರಿಶ್ ಮೊದಲಾದ ಕೆಲ್ಟಿಕ್ ಭಾಷೆಗಳೂ; ಪರ್ಶಿಯನ್, ಅಫ್ಘನ್ ಮೊದಲಾದ ಇರಾನಿಯನ್ ಭಾಷೆಗಳೂ; ಪ್ರಾಕೃತ, ಸಂಸ್ಕೃತ, ಪಾಲಿ, ಹಿಂದಿ, ಕೊಂಕಣಿ, ಮರಾಠಿ, ಬಂಗಾಳಿ, ಅಸ್ಸಾಮಿ, ಗುಜರಾತಿ, ಸಿಂಹಳಿ ಮೊದಲಾದ–ಇಂಡೋ ಆರ್ಯನ್ ಭಾಷೆಗಳೂ ಮತ್ತು ಹಿಟ್ಟೈಟ್ ಭಾಷೆ ಮೊದಲಾದವೂ ಸೇರುತ್ತವೆ.

ಫಿನ್ನೋ–ಉಗ್ರಿಕ್ ಭಾಷಾ ವರ್ಗ
ಫಿನ್ನಿಷ್ ಮತ್ತು ಹಂಗೇರಿಯನ್ ಭಾಷೆ.

ಆಲ್ಟೈಯಿಕ್ ಭಾಷಾ ವರ್ಗ
ಟರ್ಕಿಶ್, ಮಂಗೋಲಿಯನ್ ಮೊದಲಾದ ಭಾಷೆಗಳು.

ಬಾಸ್ಕ್ ಭಾಷಾ ವರ್ಗ
ಫ್ರಾನ್ಸ್, ಸ್ಪೇಯಿನ್ ದೇಶಗಳ ಪಶ್ಚಿಮದಲ್ಲಿನ ಕೆಲವು ಜನರಾಡುವ ಭಾಷೆ.

ಆಫ್ರೊ–ಏಷ್ಯಾಟಿಕ್ ಭಾಷಾ ವರ್ಗ
ಹೀಬ್ರೂ, ಅರೇಬಿಕ್ ಮೊದಲಾದ ಸೆಮಿಟಿಕ್ ಭಾಷೆಗಳೂ, ಈಜಿಪ್ಶಿಯನ್, ಬರ್ಬರ್ ಮತ್ತು ಹೈಮಟಿಕ್ ಭಾಷೆಗಳು.

ನೈಜರ್–ಕಾಂಗೋ ಭಾಷಾ ವರ್ಗ
ಆಫ್ರಿಕಾದ ಗೋಲ್ಡ್ ಕೋಸ್ಟ್, ಐವರಿ ಕೋಸ್ಟ್, ನೈಜೀರಿಯಾದ 'ಕ್ವ'

ಶಾಖೆಯ ಭಾಷೆಗಳೂ, ದ.ಆಫ್ರಿಕಾದ ಸ್ವಹಿಲಿ, ಕೊಂಗೊ, ಲುಬ ಮೊದಲಾದ ಒಂದು ಶಾಖೆಯ ಭಾಷೆಗಳು.

7 ಸೈನೋ–ಟಿಬೇಟಿಯನ್ ಭಾಷಾವರ್ಗ
ಟಿಬೆಟೊ ಬರ್ಮನ್ ಭಾಷೆಗಳ ಮತ್ತು ಅವಕ್ಕೆ ಸಂಬಂಧಿಸಿದ ಹಲವು ಭಾಷೆಗಳು.

8 ದ್ರಾವಿಡ ಭಾಷಾ ವರ್ಗ
ಕನ್ನಡ, ತೆಲುಗು. ತಮಿಳು. ಮಲೆಯಾಳಂ ಎಂಬ ಗ್ರಾಂಥಿಕ ಭಾಷೆಗಳು (cultivated languages). ಬ್ರಾಹು ಈ, ಗದಬ, ಗೊಂಟಿ, ಕೋಟ, ಕೊಡಗು, ಕುಲಾಮಿ, ಕುಋುಟ, ಮಾಲ್ತೊ, ನಾಯ್ಕಿ, ಪರ್ಜಿ, ತೊದ, ತುಳು ಮೊದಲಾದ ನಿಗ್ರಾಂಥಿಕ ಭಾಷೆಗಳು (uncultivated languages).

9 ಮಲೆಯೋ - ಪೋಲಿನೇಶಿಯನ್ ಭಾಷಾ ವರ್ಗ
ಮಲೆಯ, ಇಂಡೋನೇಶಿಯನ್. ಜಾವಾಗೀಸ್. ಪೋಲೀನೇಶಿಯನ್ ಮೊದಲಾದ ಭಾಷೆಗಳು.

10 ಆಸ್ಟ್ರೇಲಿಯನ್ ಭಾಷಾ ವರ್ಗ
ಮತ್ತು

11 ಏಸ್ಟ್ರೊ ಏಶಿಯಾಟಿಕ್ ಭಾಷಾ ವರ್ಗ
ಮಧ್ಯಭಾರತ ಮತ್ತು ಅಸ್ಸಾಮಿನ ಗಿರಿಪ್ರದೇಶಗಳಲ್ಲಿ ಆಡುವ ಸಾಂತಾಲಿ. ಖಿನಿ. ನಿಕೋಬಾರ್ ದ್ವೀಪದ ನಿಕೊಬರಿಸ್ ಮೊದಲಾದ ಭಾಷೆ.

12 ಎಸ್ಕಿಮೊ - ಆಲೆಂಟ್ ಭಾಷಾ ವರ್ಗ
ಎಸ್ಕಿಮೋಗಳ ಭಾಷೆ.

ಇಂಡೋ ಆರ್ಯನ್ ಗುಂಪಿಗೆ ಸೇರಿದ ಸಂಸ್ಕೃತದಿಂದಲೇ ಕೊಂಕಣಿ ಭಾಷೆ ಹುಟ್ಟಿತೆಂದೂ ಹಲವರ ಅಭಿಪ್ರಾಯವಿದೆ. ಇಂಡೋ ಆರ್ಯನ್ ಗುಂಪಿನ ಇತರ ಭಾಷೆಗಳಾದ ಹಿಂದಿ. ಬಂಗಾಳಿ, ಗುಜರಾತಿ, ಮರಾಠಿಗಳಂತೆ ಕೊಂಕಣಿಯೂ ಒಂದು ಸ್ವತಂತ್ರ ಭಾಷೆ. ಇದನ್ನು ಪುರಾವೆಗಳೊಂದಿಗೆ ತಿಳಿಯಬಹುದು. ಈ ಭಾಷೆಯ ನಾಮಪದ, ಕ್ರಿಯಾಪದ ಇತರ ಯಾವುದೇ ಭಾಷೆಯಲ್ಲೂ ಕಂಡು ಬರುವುದಿಲ್ಲ. ಇದೊಂದು ಸ್ವತಂತ್ರ ಭಾಷೆಯಾದ್ದರಿಂದ ದಿನಬಳಕೆಯ ಎಲ್ಲಾ ಶಬ್ದಗಳೂ ಕೊಂಕಣಿಯವೇ ಆದ ಸ್ವತಂತ್ರ ಪದಗಳು. ಉದಾ :

ನಾಮಪದ : ರಾಂದಪ್ = Cooking : ಅಡಿಗೆ
(Noun) ಉಜ್ಜೊ = Fire : ಬೆಂಕಿ
ಕೂಡ = Room : ಕೋಣೆ
ಪಾತ್ಥೋರು = Stone : ಕಲ್ಲು
ಮಾಂದ್ರಿ = Mat : ಚಾಪೆ
ಅಂಗ = Body : ದೇಹ

ಕ್ರಿಯಾಪದ : ಹಾಡ್ಕೆ to bring : ತಾ
(Verb) ಹೊರ್ಕೆ = to take ತಗೊಂಡು ಹೋಗು
ದವ್ರೋರ್ಚೆ = to keep : ಇಡು
ವಚ್ಚೆ = to go : ಹೋಗು

ವಿಶೇಷಣ : ದೀಗು = long : ಉದ್ದ
(adjective) ಥೋರು = stout : ದಪ್ಪ

ಯಾವಿಶೇಷಣ : ಬದ್ದ = truely : ನಿಜವಾಗಿ
(adverb) ಪಟ್ಟಿ = falsely : ಮಿಥ್ಯ
ಹಾಂಗಾ = here : ಇಲ್ಲಿ

position : ಭಿತ್ತರಿ = (ಒಳಗೆ) inside
ಕತೀರ = (ಗಾಗಿ) for

ವರ್ತಮಾನ ಕಾಲದಲ್ಲಿ ಒಂದು ಉದಾಹರಣೆ :

ಹಾಂವ ವತಾ : ನಾನು ಹೋಗುತ್ತೇನೆ : I am going
ತೂ ವತಾ : ನೀನು ಹೋಗುತ್ತಿ : You are going
ತೇ ವತಾ : ಅವು ಹೋಗುತ್ತವೆ : They are going

ಬದಲಾವಣೆಯಾದರೂ ಕ್ರಿಯಾಪದದಲ್ಲಿ ಬದಲಾವಣೆ ಇಲ್ಲ.

ಭಾರತದ, ವಿದೇಶೀಯ ಭಾಷಾ ಪಂಡಿತರು ಮೇಲಿನ ವಿಶೇಷತೆಯನ್ನು ...ನಿಸಿ ಕೊಂಕಣಿಯನ್ನು ಇಂಡೋ ಆರ್ಯನ್ ಗುಂಪಿಗೆ ಸೇರಿದ ಸ್ವತಂತ್ರ ಭಾಷೆ ...ದು ಮಾನ್ಯ ಮಾಡಿದರು.

ಹದಿನಾರು, ಹದಿನೇಳನೆಯ ಶತಮಾನದಲ್ಲಿ ಹನ್ನೆರಡು ಸಂಪುಟಗಳಲ್ಲಿ ...ಗೊಂಡ 'ಪೊರ್ಬಸ್ ಇಂಪಸ್ ಬುಲಬರಿಕಸ್' ಎಂಬ ಕೃತಿಯು ಪರಿಚಯು ಪುಟ

ದಲ್ಲಿ ಕೊಂಕಣಿ ಭಾಷೆಯು ದೇವನಾಗರಿ ಲಿಪಿಯಲ್ಲಿ ಬರೆಯಲ್ಪಟ್ಟ ಒಂದು ಟೆಸ್ಟಿಮೊನಿ ಹಾಗೂ ಕೊಂಕಣಿ ಭಾಷೆಯಲ್ಲಿ ಬರೆದ ಅಪೆಂಡಿಕ್ಸ್ ಇದೆ. ವೈದ್ಯಕೀಯ ಗುಣವುಳ್ಳ ಮರ, ಗಿಡ, ಬಳ್ಳಿ, ಬೇರು ಹೀಗೆ ಆಯುರ್ವೇದಕ್ಕೆ ಸಂಬಂಧಪಟ್ಟ ಇವುಗಳಿಂದ ಔಷಧಗಳನ್ನು ತಯಾರಿಸುವ ಕುರಿತು ಬರೆದಿದೆ. ಸಾರಸ್ವತ ಪಂಡಿತರಾದ ರಂಗಭಟ್ ಅಪ್ಪುಭಟ್, ವಿನಾಯಕ ಪಂಡಿತರ ಬಗ್ಗೆಯೂ ಇದರಲ್ಲಿ ಉಲ್ಲೇಖವಿದೆ. ಏಳುನೂರ ತೊಂಬತ್ತ ನಾಲ್ಕು ತಾಮ್ರಪತ್ರಗಳ ವಿವರಗಳನ್ನೂ ಈ ಕೃತಿ ಕೊಡುತ್ತದೆ.[49]

ಸಸ್ಯಶಾಸ್ತ್ರಕ್ಕೆ ಸಂಬಂಧಿಸಿದ ಭಾರತೀಯ ಪ್ರಪ್ರಥಮ ಕೃತಿಯೊಂದನ್ನು ಆಗಿನ ಕೊಚ್ಚಿಯ ಡಚ್ ಗವರ್ನರ್ ಆಗಿದ್ದ Henric Van Rheeds 1678 ರಲ್ಲಿ ಪ್ರಕಟಿಸಿದನು. ಕೊಚ್ಚಿಯ ಮೂವರು ಆಯುರ್ವೇದ ಪಂಡಿತರಾದ ಅಪ್ಪು ಭಟ್–ವಿನಾಯಕ ಪಂಡಿತ್–ರಂಗಭಟ್ ಅವರು ಗವರ್ನರ್ ಅವರಿಗೆ ಈ ಬೃಹತ್ ಗ್ರಂಥ ಕಾರ್ಯ ಮುಗಿಸಲು ಸಹಕರಿಸಿದರು. ಈ ಕೃತಿಯಲ್ಲಿ ಪ್ರತಿಯೊಂದು ಸಸ್ಯ ಹಾಗೂ ಅವರ ಔಷಧೀಯ ಗುಣಗಳನ್ನು ಸಚಿತ್ರವಾಗಿ ವರ್ಣಿಸಲಾಗಿದೆ. ಹದಿಮೂರು ವರುಷಗಳ ಸತತ ಪರಿಶ್ರಮದಿಂದ ಔಷಧಿ ಮೂಲ ಗಿಡಗಂಟೆಗಳ ವಿಶ್ವಕೋಶ ಬೃಹತ್ ಗ್ರಂಥವಾಗಿ ರೂಪುಗೊಂಡಿತು.

ಈ ಕೃತಿ ದೇವನಾಗರಿ ಲಿಪಿಯಲ್ಲಿದೆ. ಕೊಂಕಣಿ ಭಾಷೆಯನ್ನು ಈ ಕೃತಿಯಲ್ಲಿ ಬ್ರಾಹ್ಮಣಾ ಎಂದು ಸಂಬೋಧಿಸಲಾಗಿದೆ. ಇದಕ್ಕೂ ಒಂದು ಕಾರಣ ಇದೆ. ಪೋರ್ಚುಗೀಸ್ ಹಾಗೂ ಡಚ್ಚರು ಕೊಂಕಣಿಯನ್ನು 'ಲಿಂಗ್ವಾ ಬ್ರಾಹ್ಮಣಿಕಾ' ಎಂದು ಕರೆಯುತ್ತಿದ್ದರು. ಈ ಕೃತಿ ಕೊಂಕಣಿ ಭಾಷೆಯ ದೇವನಾಗರಿ ಲಿಪಿಯಲ್ಲಿದೆ. ಇದನ್ನು ಅಪ್ಪುಭಟ್–ವಿನಾಯಕ ಪಂಡಿತ್–ರಂಗಭಟ್ ಈ ಮೂವರು ಪಂಡಿತರು Henric Van Rheeds ಅವರಿಗೆ ನೀಡಿದರು.

The testiomonium reads :

"In the sakha era of Shalivahana 1596 (1675 A.D.) in the Samvatsara of Rakshasa, in the 10th day of the dark half of the lunar month chaitra, we the three physicians by name Rangabhat, Vinayaka pandit and Appubhat residing in the territory of the Raja of cochin as per orders of Henric Van Rheeds. Sent over to Malabar area those persons having knowledge on medicinal trees, creepers, plants and

ches, which grow in Malabar and that after
ging those medicines, collecting and storing fruits,
ers, leaves, seeds and all that of the plants of
e particular seasons and that based on the autho-
of our dictionary of medical treatises ; what
ct and experiences we have received on medicine,
name of those medicines were noted and that we
e so far spent ten and odd years standing nearby
rning and evening, and that what we have now
pared, one should not say that it is false, stating
wise we ourselves have given our signature. This
uld be considered as true. This we give in writing
Nagari Script.

**ಕಣಿ ಸಾಹಿತ್ಯ :**

ಕಳೆದ ನಾಲ್ಕುವರೆ ಶತಮಾನಗಳಿಂದ ಕೊಂಕಣಿ ಸಾಹಿತ್ಯ ಸೃಷ್ಟಿಯಾಗಿದೆ.
ಸ್ತ ಧರ್ಮದ ಪ್ರಚಾರಕ್ಕಾಗಿಯೇ ರಚಿಸಲ್ಪಟ್ಟ ಹದಿನಾರು, ಹದಿನೇಳನೆಯ ಶತ
ನದ 'ಕ್ರೈಸ್ತ ಪುರಾಣ' ಮರಾಠಿ–ಕೊಂಕಣಿ ಭಾಷೆಯಲ್ಲಿಯೇ ಇದೆ. ಪೋರ್ಚು
ರ ಆಕ್ರಮಣ ಬಳಿಕ ಹಿಂದೂ ಕೊಂಕಣಿಗರು ಮತೀಯ ಗಲಭೆಗೆ ಬಲಿಯಾಗಿ
ಬಿಟ್ಟು ಸಿಕ್ಕ ಸಿಕ್ಕಲ್ಲಿ ತಮ್ಮನ್ನು ತಾವೇ ಭದ್ರಪಡಿಸಲು ಹೆಣಗಾಡುತ್ತಿರಲು ಅವರ
ತ್ಯ ಕೃತಿಗಳು ನಷ್ಟಗೊಂಡವು. ಗೋವೆಯ ಶ್ರೀ ರವೀಂದ್ರ ಕಾಲೇಕರ್ ಅವರು
ಲ್ಲಿಯೋಗ್ರಾಫಿ'ಯಲ್ಲಿ ಸುಮಾರು ಎರಡು ಸಾವಿರ ಪುಸ್ತಕಗಳು ಅವೂ ಕೊಂಕಣಿ
ಷೆಯಲ್ಲಿ ರಚಿತವಾದವುಗಳ ಪರಿವಿಡಿಯನ್ನು ಸೂಚಿಸುತ್ತಾರೆ.

ಕೊಂಕಣಿಯ ಪ್ರಪ್ರಥಮ ಬೃಹತ್ ಗ್ರಂಥ-ರಾಮಾಯಣ ಭಾರತ
ದ ಆಯ್ದ ಕತೆಗಳು. ಕ್ರಿಸ್ತಪೂರ್ವ ಸಾವಿರದ ಐನೂರರಲ್ಲಿ ಪೋರ್ಚುಗೀಸರ
ಮನಕ್ಕಿಂತ ಮೊದಲು ರಚಿತವಾದ ಇನ್ನೂ ಹಲವು ಕೃತಿಗಳಿವೆ. ಅಶ್ವಮೇಧ,
ಲ್ಲ ಚರಿತ, ರಘುನಂದಾಚಿ ಕಥ, ಇವೇ ಮೊದಲಾದವು. ಹದಿನಾರನೆಯ ಶತ
ನದಲ್ಲಿದ್ದ ಕೊಂಕಣಿ ಕವಿ ಶ್ರೀ ಕೃಷ್ಣದಾಸ ಶರ್ಮ ಹಲವು ಕೃತಿಗಳ ಕರ್ತೃ.
ಯರ್ಸನ್ ಅವರು ತಮ್ಮ 'linguistic Survey of India' ದಲ್ಲಿ
ಗೆಂದು ಬರೆದಿದ್ದಾರೆ- 'ಪೋರ್ಚುಗೀಸರ ಆಕ್ರಮಣಕ್ಕೂ ಮೊದಲು ಕೊಂಕಣಿ
ಷಾ ಸಾಹಿತ್ಯ ಸಾಕಷ್ಟು ಪ್ರಸಿದ್ಧವಾಗಿತ್ತು. ಕ್ರೈಸ್ತ ಮಿಷನರಿಗಳ ಆಕ್ರ

ಮಾಣಕ್ಕೆ ಹಿಂದೂ ದೇವಾಲಯಗಳು ಬಲಿಯಾದಾಗ ಸಾಹಿತ್ಯ ಕೃತಿಗಳೂ ಹೇಳ ಹೆ
ರಿಲ್ಲದಂತೆ ನಷ್ಟವಾದವು. ಪೋರ್ಚುಗೀಸರ ಆಕ್ರಮಣ ಕಾಲದಲ್ಲಿ ಗೋವೆಯ
ಪ್ರಚಲಿತವಾಗಿದ್ದ ಭಾಷೆ ಕೊಂಕಣಿ. ಆವಾಗ ಮುಸಲ್ಮಾನ್ ರಾಜ್ಯವಾದ ಬಿಜಾಪು
ದಲ್ಲೂ ಸುಲ್ತಾನರು ಮರಾಠಿ ಭಾಷೆಯನ್ನು ಬಳಸುತ್ತಿದ್ದರು. ಆದ್ದರಿಂದಲ
ಪೋರ್ಚುಗೀಸ್ ಮಿಷನರಿಗಳು ತಮ್ಮ ಹಲವು ಕೃತಿಗಳನ್ನು ಮರಾಠಿ ಭಾಷೆಯಲ್ಲಿ
ಬರೆಯಲು ಪ್ರಾರಂಭಿಸಿದರು.

ಹೀಗೆ 1578ರಲ್ಲಿ ಥೋಮಸ್ ಸ್ಟೀಫನ್ ತಮ್ಮ ಬೃಹತ್ ಗ್ರಂ
'ಕ್ರೈಸ್ತ ಪುರಾಣ'ವನ್ನು ಮರಾಠಿಯಲ್ಲಿ ರಚಿಸಿದರೂ ಜನಸಾಮಾನ್ಯರಿಗೆ ಅರ್ಥ
ವಾಗಲು ಅದರಲ್ಲಿ ಕೊಂಕಣಿ ಭಾಷೆಯನ್ನೂ ಸೇರಿಸಿದರು.

ವಿದೇಶೀ ಮಿಷನರಿಗಳು ಕೊಂಕಣಿ ಭಾಷೆಯಲ್ಲಿ ಕೃತಿಯನ್ನು ರಚಿಸಿದ್ದೇನೋ
ನಿಜ. ಸಬೆಸ್ಟಿಯೊ ಡಾಲ್‌ಗಾಡೋ ಅವರು ವೈಜ್ಞಾನಿಕ ರೀತಿಯಲ್ಲಿ ಕೊಂಕಣಿಯ
1. ಕೊಂಕಣಿ–ಪೋರ್ಚುಗೀಸ್–1893. 2. ಪೋರ್ಚುಗೀಸ್–ಕೊಂಕಣಿ
1905. ಎಂಬ ಎರಡು ನಿಘಂಟುಗಳನ್ನು ಬರೆದರು. ಇಪ್ಪತ್ತನೆಯ ಶತಮಾನ
ಪ್ರಾರಂಭದಲ್ಲಿ ಶ್ರೇಷ್ಠ ಕೊಂಕಣಿ ಬರಹಗಾರ 'Shenoy Goembab' ಅವರ
ಆಧುನಿಕ ಕೊಂಕಣಿಯಲ್ಲಿ ಹಲವು ಹತ್ತು ಕೃತಿಗಳನ್ನು ರಚಿಸಿ 'ಗೋವೆಯ ಪಿತಾಮಹ
(Father of Goa) ಎನಿಸಿದರು. ದಕ್ಷಿಣ ಕನ್ನಡದಲ್ಲೂ-ಚಂದ್ರಹಾಸ ನಾಟಕ
ಪ್ರಹ್ಲಾದ ಚರಿತ ನಾಟಕ-(1917) ಕೃಷ್ಣ ಪ್ರಭು–ಸಾವಿತ್ರಿ ನಾಟಕ (1912)ಗಳನ
ಕುಂಬ್ಳೆ ನರಸಿಂಹ ನಾಯಕ ಅವರೂ ಬರೆದು ಕೊಂಕಣಿ ಸಾಹಿತ್ಯಕ್ಕೆ ಸ್ಥಿರವಾದ ಕಾಣಿ
ಯನ್ನು ನೀಡಿದರು. ಕೇರಳದ ಅಮೂಲತಾ ಶೆಣೈ ಒಬ್ಬ ಶ್ರೇಷ್ಠ ಭಕ್ತ ಕವಯಿತ್ರಿ
ಪುಂಡಲಿಕ ದಾಂಡೋ ಅವರ 'ನಿಮಿತ್ ತಕ್ ಕಾರ್ಣೋಂ' ನಾಟಕ ಮುಂಬೈ, ಗೋ
ಯಲ್ಲಿ ಹಲವು ಹತ್ತು ಬಾರಿ ಪ್ರದರ್ಶನಗೊಂಡಿವೆ. 1890ರಲ್ಲೇ ಕೊಂಕ
ನಾಟಕಗಳು ರಂಗ ಪ್ರದರ್ಶನ ಕಂಡಿವೆ.

ಕೊಂಕಣಿ ಭಾಷೆಯಲ್ಲಿ ಇಪ್ಪತ್ತೈದು ನಿಘಂಟುಗಳು ಹಾಗೂ ಇಪ್ಪತ್ತೊಂದ
ವ್ಯಾಕರಣ ಕೃತಿಗಳೂ ಇಪ್ಪರವರಗೆ ಬೆಳಕುಕಂಡಿವೆ. ಜಾನಪದದಲ್ಲೂ ಕೊಂಕ
ಭಾಷೆಯ ಸಂಪತ್ತು ಶ್ರೀಮಂತವಾಗಿದೆ. ಪ್ರಪ್ರಥಮ ಕೊಂಕಣಿ ಭಾಷಾ ಪತ್ರಿ
ಪುಣೆಯ 'ಉದಯಾಂಚೆ ಸಲಕ್' 1889 ರಲ್ಲಿ ಪ್ರಾರಂಭವಾಯಿತು. ಇದೀ
ಕೊಂಕಣಿ ಭಾಷೆಯಲ್ಲಿ ಇಪ್ಪತ್ತಕ್ಕೂ ಅಧಿಕ ಪತ್ರಿಕೆ ಹಾಗೂ ಮಾಸಿಕಗಳು ಪ್ರಕಟವಾಗ
ತ್ತಲಿವೆ. ದಕ್ಷಿಣ ಕನ್ನಡದಲ್ಲಿ ಬಿ.ವಿ. ಬಾಳಿಗಾ ಅವರು 1966ರಿಂದ 'ಪಂಚ್ಕಾದಾಯಿ

ಎನ್ನುವ ಮಾಸಿಕವನ್ನು ಹೊರಡಿಸುತ್ತಾರೆ. 'ರಾಕ್ಣೊ' ಪತ್ರಿಕೆ ಕೊಂಕಣಿಯ ಮತ್ತೊಂದು ಪ್ರಸಿದ್ಧ ಶಿಖರ.

ಆಕಾಶವಾಣಿಯವರು 1945ರಲ್ಲೇ ಗೋವೆಯಿಂದ ಕೊಂಕಣಿಯಲ್ಲಿ ಪ್ರಸಾರವನ್ನು ಪ್ರಾರಂಭಿಸಿದರು. ಮುಂಬಯಿಯಲ್ಲಿ 1952ರಿಂದಲೂ ಧಾರವಾಡದ ಆಕಾಶವಾಣಿಯಲ್ಲಿ 1965ರಿಂದಲೂ ಕೊಂಕಣಿಯಲ್ಲಿ ಪ್ರಸಾರವನ್ನು ಮಾಡಲಾಯಿತು. ಇದೀಗ ಟ್ರಿವೆಂಡ್ರಂ, ಕಲ್ಲಿಕೋಟೆ, ಆಲಪ್ಪಿ, ತ್ರಿಶ್ಶೂರ್ ಇವೆಲ್ಲ ಕೇಂದ್ರಗಳೂ ಕೊಂಕಣಿ ಭಾಷೆಯನ್ನು ಪ್ರಸಾರ ಮಾಡುತ್ತಿವೆ. ಕೊಂಕಣಿ ಭಾಷೆಯ ಅಭಿವೃದ್ಧಿಗಾಗಿ ಇಂದು ಹಲವು ಸಂಸ್ಥೆಗಳು ಕಾರ್ಯವೆಸಗುತ್ತಿವೆ. ಕಾರವಾರದ ಕೊಂಕಣಿ ಭಾಷಾ ಮಂಡಲ (1939) ಮೊತ್ತ ಮೊದಲನೆಯದು. ಮುಂಬಯಿಯ ಕೊಂಕಣಿ ಸಾಹಿತ್ಯ ಸಮಿತಿ (1944) ಹಾಗೂ ಕೊಚ್ಚಿಯ ಕೊಂಕಣಿ ಭಾಷಾ ಪ್ರಚಾರ ಸಭಾ (1966) ಕೊಂಕಣಿ ಭಾಷೆಯ ಬೆಳವಣಿಗೆಗೆ ತಮ್ಮ ಕೊಡುಗೆಯನ್ನು ನೀಡುತ್ತಲಿವೆ. ಗೋವೆ ಸರಕಾರದಿಂದ ಕೊಂಕಣಿ ಭಾಷೆಗೆ ಮಾನ್ಯತೆ ದೊರಕಿದೆ. ಸರಕಾರ ಕೊಂಕಣಿ ಭಾಷೆಯನ್ನು One of the languages for education ಎಂದು ಮಾನ್ಯ ಮಾಡಿದೆ. ಕೇಂದ್ರ ಸಾಹಿತ್ಯ ಅಕಾಡಮಿ–ದೆಹಲಿಯಿಂದ ಕೊಂಕಣಿ ಸ್ವತಂತ್ರ ಸಾಹಿತ್ಯಕ ಭಾಷೆ ಎಂದು ಮಾನ್ಯತೆ ನೀಡಿದೆ.

ಕೊಂಕಣಿ ಭಾಷೆಯ ಕೆಲವು ಪ್ರಪ್ರಥಮಗಳು :

ಕೊಂಕಣಿ ಭಾಷೆಯಲ್ಲಿ ಬಹುದೊಡ್ಡ ಸಾಹಿತ್ಯಕ ಕೃತಿ ಕ್ರಿ.ಶ. 1563ಕ್ಕೂ ಹಿಂದೆ ರಚಿತವಾಯಿತು.

ಕೊಂಕಣಿಯ ಮೊದಲ ವ್ಯಾಕರಣ ಗ್ರಂಥ ಕ್ರಿ.ಶ. 1568 ರಲ್ಲಿ ರಚಿತವಾಯಿತು.

ಕೊಂಕಣಿಯ ವ್ಯಾಕರಣ ಮೊದಲ ಮುದ್ರಣ ಕಂಡದ್ದು ಕ್ರಿ. ಶ. 1640ರಲ್ಲಿ.

ಕೊಂಕಣಿಯ ಮೊದಲ ಧಾರ್ಮಿಕ ಕೃತಿ ಕ್ರಿ. ಶ. 1607ರಲ್ಲಿ ಮುದ್ರಿತವಾಯಿತು.

ಕೊಂಕಣಿಯ ಬೈಬಲ್‌ನ ಮೊದಲ ಅನುವಾದವನ್ನು ಕ್ರಿ.ಶ. 1667ರಲ್ಲಿ ಮಾಡಲಾಯಿತು.

ಕೊಂಕಣಿಯ ಶಬ್ದಕೋಶ ಕ್ರಿ. ಶ. 1626ಕ್ಕೂ ಮೊದಲು ಪ್ರಕಟವಾಯಿತು.

ಕೊಂಕಣಿ ನಾಟಕವನ್ನು ಮೊದಲಿಗೆ ಕ್ರಿ. ಶ. 1889ರಲ್ಲಿ ಪ್ರದರ್ಶಿಸಲಾಯಿತು.

ಕೊಂಕಣಿಯ ಮೊದಲ ನಾಟಕ ರಂಗಪ್ರದರ್ಶನ ಕಂಡದ್ದು ಕ್ರಿ. ಶ. 1891ರಲ್ಲಿ.

ಕೊಂಕಣಿಯ ಮೊದಲ ಬಾಲಬೋಧೆ ಪ್ರಕಟವಾದದ್ದು ಕ್ರಿ. ಶ. 1886ರಲ್ಲಿ.

—0—



ಮಣಿಪಾಲದ ಮಹಾಶಿಲ್ಪಿ
ಡಾ. ತೋನ್ಸೆ ಮಾಧವ ಪೈ



ಸಮರ್ಥ ಸಂವಾಹಕ
ಶ್ರೀ ಎಂ.ವಿ. ಕಾಮತ್



ಅನಂತ ಚೇತನ
ಶ್ರೀ ತೋನ್ಸೆ ಅನಂತ ಪೈ



ದೇವಶಿಲ್ಪಿ
ಶ್ರೀ ರಂಜಾಳ ಗೋಪಾಲ ಶೆಣೈ

## ಭದ್ರಗಿರಿ ಅಚ್ಯುತದಾಸವರೇಣ್ಯರು

ಪರಶುರಾಮ ಸೃಷ್ಟಿ ಎಂದು ಕರೆಯಲ್ಪಡುವ ದಕ್ಷಿಣ ಕನ್ನಡ ಜಿಲ್ಲೆಯ ಸಪ್ತ ಕ್ಷೇತ್ರಗಳಲ್ಲಿ ಒಂದಾದ ಭದ್ರಗಿರಿ ಎಂಬುದು ಒಂದು ಚಿಕ್ಕ ಹಳ್ಳಿ. ಪಾಜಕ ಕ್ಷೇತ್ರದಿಂದ ಒಂದೆರಡು ಹರಿದಾರಿ ದೂರದಲ್ಲಿರುವ ಸುವರ್ಣಾ ನದಿಯ ತೀರದಲ್ಲಿದೆ ಭದ್ರಗಿರಿ. ಇದು ಶತಮಾನಗಳ ಹಿಂದೆ ಬಹುದೊಡ್ಡ ಜಾನಪದ ಸಾಂಸ್ಕೃತಿಕ ಕಲಾ ಭೂಮಿಯಾಗಿತ್ತು. ಪುರಾಣ ಪ್ರಸಿದ್ಧವಾದ ಕಾಮೇಶ್ವರ ದೇವಾಲಯ, ನದೀತೀರದ ಎತ್ತರದ ಗಿರಿಶೃಂಗ, ಅದರ ಮೇಲೆ ವಿಜೃಂಭಿಸಿದ ದಿಟ್ಟ ವೀರ ವಿಠಲ ದೇವಾಲಯ, ತುಳುನಾಡಿನ ಭೂತಾರಾಧನೆಯ ಅನೇಕ ಪ್ರಾಚೀನ ಭೂತಾಲಯಗಳು, ಇವುಗಳೇ ಆ ಹಳ್ಳಿಯ ಜನರ ಧಾರ್ಮಿಕ. ಸಾಂಸ್ಕೃತಿಕ ಕೇಂದ್ರಗಳು. ಅಲ್ಲಿನ ವಿಠಲ ದೇವರು ನಿಂತ ಗಿರಿಯಿಂದಾಗಿ ಆ ಊರಿಗೆ ಭದ್ರಗಿರಿ ಎಂದು ಹೆಸರುಂಟಾಯಿತು.

ಭದ್ರಗಿರಿಯ ಸುತ್ತಮುತ್ತಲಿನ ಪೈಕಾಡಿ. ಹಾರಾಡಿ. ಬ್ರಹ್ಮಾವರ, ನೀಲಾವರ ಇವೆಲ್ಲ ಯಕ್ಷಗಾನ ಕಲೆಯ ತವರೂರುಗಳು. ಗ್ರಾಮದಲ್ಲ ಕೃಷಿ ಕಾಯಕಗಳು ಮುಗಿದಾಕ್ಷಣ ಎಲ್ಲಡೆ ಕೇಳಿ ಬರುವ ತಾಳ. ಮದ್ದಳೆ. ಚಂಡೆ. ಕುಣಿತ, ಹಾಗೆಯೇ ಭೂತಾರಾಧನೆ. ಪಾದ್ದನ. ನುಡಿಕಟ್ಟು. ವೇಷ ಆವೇಷಗಳ ಕುಣಿತ, ಮೈ ಮೆರೆತ–ಇಂತಹ ಸಾಂಸ್ಕೃತಿಕ ವಾತಾವರಣವು ಅಲ್ಲಿನ ಗ್ರಾಮೀಣ ಬಾಲಕರ ಮುಗ್ಧ ಹೃದಯದಲ್ಲಿ ಸುಪ್ತವಾದ. ಸುಪ್ತವಾದ ಕಲಾಭಿರುಚಿಯನ್ನು ಜಾಗೃತಗೊಳಿಸುತ್ತಿತ್ತು.

ಪಶ್ಚಿಮ ಘಟ್ಟದ ಬುಡದ ಸೋಮೇಶ್ವರ ಎಂಬ ಊರಿನಲ್ಲಿ ನೆಲೆಸಿರುವ ಗೌಡ ಸಾರಸ್ವತ ಬ್ರಾಹ್ಮಣ, ಕೌಂಡಿಣ್ಯಗೋತ್ರದ ಒಂದು ಕುಟುಂಬವು ಹದಿನೆಂಟನೆಯ ಶತಮಾನದ ಕೊನೆಯಲ್ಲಿ ಭದ್ರಗಿರಿಗೆ ಬಂದು ನೆಲಸಿತ್ತು. ಆ ಕುಟುಂಬದ ಮೂಲ ಪುರುಷ ಅನಂತ ಶರ್ಮ (ಪೈ). ಇವರು ಸೋಮೇಶ್ವರದ ಪ್ರಾಚೀನ ದೇವಾಲಯವಾದ ವೆಂಕಟರಮಣ ದೇವಾಲಯದ ದರ್ಶನ ಪಾತ್ರಿಗಳಾಗಿದ್ದರು. ಇವರ ಇಬ್ಬರು ಮಕ್ಕಳು ನಾಗಪ್ಪ ಪೈ ಮತ್ತು ವೆಂಕಟರಮಣ ಪೈ. ಇವರಲ್ಲಿ ನಾಗಪ್ಪ ಪೈಯವರು ಪರಂಪರೆಯ ಆದೇಶಕ್ಕೆ ಒಳಗಾಗಿ ತಾವೂ ದೇವಾಲಯದಲ್ಲಿ 'ದರ್ಶನ ಸೇವೆ' ಸಲ್ಲಿಸುತ್ತಿದ್ದರ . ವೆಂಕಟರಮಣ ಪೈಯವರು ಭದ್ರಗಿರಿಗೆ ಬಂದು ನೆಲೆಸಿ ಅಲ್ಲಿಯೇ ವಿಠಲ ದೇವರ ಸನ್ನಿಧಿಯಲ್ಲಿ ಇರಲು ಬಯಸಿದರು. ಇವರಿಗೆ ಮಹಾಕ್ಷೇತ್ರವಾದ ಪೆರಡೂರಿನ ಶ್ರೀ ಅನಂತ ಪದ್ಮನಾಭ ಕ್ಷೇತ್ರದ ಯಕ್ಷಗಾನ ಮೇಳದ ಪ್ರಧಾನ ಭಾಗವತರು

ಹಾಗೂ ಖ್ಯಾತ ಮೃದಂಗಕಾರ ಕಾಪಾಡಿ ನಾಯಕ್ ಕುಟುಂಬದ ಶ್ರೀ ಅಣ್ಣಪ್ಪ ನಾಯಕರ ಕೊನೆಯ ಪುತ್ರಿ ಶ್ರೀಮತಿ ರುಕ್ಮಿಣೀಬಾಯಿಯವರೊಂದಿಗೆ ವಿವಾಹ ವಾಯಿತು. ಇವರಿಗೆ ಐದು ಗಂಡು ಮಕ್ಕಳೂ, ನಾಲ್ಕು ಹೆಣ್ಣು ಮಕ್ಕಳೂ ಇದ್ದರು.

ಗಂಡು ಮಕ್ಕಳಲ್ಲಿ ಎರಡನೆಯವರಾಗಿ ಶ್ರೀ ಅಚ್ಯುತದಾಸರು ಜನಿಸಿದರು. ಇವರ ಜನನ 1932ರಂದು ಆಯಿತು. ಬಾಲಕ ಅಚ್ಯುತನಿಗೆ ಕಲೆಗಳಲ್ಲಿ ಎಲ್ಲಿಲ್ಲದ ಆಸಕ್ತಿ. ಎಲ್ಲಾ ಕಲೆಗಳ ಸಂಯುಕ್ತ ರೂಪವಾದ 'ಹರಿಕತೆ'ಗೆ ಸ್ಫೂರ್ತಿಯಾದದ್ದು ಆಗಲೇ. ಮನೆಯಲ್ಲಿ ತಂದೆಗೆ ಯಕ್ಷಗಾನದ ಗೀಳು; ತಾಯಿಗೆ ಭಜನೆ, ಕೀರ್ತನೆ, ಸಂಗೀತ ಇವುಗಳ ಮೇಲೆ ಒಲವು. ಇಂತಹ ವಾತಾವರಣದಲ್ಲಿ ತಂದೆ ತಾಯಿ ಇಬ್ಬರ ಕಡೆಯಿಂದಲೂ ಕಲಾತ್ಮಕವಾಗಿ ಕಲೆಯ ವಿಕಾಸಕ್ಕೆ ಕಾರಣವಾಯಿತು. ಯಕ್ಷಗಾನ ಕಲೆ ದಕ್ಷಿಣ ಕನ್ನಡ ಜಿಲ್ಲೆ, ಉತ್ತರ ಕನ್ನಡ ಜಿಲ್ಲೆ ಮತ್ತು ಮಲೆನಾಡಿನ ಸೆರಗಿನ ಪ್ರದೇಶಗಳಾದ ಶಿವಮೊಗ್ಗ ಮೊದಲಾದೆಡೆ ಪ್ರಚಲಿತವಿದೆ. ಇದು ವಿಶೇಷವಾಗಿ ಕುಣಿತ ಪ್ರಧಾನವಾದ ಕಲೆ. ವೇಷ ಕಟ್ಟಿ ರಂಗದ ಮೇಲೆ ನಿಂತು ಬೆಳಗಿನವರೆಗೆ ಕುಣಿಯಬೇಕು. ಇಂತಹ ಕುಣಿತ ಬ್ರಾಹ್ಮಣೇತರರಿಗೇ ಮೀಸಲಾಗಿತ್ತು. ವಿಶೇಷ ವಾಗಿ ಇದನ್ನು 'ಶೂದ್ರ ಕಲೆ' ಎಂದು ಕರೆದವರೂ ಕರೆಯಬಹುದು. ಆದರೆ ಅದನ್ನು ಪೂರ್ವದಿಂದಲೂ, ತಾಳ ಮದ್ದಳೆಯ ರೂಪದಲ್ಲಿ ಪ್ರೋತ್ಸಾಹಿಸಿಕೊಂಡು ಬಂದ ಬ್ರಾಹ್ಮಣರು ಕ್ರಮೇಣ ತಮ್ಮ ಕಾಲುಗಳಿಗೂ ಗೆಜ್ಜೆ ಕಟ್ಟಿಕೊಂಡರು. ಅಂದರೆ ಪಾತ್ರಗಳಾಗಿ, ಭಾಗವತರಾಗಿ, ಸಕ್ರಿಯವಾಗಿ ವೇಷ ಭೂಷಣಗಳೊಂದಿಗೆ ಭಾಗವಹಿಸತೊಡಗಿದರು. ಮೊದಮೊದಲು ಬಹಿರಂಗವಾಗಿ ರಂಗಭೂಮಿಯ ಮೇಲೆ ಬ್ರಾಹ್ಮಣ ವೇಷಧಾರಿಗಳು ವೇಷಕಟ್ಟಿ ನಿಲ್ಲುತ್ತಿರಲಿಲ್ಲ; ತಮ್ಮ ತಮ್ಮ ಇಷ್ಟ ದೈವಗಳ ಮುಂದೆ ಮಾತ್ರ ಅಭಿನ ಯಿಸುತ್ತಿದ್ದರು. ಕ್ರಮೇಣ ಈ ಯಕ್ಷಗಾನ ಕಲೆ ಕರಾವಳಿ ಪ್ರದೇಶದ ಒಂದು ವಿಶಿಷ್ಟ ಕಲೆಯಾಗಿ ಪರಿಣಾಮ ಪಡೆದ ಮೇಲೆ ಬ್ರಾಹ್ಮಣರೂ, ಬ್ರಾಹ್ಮಣೇತರರೂ ವೇಷಕಟ್ಟಿ ಕುಣಿಯತೊಡಗಿದರು. ತಮ್ಮದೇ ಆದ ಅನೇಕ ಮೇಳಗಳೂ ರೂಪು ಗೊಂಡುವು.

ಕರಾವಳಿ ಪ್ರದೇಶದ ಯಕ್ಷಗಾನದಲ್ಲಿ ಎರಡು ರೂಪಗಳಿವೆ. ಒಂದು ಬಡಗುತಿಟ್ಟು. ಮತ್ತೊಂದು ತೆಂಕುತಿಟ್ಟು. ಇವೆರಡರಲ್ಲೂ ಧಾತು ದ್ರವ್ಯಗಳು ಒಂದೇ ಇದ್ದರೂ ವೇಷ, ಅಭಿನಯ ಮತ್ತು ವಾದ್ಯ ಪರಿಕರಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಗಳಿವೆ. ತೆಂಕುತಿಟ್ಟಿನ ಆಟಗಳಲ್ಲಿ ಕೇರಳದ ಅನುಕರಣೆ ಇದ್ದು, ವೇಷಭೂಷಣ ಗಳಲ್ಲಿ ತುಂಬಾ ಆಧುನಿಕವಾಗಿರುವುದು ಕಂಡುಬಂದರೆ ಬಡಗುತಿಟ್ಟಿನ ವೇಷಗಳು ಅಲಂಕಾರಪೂರ್ಣವಾಗಿದ್ದು ತಮ್ಮದೇ ಆದ ಆಭರಣಗಳನ್ನು ಹೊಂದಿದ್ದು ತಮ್ಮ

ವೈಶಿಷ್ಟ್ಯವನ್ನು ಮೆರೆದಿವೆ. ತೆಂಕುತಿಟ್ಟಿನ ಅಲಂಕಾರ ಬಡಗುತಿಟ್ಟಿನಷ್ಟು ಶ್ರೀಮಂತವಲ್ಲ. ಬಡಗುತಿಟ್ಟಿನ ಅಂದಚಂದಕ್ಕೆ ಮಲೆನಾಡಿನ ಅದರಲ್ಲೂ ಸೊರಬ ಪರಿಸರದಲ್ಲಿ ಇದ್ದ ಗುಡಿಕಾರರು ಕೆಳದಿಯನ್ನಾಳಿದ ಕಲಾಭಿಮಾನಿಗಳಾಗಿದ್ದ ಕೆಳದಿಯ ಅರಸರೂ ಕಾರಣ ಇರಬಹುದು. ಕರ್ನಾಟಕದಲ್ಲಿ ಯಕ್ಷಗಾನಕ್ಕೆ ಮೊತ್ತಮೊದಲಿಗೆ ರಾಜಾಶ್ರಯ ಸಿಕ್ಕಿದ್ದು ಕೆಳದಿಯಲ್ಲೇ. ಅದು ಯಕ್ಷಗಾನ ಕಲೆಯ ಪುಣ್ಯ. ಅದಕ್ಕೂ ಮೊದಲು ಕೇರಳದ ವೀರಕೇರಳವರ್ಮ ಎಂದು ಹೆಸರಾದ ಕೊಟ್ಟಾರಕರ್ ಮಹಾರಾಜನಿಂದ (ಕ್ರಿ.ಶ. 1650) ಈ ಕಲೆಗೆ ರಾಜಾಶ್ರಯ ದೊರಕಿತ್ತು. ಅಲ್ಲಿನ ಕಥಕ್ಕಳಿ ನಮ್ಮಲ್ಲಿ ಯಕ್ಷಗಾನದ ರೂಪು ತಳೆಯಿತು. ನೃತ್ಯ ಪ್ರಧಾನವಾದ ಮೃದಂಗ, ಚಂಡೆ ಮೊದಲಾದ ಸೌಮ್ಯ ಸ್ವರೂಪದ ನರ್ತನದಿಂದ ಕೂಡಿದ ಅಭಿವ್ಯಕ್ತಿ ವಿಧಾನ ಬಡಗುತಿಟ್ಟಿನದಾದರೆ, ಜಾಗಟೆ ಚಂಡೆ ಮೊದಲಾದ ರುದ್ರ ರಮಣೀಯ ನೃತ್ಯವಿಧಾನ ತೆಂಕುತಿಟ್ಟಿನದು. ಆದರೆ ನಾಗರಾಜನ ಪೂಜೆಗೆ ಪ್ರಸಿದ್ಧವಾದ ತುಳುನಾಡಿನಲ್ಲಿ ಅದರಲ್ಲೂ ಭದ್ರಗಿರಿಯಲ್ಲಿ ಬಡಗುತಿಟ್ಟಿನ ವಿಧಿ ವಿನ್ಯಾಸಗಳೇ ಹೆಚ್ಚು ಪ್ರಾಚುರ್ಯ ಪಡೆದುವು.[50]

ಇಂತಹ ವಿಶಿಷ್ಟ ಕಲೆಯ ತವರಾದ ಬಡಗುತಿಟ್ಟಿನ ಮಡಿಲಾದ ಭದ್ರಗಿರಿಯಲ್ಲಿ ಅವತರಿಸಿದ ಶ್ರೀ ಅಚ್ಯುತದಾಸರಿಗೆ ಈ ಕಲೆ ಬಾಲ್ಯದಿಂದಲೂ ಮೈಗೂಡಿಕೊಂಡಿತ್ತು. ಈಗಲೂ 'ಪೆರ್ಡೂರ ಮೇಳ' ಎಂದು ಕರೆಯಲ್ಪಡುವ ಯಕ್ಷಗಾನ ಮೇಳದ ಪರಂಪರೆಯವರೇ ಶ್ರೀ ಅಚ್ಯುತದಾಸರ ಮನೆತನದವರು. ಸಂಗೀತದಲ್ಲಿ ಘರಾಣ ಇದ್ದಂತೆ ಬಡಗುತಿಟ್ಟಿನ ಯಕ್ಷಗಾನಕ್ಕೆ ಭದ್ರಗಿರಿ ಊರಾಯಿತು. ಇಂತಹ ಸಾಂಸ್ಕೃತಿಕ ಹಿನ್ನೆಲೆಯಲ್ಲಿಯೇ ಶ್ರೀ ಅಚ್ಯುತದಾಸರು ಬೆಳೆದರು.

ಅಚ್ಯುತದಾಸರೆಂಬುದು ಒಂದು ಹೆಸರಲ್ಲ, ಒಂದು ಮಂತ್ರ. ದಾಸಪಂಥ, ಕೀರ್ತನಪಂಥ ಹರಿದಾಸ ಕೀರ್ತನೆಗಳಲ್ಲಿ ಇವರದ್ದು ಬಹುದೊಡ್ಡ ಹೆಸರು. ಬಹುಶಃ ನ ಭೂತೋ ನ ಭವಿಷ್ಯತಿ ಎನ್ನುವಂತೆ ಕೀರ್ತನ ಕಲೆಯಲ್ಲಿ ಅದ್ವಿತೀಯರೆನಿಸಿದ್ದಾರೆ. ಕೀರ್ತನೆ ಒಂದು ಕಲೆ. ಇದನ್ನು ಹರಿಕಥೆ ಎಂಬುದಾಗಿಯೂ ಕರೆಯುತ್ತಾರೆ. ಹರಿಕಥೆ ಎಂಬುದು ಹರಿನಾಮ ಸಂಕೀರ್ತನೆ ಅಷ್ಟೇ ಅಲ್ಲ, ನಿರಂತರವಾಗಿ ಜಗನ್ನಾಟಕ ಸೂತ್ರಧಾರಿಯಾದ ಶ್ರೀಮನ್ನಾರಾಯಣನ ಲೀಲಾವಿನೋದಗಳನ್ನು ಕಥನರೂಪದಲ್ಲಿ ಚಿತ್ರಿಸುವುದು. ಅವನ ಮಹಾತ್ಮೆಯನ್ನು ಭಜನೆ ಮೊದಲಾದ ಭಕ್ತಿಭಾವಗಳೊಡನೆ ಕೀರ್ತಿಸುವುದು. ಅವನ ಮಹಿಮೆಯನ್ನು ವೈಭವೀಕರಿಸುವುದು. ಇದು ಏಕಪಾತ್ರಾಭಿನಯದ ವಿಶಿಷ್ಟ ಕಲೆ. ಕೀರ್ತನಕಾರರಿಗೆ ಹಲವು ಅರ್ಹತೆಗಳು ಬೇಕು. ಅವನಿಗೆ ಕಂಠತ್ರಾಣ, ಸೊಂಟತ್ರಾಣ ಎರಡೂ ಇರಬೇಕು. ಅಂದರೆ ಮಧುರವಾದ ಕಂಠ, ಆಕರ್ಷಕ ವ್ಯಕ್ತಿತ್ವ, ಸಂಗೀತ ಪರಿಜ್ಞಾನ, ನೃತ್ಯವಿಲಾಸ ವೈಭವ, ಹಾಸ್ಯ ಮನೋವೃತ್ತಿ, ಅಧ್ಯಾತ್ಮ ಚಿಂತನೆ, ಅನುಭಾವ ಸಾಧನೆ–ಇವೇ ಮೊದಲಾದ

ಬಹುಶ್ರುತತ್ವ, ಬಹುಮುಖಿ ಪ್ರತಿಭೆ, ವ್ಯಾಪಕ ಕಲಾಚಾತುರ್ಯ ಇವುಗಳು ಗರ್ಭೀಕೃತವಾಗಿರಬೇಕು. ತಾಳ ಮೇಳಗಳಲ್ಲಿ ನೃತ್ಯ ನಟನೆಗಳಲ್ಲಿ, ಕತೆಗಾರಿಕೆಯಲ್ಲಿ, ಆಶುಕವಿತ್ವದಲ್ಲಿ ವೈನೋದಿಕ ವಿಡಂಬನೆಗಳಲ್ಲಿ ಇವನ ಪ್ರಜ್ಞೆ ಸದಾ ಜಾಗ್ರತವಾಗಿರಬೇಕು. ಇವೆಲ್ಲ ಕಲ್ಯಾಣ ಗುಣಗಳ ಧಾರೆ ಶ್ರೀ ಅಚ್ಯುತದಾಸರಲ್ಲಿದೆ.

ಹರಿಕಥೆಯ ಮೂಲ ಬೇರು ಭಾಗವತ ಮೊದಲಾದ ಪುರಾಣಗಳಲ್ಲಿ ಸಿಗುತ್ತದೆ. ಭಾಗವತದಲ್ಲಿ ಭಕ್ತಿಯ ಒಂಬತ್ತು ಪ್ರಕಾರಗಳು ಈ ರೀತಿಯಾಗಿ ಹೇಳಲ್ಪಟ್ಟಿವೆ: 'ಶ್ರವಣಂ, ಕೀರ್ತನಂ, ವಿಷ್ಣೋಃ ಸ್ಮರಣಂ, ಪಾದಸೇವನಂ, ಅರ್ಚನಂ, ವಂದನಂ, ದಾಸ್ಯಂ, ಸಖ್ಯಂ, ಆತ್ಮನಿವೇದನಂ.[51] ಇವುಗಳಲ್ಲಿ ಕೀರ್ತನ ಒಂದು. ಅಂದರೆ, ನಾವು ಮೊದಲೇ ಹೇಳಿದಂತೆ ಹರಿನಾಮ ಸಂಕೀರ್ತನೆ. ಇಲ್ಲಿಯೇ ಕಥಾಕಾಲಕ್ಷೇಪ ಅರ್ಥಾತ್ ಹರಿಕಥೆ. ಹರಿಕಥೆಯಲ್ಲಿ ಸಹಜವಾಗಿ ಒಂದು ಕಥೆ ಇರುತ್ತದೆ. ಅದು ಪೌರಾಣಿಕವೋ ಐತಿಹಾಸಿಕವೋ ಆಗಿರಬಹುದು. ಆದರೆ, ಅದೇ ಪ್ರಧಾನ ಅಲ್ಲ. ಕಥೆ ಒಂದು ಆಲಂಬನ. ಅದರ ಉದ್ದೀಪನಕ್ಕಾಗಿ ನೀತಿಬೋಧೆ. ತತ್ತ್ವೋಪದೇಶ. ಸಂಸ್ಕೃತಿ ಪ್ರಚಾರ, ಸಾಹಿತ್ಯಕ ಸಂವೇದನೆ, ಸಂಗೀತ ಆಲಾಪ—ಇವೆಲ್ಲವೂ ಅದರೊಡನೆ ಸಹಕರಿಸುತ್ತವೆ. ನಾರದ ಇದರ ಮೂಲ ಪುರುಷ. ನಾರದ ತುಂಬುರರು ಸಂಗೀತದ ಅಧಿದೇವತೆಗಳು. ಅಂತೆಯೇ ತತ್ತ್ವೋಪದೇಶಕರೂ ಹೌದು. ನಾರದ ಎಂಬುದಕ್ಕಿರುವ ಅರ್ಥ ಉಪದೇಶಕ ಎಂದು. ಆದ್ದರಿಂದಲೇ ಕರ್ನಾಟಕ ಸಂಗೀತ ಪ್ರಪಿತಾಮಹರಾದ ಪುರಂದರದಾಸರನ್ನು ನಾರದರ ಅವತಾರ ಎಂದು ಕರೆದಿದ್ದಾರೆ. ಕೀರ್ತನ ಪದ್ಧತಿ ಎಂದರೆ ನಾರದ ಪದ್ಧತಿ. ಸಾಹಿತ್ಯದ ಸವಿ, ಸಂಗೀತದ ಸುಧೆ, ಅಧ್ಯಾತ್ಮದ ಬೋಧೆ ಇವು ಮೂರೂ ಮೇಳೈಸಿಕೊಂಡು ಆದದ್ದೇ ಹರಿಕಥೆ. ಇದು ಏಕಪಾತ್ರಾಭಿನಯವಾದರೂ ಒಂದು ಸಂಕೀರ್ಣ ಕಲೆ (collective art). ನೃತ್ಯ, ಸಂಗೀತ, ಅಭಿನಯದ ಕಕ್ಷೆಯಲ್ಲಿ ರಕ್ಷೆಯನ್ನು ಪಡೆಯುತ್ತದೆ. ಲಲಿತ ಕಲೆಗಳ ರೂಪ ಸ್ವರೂಪಗಳು ಇಲ್ಲಿ ಅರ್ಥವತ್ತಾಗಿ ಅಭಿವ್ಯಕ್ತಿಗೊಳ್ಳುತ್ತವೆ.

ಹರಿಕಥೆಗೆ ಕರ್ನಾಟಕವೇ ತವರು. ಪುರಂದರದಾಸರೇ ಅದರ ಜನಕರು. ಅವರಿಗಿಂತ ಹಿಂದೆ ಇದ್ದ ವಚನಕಾರರಲ್ಲಿ ಸ್ವರವಚನಗಳ ಸ್ರೋತ ಇದ್ದರೆ ಅವರಲ್ಲಿ ಕಥಾನಕದ ಚೈತನ್ಯ ತುಂಬಿದವರು ಪುರಂದರಾದಿ ಪುಣ್ಯಪುರುಷರು. ಇದರಿಂದಾಗಿ ಹಾಲಿಗೆ ಸಕ್ಕರೆ ಬೆರೆತಂತೆ, ಚಿನ್ನಕ್ಕೆ ಕಾಂತಿ ಕೂಡಿದಂತೆ, ಸಾಹಿತ್ಯ ಸಂಗೀತಗಳ ಸಮ್ಮಿಶ್ರಣದಿಂದ ಅಭಿನಯದ ಸಹಯೋಗ ಪಡೆದ ಕೀರ್ತನಕಲೆ ವಿಶಿಷ್ಟ ಕಲಾಪ್ರಕಾರವಾಗಿ ಪ್ರಾಚುರ್ಯ ಪಡೆಯಿತು. ದಾಸವರೇಣ್ಯರು ಅನುಭಾವಿಗಳೂ ಹೌದು ಆದರ್ಶ ಪ್ರವಾದಿಗಳೂ ಹೌದು. ಇವರು ತಾಳ ತಂಬೂರಿ ಹಿಡಿದು ಮನೆ ಮನೆಯನ್ನೂ ಮನ ಮನವನ್ನೂ ಒಂದು ಅನುಭವ ಮಂಟಪವನ್ನಾಗಿ ಮಾಡಿದರು. ಕನ್ನಡ

ನಾಡಿನಲ್ಲಿ ಈ ಹರಿದಾಸರಿಂದ ಭಕ್ತಿಯ ಭಾಗೀರಥಿ ಹರಿಯಿತು. ಈ ಹೊನಲು ಕಾಲಕ್ರಮೇಣ ಕರ್ನಾಟಕದಿಂದ, ತಮಿಳುನಾಡು, ಆಂಧ್ರಪ್ರದೇಶ, ಮಹಾರಾಷ್ಟ್ರ ಮೊದಲಾದ ಕಡೆಗೆ ಹರಿಯ ತೊಡಗಿತು.

ಉತ್ಪನ್ನಾ ದ್ರಾವಿಡೇ ಸಾಹಂ ಕರ್ನಾಟಕೇ ವೃದ್ಧಿಂಗತಾಹ
ಕ್ವಚಿನ್ ಕ್ವಚಿನ್ ಮಹಾರಾಷ್ಟ್ರೇ ಘೂರ್ಜರಾವಶ್ ಜೀರ್ಣತಾಂಗತಾಃ ॥

ಈ ಶ್ಲೋಕವೇ ಇದಕ್ಕೆ ಸಾಕ್ಷಿ. ಇಂದು ಕರ್ನಾಟಕದಲ್ಲಿ ಬೇರುಬಿಟ್ಟು ಆಕಾಶದೆಡೆಗೆ ಮೊನವೆತ್ತಿ ನಿಂತ ಹರಿಕೀರ್ತನ ವಟವೃಕ್ಷ ಇಡೀ ದಕ್ಷಿಣ ಭಾರತದಲ್ಲಿ ತನ್ನ ಶಾಖೋಪ ಶಾಖೆಯನ್ನು ಚಾಚಿಕೊಂಡು ಬೃಹತ್ ಪ್ರಮಾಣದಲ್ಲಿ ಬೆಳೆದಿದೆ.

**ಬಾಲ್ಯ :**

ಬಾಲಕ ಅಚ್ಯುತನ ಬಾಲ್ಯ ಇತರ ಮಕ್ಕಳಂತೆ ಇರಲಿಲ್ಲ. ಅವನ ಪ್ರತಿ ಯೊಂದು ಕ್ರಿಯೆಯಲ್ಲೂ ಯಾವುದೋ ಒಂದು ಅಂತಃಶಕ್ತಿಯ ಪ್ರೇರಣೆ ಎದ್ದು ಕಾಣುತ್ತಿತ್ತು. ಈ ಕೆಲವು ಘಟನೆಗಳು ಮೇಲಿನ ಮಾತಿಗೆ ಪುಷ್ಟಿ ಕೊಡುತ್ತವೆ :

1943ರಂದು ಶಿವರಾತ್ರಿಯ ದಿನ ಕಾಮೇಶ್ವರ ದೇವಾಲಯದಲ್ಲಿ ಆಗಿನ ಯಕ್ಷಗಾನ ಹಾಗೂ ಹರಿಕತೆಗೆ ಹೆಸರಾದ ಶಂಕರನಾರಾಯಣ ಸಾಮಗರ ಹರಿ ಕಥಾ ಕಾಲಕ್ಷೇಪವಿತ್ತು. ಏನೋ ಕಾರಣಾಂತರಗಳಿಂದ ಅವರಿಗೆ ಬರಲಾಗಲಿಲ್ಲ. ಗೆಳೆಯರ ಗುಂಪು ಬಾಲಕ ಅಚ್ಯುತನನ್ನು ಹುರಿದುಂಬಿಸಿತು. ಅಷ್ಟರಲ್ಲಿ ಯಾರೋ ಆತನಿಗೆ ಕಚ್ಚೆ ಪಂಚೆ ಹಾಕಿ ಶಾಲು ಹೊದಿಸಿ, ತಾಳ ಚಿಟಿಕೆ ತರಿಸಿ ಸಿದ್ಧತೆ ನಡೆಸಿದರು. ಊರ ಮಹನೀಯರು ಶ್ರೀ ಕಾಮೇಶ್ವರನ ಮುಂದೆ ಬಾಲಕನನ್ನು ಕರೆದುಕೊಂಡು ಹೋಗಿ ಪ್ರಸಾದ ಕೊಡಿಸಿ ವೇದಿಕೆಗೆ ತಂದು ನಿಲ್ಲಿಸಿದರು. ಬೆದರಿದರೂ ಅಭಯನನ್ನು ನೆನೆದು ಏನೂ ಅನುಭವವಿಲ್ಲದ ಈ ಬಾಲಕನು ಯಾವುದೋ ಶಕ್ತಿಯಿಂದ ಆದೇಶಿತ ನಾದಂತೆ ಶಿವರಾತ್ರಿಯ ಇಡೀ ರಾತ್ರಿ 'ಗಿರಿಜಾ ಕಲ್ಯಾಣ' ಹರಿಕತೆ ನಡೆಸಿದನು. ಮರುದಿನ ಊರಲ್ಲೆಲ್ಲಾ ಅದೇ ಮಾತು. ಇದನ್ನು ತಿಳಿದ ತಂದೆ ತಾಯಿಯರಿಗೂ ಅತೀವ ಆನಂದ.

ಮರುದಿನವೇ ನಾನಾ ಊರುಗಳಿಂದ ಹರಿಕತೆಗೆ ಆಮಂತ್ರಣ ಬರ ಲಾರಂಭಿಸಿದುವು. ಯಕ್ಷಗಾನದ ಮೂಲಕ ಅರ್ಥಧಾರಿಗಳಿಂದ, ಹಿರಿಯರಿಂದ ಕೇಳಿ ತಿಳಿದ ಅನುಭವದಿಂದ ಗೆಳೆಯರ ಒಲವಿನಿಂದ ಸ್ವಂತಿಕೆಯಿಂದ ಶ್ರೀ ಅಚ್ಯುತದಾಸರು ಕಥಾ ಕಾಯಕವನ್ನು ಪ್ರಾರಂಭಿಸಿದರು.

1958ರಲ್ಲಿ ನಡೆದ ಮರೆಯಲಾಗದ ಒಂದು ಘಟನೆಯನ್ನು ಶ್ರೀ ಅಚ್ಯುತ ದಾಸರು ವಿವರಿಸುತ್ತಾರೆ. ದಕ್ಷಿಣ ಕನ್ನಡದ ಸುರತ್ಕಲ್ಲಿನಲ್ಲಿ ಒಮ್ಮೆ ಹರಿಕತೆ ನಡೆಸುತ್ತಿರುವಾಗಲೇ ಶ್ರೀ ದಾಸರಿಗೆ ಸಿಡುಬು-ರೋಗ ಸೋಂಕಿತು. ಹರಿಕತೆಯನ್ನು ಮಧ್ಯದಲ್ಲೇ ನಿಲ್ಲಿಸಿ ಶ್ರೀ ದಾಸರು ಭದ್ರಗಿರಿಗೆ ಮರಳಬೇಕಾಯಿತು. ಅಷ್ಟರಲ್ಲಿ ಯಾರೋ ಅಪಪ್ರಚಾರ ಮಾಡಿದರು: ದಾಸರು ತಪ್ಪು ತಪ್ಪಾಗಿ ದೇವಿಯ ಕತೆ ಹೇಳಿದ್ದರಿಂದ ಅವರಿಗೆ ಸಿಡುಬಿನ ಸೋಂಕು ತಗಲಿ ನಿಧನ ಹೊಂದಿದರು ಎಂಬ ಗಾಳಿ ವಾರ್ತೆಯು ಹಬ್ಬಿತು. ಅದು ಆಗಿನ ದೈನಿಕ 'ನವಭಾರತ' ಎಂಬ ಪತ್ರಿಕೆಯಲ್ಲಿ ಪ್ರಮುಖ ಸುದ್ದಿಯಾಗಿ ಬಂದಿತು. ಗತಿಸಿದರೆಂಬ ಶ್ರೀ ದಾಸರು ಮನೆಯಲ್ಲೇ ತಮ್ಮ ತಂದೆ ತಾಯಿ ಪತ್ನಿಯ ಜೊತೆ ಇದ್ದುದರಿಂದ ಕಾಳಜಿಗೆ ದಾರಿಯಾಗಲಿಲ್ಲ. ಇಲ್ಲದಿದ್ದರೆ ಮನೆ ಮಂದಿಗೆಲ್ಲಾ ಚಿಂತೆಯಿಂದ ಗಾಬರಿಯಾಗುತ್ತಿತ್ತು. ಮುಂದೆ ಐದಾರು ದಿನಗಳಲ್ಲಿ ಶ್ರೀ ದಾಸರು ಸುರತ್ಕಲ್ಲಿಗೆ ಬಂದು ಮತ್ತೊಮ್ಮೆ ಹರಿಕತೆ ಪ್ರಾರಂಭಿಸಿದರು. ಗತಿಸಿದ ಶ್ರೀ ದಾಸರನ್ನು ಜೀವಂತವಾಗಿ ಕಾಣಲು ಸಾವಿರಾರು ಜನರು ಬಂದು ಸೇರಿದರು. ಇದು ಶ್ರೀದಾಸರ ಪಾಲಿಗೆ ಪುನರ್ಜನ್ಮ ಮಾತ್ರವಲ್ಲ ಅತಿ ಹೆಚ್ಚಿನ ಪ್ರಚಾರಕ್ಕೂ ಹೇತುವಾಯಿತು.

ಹೀಗೆ ತಂದೆಯವರ ವ್ಯಾಪಾರ ವೃತ್ತಿಗೆ ಹೊಂದಿಕೊಳ್ಳಲು ಸಾಧ್ಯವಾಗದೆ ಕಲಾ ಪ್ರಕಾರಕ್ಕೇ ಅಚ್ಯುತ ದಾಸರು ತಮ್ಮನ್ನು ತಾವೇ ತೊಡಗಿಸಿಕೊಂಡರು. ಉಡುಪಿಗೆ ಬಂದು ಅಲ್ಲಿಯ ಸಂಸ್ಕೃತ ಪಂಡಿತರನ್ನೂ ಕೆಲವು ಪ್ರಮುಖ ವಿದ್ವಾಂಸರನ್ನೂ ಕಂಡು ಶ್ರೀ ಮಾಧ್ವಶಾಸ್ತ್ರಗಳ ಅಧ್ಯಯನ ನಡೆಸಿದರು. ಶ್ರೀ ವಾಮನಭಟ್ಟರ ಪುತ್ರಿ ಶ್ರೀಮತಿಯೊಂದಿಗೆ ವಿವಾಹವಾಗಿ ಗ್ರಹಸ್ಥಾಶ್ರಮ ಸ್ವೀಕರಿಸಿದರು. ಅವರ ಪ್ರೇಮ ದಾಂಪತ್ಯದ ಫಲವಾಗಿ ಏಳು ಮಕ್ಕಳು ಜನಿಸಿದರು. ಆದರೆ ಈಗ ಪತ್ನೀ ವಿಯೋಗದಿಂದ ಋಷಿ ಜೀವನ ಸಾಗಿಸುತ್ತಿದ್ದಾರೆ ಶ್ರೀ ದಾಸರು.

**ಜೀವನದಲ್ಲಿ ಸಾಧನೆ :**

ಕರ್ನಾಟಕದಲ್ಲಿ ಕೀರ್ತನಕಾರರಾದ, ಹರಿದಾಸ ಸಂತ ಭದ್ರಗಿರಿ ಅಚ್ಯುತ ದಾಸರನ್ನು ತಿಳಿಯದವರಿಲ್ಲ. ನಾಲ್ಕು ದಶಕಗಳ ಕಾಲ ಅಖಂಡ ಕೀರ್ತನ ಸೇವೆ ಗೈದ ಇವರು ಸರ್ವರಿಂದಲೂ ಸನ್ಮಾನಿತರಾಗಿದ್ದಾರೆ. ಭಾರತಾದ್ಯಂತ ಪರಿವ್ರಾಜಕರಾಗಿ ಸಂಚರಿಸಿ, ವೈದಿಕ ಧರ್ಮ ಹಾಗೂ ಸಂತ ಸಾಹಿತ್ಯ ಪ್ರಚಾರ ಮಾಡಿ ಭಾರತ ಮಾತೆಯ ಪುಣ್ಯ ಪುತ್ರರೆನಿಸಿದ್ದಾರೆ. ಸಹಸ್ರಾರು ಜನರಿಗೆ ತತ್ವ ಕಥಾಮೃತ ಪಾನ ಮಾಡಿಸಿದ ಇವರು ಮಾಡುವ ಸಾಹಿತ್ಯ ಸೇವೆ ಅಪಾರವಾದುದು. ಕನ್ನಡ, ತುಳು, ಕೊಂಕಣಿ, ಮರಾಠಿ, ಹಿಂದಿ ಭಾಷೆಗಳಲ್ಲಿ ಕೀರ್ತನೆ ಮಾಡುವ ಇವರು ಭಾರತದ ಭಾವೈಕ್ಯತೆಯ ಪ್ರತಿರೂಪವೆನಿಸಿದ್ದಾರೆ. ಇವರೊಬ್ಬ ಧರ್ಮ ಪ್ರಚಾರಕರೂ ಹೌದು ಧರ್ಮ ಪ್ರವರ್ತಕರೂ ಹೌದು. ಯಕ್ಷಗಾನ, ನಾಟಕ ಕಲೆಗಳಲ್ಲೂ ನಿಷ್ಣಾತರಾದ

ರು ಅರವತ್ತಕ್ಕೂ ಮಿಕ್ಕು ಮೌಲಿಕ ಕೃತಿಗಳನ್ನು ರಚಿಸಿ ಸಾಹಿತ್ಯ ಮತ್ತು ಕೃತಿಯ ಸೇವೆ ಸಲ್ಲಿಸಿದ್ದಾರೆ. ಕೀರ್ತನಕಾರರ ಅನೇಕ ಸಮ್ಮೇಳನಗಳ ಸಂಚಾಲಕ ಅನೇಕ ಮತಧರ್ಮ ಸಮ್ಮೇಳನಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ತಮ್ಮ ಕಲೆ ನ್ನು ಸಾರ್ಥಕನಾಗಿಸಿಕೊಂಡ ಸಜ್ಜನರು ಇವರು. ಅಸಂಖ್ಯ ಭಕ್ತರ ಜೊತೆ ಕ ಬಾರಿ ಆಸೇತು ಹಿಮಾಚಲ ಯಾತ್ರೆ ಮಾಡಿದ ಮಾನನೀಯರು ಶ್ರೀ ದಾಸರು. ವ ಹೋದಲ್ಲೆ ಭಜನಾ ಮಂಡಲಿ, ಕೀರ್ತನೆ ಸಭೆಗಳನ್ನು ಏರ್ಪಡಿಸಿ ಸತ್ಸಂಗದಲ್ಲಿ ಗೆ ಅಭಿರುಚಿ ಉಂಟಾಗುವಂತೆ ಮಾಡಿದವರು.

ಇವರಿಗೆ ಗೀತೋಪನ್ಯಾಸಗಳು ಆಬಾಲ ವೃದ್ಧರಿಗೂ ಆಕರ್ಷಕವಾದವುಗಳು ವರದಲ್ಲಿ ಇದ್ದ ಯಕ್ಷಗಾನದ ಪ್ರಭಾವದಿಂದ, ಕಲೆಗಳಲ್ಲಿ ಇರುವ ಸ್ವಾಭಾವಿಕ ದಿಂದ ಇವರ ಲೌಕಿಕ ವಿದ್ಯಾಭ್ಯಾಸ ಪ್ರಾಥಮಿಕದವರೆಗೆ ಮಾತ್ರ ಸಾಗಿತ್ತು. ಬಳಿಕ ಮಠದ ಶ್ರೀ ಸುಧೀಂದ್ರತೀರ್ಥ ಸ್ವಾಮಿಗಳ ಆಶ್ರಯ ಪಡೆದು ಅವರ ಅನುಗ್ರಹ ರ್ಶನದಿಂದ, ತಮ್ಮ ಸ್ವಂತ ಪರಿಶ್ರಮದಿಂದ ಸಂಗೀತ, ಸಾಹಿತ್ಯ, ಸಂಸ್ಕೃತಿ ನ್ನೂ ವೇದಾಂತಾದಿ ಶಾಸ್ತ್ರಗಳನ್ನೂ ಅಧ್ಯಯನ ಮಾಡಿದರು. 1956ರಲ್ಲಿ ಪಿಯಲ್ಲಿ ನಡೆದ ಕಾಶಿಮಠಾಧೀಶರಾದ ಶ್ರೀ ಸುಧೀಂದ್ರತೀರ್ಥರ ಚಾತುರ್ಮಾಸ್ಯದ ರ್ಭದಲ್ಲಿ ನಾಲ್ಕು ತಿಂಗಳು ಮಹಾಭಾರತವನ್ನು ಹರಿಕಥಾ ರೂಪವಾಗಿ ದರು. ಶ್ರೀಗಳವರು ಆತ್ಮಸಂತುಷ್ಟರಾಗಿ ಚಕ್ರಾಂಗನಗೈಸಿ, 'ಮೂಲ ರಾಯಣ' ಅಂಕಿತ ಪ್ರದಾನಗೈದು ಬಂಗಾರದ ಪದಕ ಹಾಗೂ 'ಕೀರ್ತನಾಗ್ರೇಸರ' ಬಿರುದನ್ನಿತ್ತು ಆಶೀರ್ವದಿಸಿದರು. ಹಾಗೆಯೇ ಗೋಕರ್ಣ ಪರ್ತಗಾಳಿ ಕ್ಷೇತ್ರಮ ಮಠದ ಶ್ರೀ ದ್ವಾರಕಾನಾಥ ಸ್ವಾಮಿಗಳವರೂ ಶ್ರೀಯುತರಿಗೆ ಬ್ರಹ್ಮ ತ್ರ. ಅಣುಭಾಷ್ಯಗಳ ಸಾರವನ್ನು ಪಾಠ ಪ್ರವಚನಗಳ ಮೂಲಕ ಅನುಗ್ರಹಿಸಿದರು. ತ ವಲ್ಲಿ ಕೀರ್ತನ ಮಹಾ ಸಮಾರಂಭದಲ್ಲಿ ಶಾಲು ಹೊದಿಸಿ 'ಕೀರ್ತನಾಚಾರ್ಯ' ಬಿರುದನ್ನು ಇತ್ತು ಆಶೀರ್ವದಿಸಿದರು.

ಹರಿಗುರುಗಳ, ಸಂತ ಮಹರ್ಷಿಗಳ ಅನುಗ್ರಹದಿಂದ ಶ್ರೀ ಅಚ್ಯುತ ಸರು ಕೀರ್ತನ ಪ್ರಪಂಚಕ್ಕೆ ಮಹತ್ಸೇವೆ ಸಲ್ಲಿಸಿದ್ದಾರೆ. ಕೀರ್ತನಾಭ್ಯಾಸಿಗಳಿಗೆ ಯುಕ್ತವಾದ 'ಹರಿಕಥಾ ಪೂರ್ವರಂಗ' 'ಗೀತಾರ್ಥ ಚಿಂತನೆ' ಮುಂತಾದ ತ್ರೇಯ ಗ್ರಂಥಗಳನ್ನು ರಚಿಸಿ ಮಹದುಪಕಾರ ಮಾಡಿದ್ದಾರೆ.

**ರ ಕೆಲವು ಕೃತಿಗಳು ಹೀಗಿವೆ :**

ಹರಿಕಥಾ ಪೂರ್ವರಂಗ

ಗೀತಾರ್ಥ ಚಿಂತನೆ

ಮನೋಬೋಧೆ
ಸಂತಗಾಥಾ
ಶ್ರೀ ಪುರಂದರ ಸಾಹಿತ್ಯ
ಭಜನ ಸಂಗ್ರಹ
ದಾಸಬೋಧೆ
ರಾಮಚರಿತ ಮಾನಸ (ಭಾಗ–1, ಭಾಗ–2)
ಶ್ರೀ ಸುಧೀಂದ್ರ ಸೂಕ್ತಿ
ಹರಿ ಗುರು ಭಜನೆಗಳು
ಪ್ರಾರ್ಥನಾ ಮಂಜರಿ
ದಾಸರ ಕೀರ್ತನೆಗಳು
ದ್ವಾದಶ ಸೂತ್ರ
ಸದಾಚಾರ ಸ್ಮೃತಿ
ತತ್ತ್ವ ಸಂವಾಳಿ.

ಸುಮಾರು ಅರವತ್ತಕ್ಕೂ ಸಂಖ್ಯೆಯಲ್ಲಿ ಮೀರಿದಷ್ಟು ಕೃತಿಗಳನ್ನು ಶ್ರೀ ಅಚ್ಯುತದಾಸರ ತಮ್ಮ ಲೇಖನಿ ಮೂಲಕ ಮೂಡಿಸಿದ್ದಾರೆ. 'ಹರಿಕಥಾಮೃತ ಸಿಂಧು' ಎಂಬ ಶಿರೋನಾಮೆಯ ಸುಮಾರು 3500 ಪುಟಗಳ ಬೃಹತ್ ಕೃತಿ ಹೊರಬರಲಿದೆ. ಅದರ ಮೊದಲ ಸಂಪುಟವಾಗಿ ಶ್ರೀ ರಾಮಾಯಣ ಕುರಿತ 'ಶ್ರೀರಾಮ ಕಥಾವಾಹಿನಿ' ಪ್ರಕಟ ವಾಗಿದೆ.

ಶ್ರೀ ಗುರುಗಳಿಂದ ದತ್ತವಾದ 'ಮೂಲ ನಾರಾಯಣ' ಅಂಕಿತದಲ್ಲಿ ಕನ್ನಡ ತುಳು, ಮರಾಠಿ, ಕೊಂಕಣಿಯಲ್ಲಿ ಸಹಸ್ರಾರು ಕೀರ್ತನೆ ರಚನೆ ಮಾಡಿ ಕೀರ್ತನ ಸಂಪ್ರದಾಯವನ್ನು ಮುಂದುವರಿಸಿದ್ದಾರೆ. ಕೀರ್ತನ ಶಿಕ್ಷಣ ಪದ್ಧತಿಯನ್ನು ನಡೆಸಿ ಸುಮಾರು ಐವತ್ತು ಕೀರ್ತನಕಾರರನ್ನು ಇವರು ತರಬೇತಿಗೊಳಿಸಿದ್ದಾರೆ. ಅನೇಕ ಕೀರ್ತನಕಾರರಿಗೆ ಮಾರ್ಗದರ್ಶಕ ಗುರುಗಳಾಗಿದ್ದಾರೆ. ಕರ್ನಾಟಕದಲ್ಲಿ ಇವರಿಂದ ಶಿಕ್ಷಣ ಸ್ಫೂರ್ತಿ ಹಾಗೂ ಮಾರ್ಗದರ್ಶನ ಪಡೆದ ಹರಿದಾಸರುಗಳು ಬರೆದ 'ಅರವತ್ತು ಹರಿಕತೆ'ಯ ಸಾಹಿತ್ಯ ಪ್ರಕಟವಾಗಿದೆ. ಪ್ರತಿ ವರುಷವೂ 'ಹರಿಕೀರ್ತನಾ ಸಪ್ತಾಹ' ವನ್ನು ನಡೆಸುತ್ತಾ ಬಂದಿದ್ದಾರೆ. ದಾಸಾಶ್ರಮದಿಂದ ಹೊರಡುವ 'ದಾಸವಾಣಿ' ಮಾಸಿಕದಲ್ಲಿ ಇವರು ಬರೆದಿರುವ ದಾಸಸಂದೇಶ ನೀತಿ ಕತೆಗಳು ಜನಪ್ರಿಯವಾಗಿವೆ. 'ದಾಸ ಜ್ಯೋತಿ' ಎನ್ನುವ ಆಂಗ್ಲ ಪತ್ರಿಕೆಯನ್ನೂ ಇವರು ಹೊರಡಿಸುತ್ತಿದ್ದಾರೆ. ತಮ್ಮ ಬಿಡುವಿಲ್ಲದ ಸಂಚಾರ ಮತ್ತು ಗೀತ ರಚನೆ ಇವುಗಳ ಮಧ್ಯದಲ್ಲಿ ಪ್ರಮುಖ ಪತ್ರಿಕೆಗಳಿಗೆ ಉತ್ತಮ ಲೇಖನಗಳನ್ನು ಒದಗಿಸುತ್ತಿದ್ದಾರೆ.

ಇವರು ರಚಿಸಿದ ಅಕ್ಕಮಹಾದೇವಿಯ ದಿವ್ಯ ಕೀರ್ತನ ಕಥಾ ಉಪದೇಶ
ಳನ್ನು ಕೇಂದ್ರ ಸರಕಾರದ ಅಕಾಡೆಮಿ ಧ್ವನಿ ಮುದ್ರಣಗೈದು ತನ್ನ ಸಂಗ್ರಹದಲ್ಲಿ ಇರಿಸಿ
ಂಡಿದೆ. ಅನೇಕಾನೇಕ ಧಾರ್ಮಿಕ, ಸಾಂಸ್ಕೃತಿಕ ಸಂಸ್ಥೆಗಳಿಂದ ಸನ್ಮಾನಿತರಾದ
ವರಿಗೆ ರಾಜ್ಯ ಪ್ರಶಸ್ತಿ, ಸಂಗೀತ ನೃತ್ಯ ಅಕಾಡೆಮಿ ಪ್ರಶಸ್ತಿಗಳೂ ದೊರಕಿವೆ.
ನ್ನಡ, ಇಂಗ್ಲೀಷ್, ಹಿಂದಿ ಮತ್ತು ಮರಾಠಿಯ ವಿಖ್ಯಾತ ಪತ್ರಿಕೆಗಳು ಈ ವಿಭೂತಿ
ರುಷರ ಒಂದು ಸಂವತ್ಸರ ಚಕ್ರದ ಸಾಧನೆಯನ್ನು ಮಹಾನ್ ಕಲೆ ಹಾಗೂ ಸರಳ
ೀವನದ ಆದರ್ಶಗಳ ಬಗೆಗೂ ಲೇಖನಗಳನ್ನು ಬರೆದು ಪ್ರಕಟಿಸಿವೆ.

ಹರಿಕಥೆ ಅಥವಾ ಕೀರ್ತನಗಳ ಪ್ರೌಢ ಶಿಕ್ಷಣ, ಕೀರ್ತನ ಗ್ರಂಥಾಲಯ,
ಶೋಧನಾಲಯ, ಕೀರ್ತನ ಭವನದ ನಿರ್ಮಾಣ-ಹೀಗೆ ಅನೇಕ ಯೋಜನೆಗಳನ್ನು
ದಾಸರು ಹಮ್ಮಿಕೊಂಡಿದ್ದಾರೆ. ಅಂತೆಯೇ ಬೆಂಗಳೂರು-ಪೂನಾ ಹೆದ್ದಾರಿಯ
ಲಮಂಗಲದ ಬಳಿ ವಿಶ್ವಶಾಂತಿ ಆಶ್ರಮವನ್ನು ಸ್ಥಾಪಿಸಿ ಅಲ್ಲಿ ವಿಜಯ ವಿಠಲ
ರ್ತಿಯನ್ನು ಪ್ರತಿಷ್ಠಾಪಿಸಿದ್ದಾರೆ. ಇದೊಂದು ಪುಣ್ಯಕ್ಷೇತ್ರವೇ ಆಗಿ ಮಾರ್ಪ
ರುವುದು ಒಂದು ಸೋಜಿಗದ ಸಂಗತಿ! ಜೀವನದ ಜಂಜಾಟದಿಂದ ದೂರಾಗಿ ಇಲ್ಲಿಗೆ
ದವರು ಮನಶ್ಶಾಂತಿಯನ್ನು ಪಡೆದುಕೊಳ್ಳಬಲ್ಲರು. ಇಂತಹ ಶಾಂತಿಧಾಮ,
ಣ್ಯಧಾಮ, ಪವಿತ್ರ ಪ್ರಶಾಂತ ಪ್ರದೇಶದ ಆಯ್ಕೆ, ವಿಶ್ವಮೂರ್ತಿಯ ಪ್ರತಿಷ್ಠಾಪನೆ,
ಶ್ರಮದ ಅವಿಶ್ರಾಂತ ಧಾರ್ಮಿಕ, ಆಮುಷ್ಮಿಕ ಚಟುವಟಿಕೆಗಳು ಮೊದಲು
ೂಡಿದ್ದು ಶ್ರೀ ಭದ್ರಗಿರಿ ಅಚ್ಯುತದಾಸರ ಪ್ರಾಂಜಲ ಮನೋಪಟಲದಲ್ಲಿ. ಅವರು
ಂದು ಚಿಂತಿಸಿದ ಯೋಜನೆ, ಕಂಡ ಕನಸು ಇಂದು ಭವ್ಯತಾರೂಪ ಆಶ್ರಮವೆನಿಸಿ
ಗೊಳಿಸುತ್ತಿದೆ.

—0—

# ಡಾ॥ ತೋನ್ಸೆ ಮಾಧವ ಪೈ (ಟಿ. ಎಂ. ಎ. ಪೈ)

"ಶ್ರೀ ಪೈಯವರ ಸಾಧನೆಯ ಬಗ್ಗೆ ಬರೆಯಲು ಲೇಖನಿ ಸೋಲುತ್ತದೆ. ಕಲ್ಲುಗಳಿಗೆ ಮಾತು ಬರುವಂತಿದ್ದರೆ ಮಣಿಪಾಲದ ಹಿಂದಿನ ಕತೆಯನ್ನು ಒಂದೊಂದು ಕಲ್ಲೂ ಸಾರಿ ಹೇಳುತ್ತಿದ್ದವು"-ಎಂದಿರುವವರು ಶ್ರೀಮತಿ ನಿರ್ಮಲಾ ಪೈ. ಕಲ್ಲು ಮೌನ ನಿಜ. ಆದರೆ ಇಂದು ಮಣಿಪಾಲದ ಪ್ರತಿಯೊಂದು ಭವ್ಯ ಕಟ್ಟಡವೂ ಅಗಲಿದ ಈ ಬಂಧುವಿಗೆ ಚಿರಮೌನ ಕೋರುತ್ತಿದೆ.

ನಲವತ್ತು ವರುಷಗಳ ಹಿಂದೆ ಬೋಳು ಗುಡ್ಡ, ಕಾಡು ಮೃಗಗಳಿಂದ ತುಂಬಿದ್ದ ಕುಂಡಾಲ ಕಾಡು.ಮನುಷ್ಯರು ಒಳಗೆ ಹೋಗಲೇ ಹೆದರುತ್ತಿದ್ದ ಮಣಿಪಾಲ ಇಂದು ನಾಗರಿಕ ನಾಡು. ಅದನ್ನು ಬೀಡಾಗಿ ಪರಿವರ್ತಿಸಿದ ಮಹಿಮರೇ ಡಾ॥ ಪೈ ಅವರು. ಸಾಧನೆ-ಸ್ವಾವಲಂಬನೆ-ಸ್ವಪ್ರಯತ್ನಗಳ ಗಣಿ ಇವರು. ಮಣಿಪಾಲವನ್ನು ಮಾರ್ಪಡಿಸಿದ ಚತುರ ಶಿಲ್ಪಿ. ಮಣಿಪಾಲವೆಂಬ ಸುಂದರ ನಗರದಲ್ಲಿ ಸುವ್ಯವಸ್ಥಿತ ಸಂಸ್ಥೆಗಳು ಇಂದು ಎದ್ದು ಕಾಣುತ್ತಿವೆ. ಜನ ಸಮುದಾಯಕ್ಕೆ ಡಾ॥ ಪೈ ಸಲ್ಲಿಸಿದ ಅತ್ಯುನ್ನತ ಸೇವೆ. ಇವುಗಳ ಹಿಂದಿನ ಪ್ರೇರಕ ಶಕ್ತಿಯೇ ಡಾ॥ ಪೈ. ಸಫಲ ಜೀವನದ ಸಾರ್ಥಕ ಸೇವೆಗೆ ಮತ್ತೊಂದು ಹೆಸರು-ಎಂದು ಬಲ್ಲವರು ಡಾ॥ ಪೈಯವರನ್ನು ಕೊಂಡಾಡಿದ್ದಾರೆ.

ಪೈಯವರನ್ನು ಬಲ್ಲ ಡಾ॥ ಪಾಟೀಲ ಪುಟ್ಟಪ್ಪ ಅವರು—"ಮಾಧವ ಪೈಗಳು ಒಂದು ಚಲಿಸುವ ವಿದ್ಯಾಲಯ. ಮಣಿಪಾಲದ ಮಾಂತ್ರಿಕರವರು. ಪೈಗಳನ್ನು ಬಹುಶ್ರುತತ್ವ. ಅವರ ಆಸಕ್ತಿಯ ಹರಹು ಬಹು ದೊಡ್ಡದು. ಅದು ಮುಟ್ಟದ ಗಿದ ಇಲ್ಲವೆಂದು ಹೇಳುತ್ತಾರೆ. ಅದು ಇದ್ದರೂ ಇರಬಹುದು. ಆದರೆ ಅವರು ಆಸಕ್ತಿವಹಿಸದ ಕ್ಷೇತ್ರ ಯಾವುದೂ ಇರಲಿಲ್ಲ. ಅವರೊಂದಿಗೆ ಸಮಯ ಕಳೆಯುವುದೇ ಬಹು ದೊಡ್ಡ ಉದಾರವಾದೀ ಶಿಕ್ಷಣವೆನಿಸಿದ್ದಿತು. ಅವರೊಬ್ಬ ಅತ್ಯಾಧುನಿಕ ಗಣಕ ಯಂತ್ರ" ಎಂದು ಮನದುಂಬಿ ಬಣ್ಣಿಸಿದ್ದಾರೆ. ಅಪಾತ್ರ ದಾನ ಕೊಡುವ ಪದ್ಧತಿ ಪಾಟೀಲ ಪುಟ್ಟಪ್ಪನವರಲ್ಲಿಲ್ಲ. ಅರ್ಹನಿಗೆ ಅವರು ನೀಡಿದ ಮಾತಿನ ಪುರಸ್ಕಾರ ಇದು. ಎರಡಿಲ್ಲದ ಮಾತು. "ಹರುಷ ಮಣಿ ಡಾ॥ ಪೈ. ಅವರು ಕೈ ಇಟ್ಟಲ್ಲಿ ಚಿನ್ನ" ಎಂದು ವಿ.ವಿ. ಗಿರಿಯವರು ಡಾ॥ ಪೈ ಅವರ ಹಿರಿಮೆಯನ್ನು ಎತ್ತಿ ಕೊಂಡಾಡಿದ್ದಾರೆ.

ಮಾಧವನ ಮೊದಲ ಇಚ್ಛೆ. ಡಾಕ್ಟರಿಕೆ ಓದಲು ಪ್ರೇರೇಪಿಸಿದ ಎರಡು ಘಟನೆಗಳ ಇದಕ್ಕೆ ಇಂಬುಕೊಟ್ಟವು. ಆಗ ಮಾಧವನಿಗಿನ್ನೂ ಹದಿಮೂರರ ವಯಸ್ಸು. ಹಲ್ಲು ನೋವಿನಿಂದ ನರಳುತ್ತಿದ್ದ ಬಾಲಕ ಉಡುಪಿ ಸರಕಾರಿ ಆಸ್ಪತ್ರೆಗೆ ಹೋದ ಚಿಕಿತ್ಸೆಗೆ. ಅಲ್ಲಿನ ವೈದ್ಯರು ಅರಿವಳಿಕೆಯ ಚುಚ್ಚುಮದ್ದು ನೀಡದೆ ನೇರವಾಗಿ ಹಲ್ಲನ್ನು ಕಿತ್ತೇ ಬಿಟ್ಟರು. ನೋವಿನಿಂದ ಮೂರ್ಛೆ ಹೋಗುವಂತಾಯಿತು ಬಾಲಕನಿಗೆ. ಅಂದೇ ನಿರ್ಧರಿಸಿದ: ನೋವಿಲ್ಲದೆ ಹಲ್ಲು ಕೀಳಬೇಕು: ಅದಕ್ಕೊಂದು ದಾರಿ ಹುಡುಕಲೇ ಬೇಕು ಎಂದು.

ಆಗ ಮಾಧವನಿನ್ನೂ ಮಾಧ್ಯಮಿಕ ಶಾಲಾ ವಿದ್ಯಾರ್ಥಿ. ಈತನ ಶಾಲ ಕೊಠಡಿಯಿಂದ ಸರಕಾರಿ ಆಸ್ಪತ್ರೆಯ ಶವಾಗಾರ ಚೆನ್ನಾಗಿ ಕಾಣಿಸುತ್ತಿತ್ತು. ಶವ ಪರೀಕ್ಷೆಗೆ ಬರುವ ಮೃತ ಶರೀರಗಳು ಬಾಲಕನಲ್ಲಿ ಕುತೂಹಲ ಹುಟ್ಟಿಸಿದವು. ಅಕಾಲ ಮರಣವನ್ನು ತಪ್ಪಿಸಲು ಸಾಧ್ಯವಿಲ್ಲವೆ ? ಉತ್ತಮ ವೈದ್ಯಕೀಯ ಸೌಲಭ್ಯ ದೊರಕ ದಲ್ಲಿ ಈ ಶಾಪದಿಂದ ಬಿಡುಗಡೆ ಹೊಂದಬಹುದೇ ಎಂದಿತು ಆತನ ಮನಸ್ಸು !

ಸೈಂಟ್ ಅಲೋಶಿಯಸ್ ಕಾಲೇಜಿನಲ್ಲಿ ಸ್ಕಾಲರ್‌ಶಿಪ್‌ನಲ್ಲಿ ಎರಡು ವರ್ಷ ಕಲಿತು, ಮುಂದೆ ಮದರಾಸು ವಿಶ್ವವಿದ್ಯಾಲಯದಲ್ಲಿ ಮಾಧವ ಡಾಕ್ಟರಿಕೆ ಓದಲು ಸೇರಿಯೇ ಬಿಟ್ಟ. ಮೊದಲ ವರ್ಷದ ವಿದ್ಯಾರ್ಥಿಯಾಗಿದ್ದಾಗಲೇ ಕಾಮಾಕ್ಷಿ ಯೊಂದಿಗೆ ವಿವಾಹವೂ ಆಯಿತು. ಹಿರಿಯರು ನೋಡಿ ಒಪ್ಪಿ, ಮೆಚ್ಚಿದ ಕಾಮಾಕ್ಷಿ ಯನ್ನು ಮಾಧವ ಮದುವೆಯಾದ ! ಅನಕ್ಷರಸ್ಥೆ ಕಾಮಾಕ್ಷಿಗೆ 'ಓ' ನಾಮದಿಂದ ಓದು ಕಲಿಸಿ 'ಶಾರದೆ'ಯನ್ನಾಗಿಸಿದ. 1925ರಲ್ಲಿ ಎಂ. ಬಿ. ಬಿ.ಎಸ್. ಮುಗಿಸಿ ಡಾಕ್ಟರ್ ಎನಿಸಿಕೊಂಡರು ಮಾಧವ ಪೈ. ವಿದೇಶಕ್ಕೆ ಹೋಗಿ ಅಲ್ಲಿಯೇ ನೆಲೆಸಿ ವೃತ್ತಿ ಜೀವನ ಮುಂದುವರಿಸುವುದು ಡಾ॥ ಪೈಯವರ ಅಭೀಷ್ಟ. ಈ ಬಗ್ಗೆ ತಾಯಿಯಲ್ಲಿ ಹೇಳಲು ಆಕೆ– ಇದ್ದಲ್ಲಿ ಹುಡುಕಬೇಕು. ಇದ್ದಲ್ಲಿ ದುಡಿಯಬೇಕು. ಮಾತೃಭೂಮಿಗೆ ನಿನ್ನ ಸೇವೆ ಮುಡಿಪಾಗಿರಲಿ. ನಿನ್ನ ಹಿರಿತನವನ್ನು ಕಣ್ಣಾರೆ ನಾನು ಕಾಣಬೇಕು. ನಾನು ಬದುಕಿರುವಾಗಲೇ ನನ್ನ ಇಚ್ಛೆಗಳನ್ನು ಪೂರೈಸಿ ನನಗೆ ತಕ್ಕ ಮಗನಾಗು ವಿದ್ಯಾಭ್ಯಾಸಕ್ಕೆ ಜೀವನದಲ್ಲಿ ಅಮೂಲ್ಯ ಸ್ಥಾನವಿದೆ. ಬೆಲೆಕಟ್ಟಲಾಗದಷ್ಟುಪೂರ್ವವದು ಜೀವನದಲ್ಲಿ ಒಳ್ಳೆಯ ನಡತೆಯನ್ನು ಅಳವಡಿಸಿಕೊಂಡು ನಿನ್ನ ಜ್ಞಾನವನ್ನು ಹೆಚ್ಚಿಸಿಕೊ ಈ ಜ್ಞಾನವೆಂಬ ಜ್ಯೋತಿಯಿಂದಲೇ ನೀನು ಸಮಾಜವೆಂಬ ಹಣತೆಯನ್ನು ಬೆಳ ಬಹುದು. ವಿದೇಶಕ್ಕೆ ಹೊರಟು ನಿಂತ ಮಗನನ್ನು ತಡೆದು ನಿಲ್ಲಿಸಿದ ಆ ಮಾತ ಮಾತೃಭೂಮಿಗೆ ಡಾ॥ ಪೈಗಳಿಂದಾಗುವ ಸೇವೆಗಳಿಗೆ ಭದ್ರಬುನಾದಿ ಹಾಕಿದಳು. ವಿಧೇಯ ಮಗನು ತಾಯಿಗೆ ಎದುರು ನಿಂತು ನುಡಿಯಲಿಲ್ಲ. ತಾಯಿಯ ಆಸೆಯನ್ನು

ನೂರಕ್ಕೆ ನೂರು ಪಾಲು ಸತ್ಯವಾಗಿಸಿ ಧನ್ಯ ಪುತ್ರರೆನಿಸಿಕೊಂಡರು. ವಾಮನ ತ್ರಿವಿಕ್ರಮನಂತೆ ತಾಯಿಯ ಕಣ್ಣ ಮುಂದೆಯೇ ಬೆಳೆದರು.

ಮಾಧವ ಪೈ ಹಾಗೂ ಅವರ ಮೂವರು ಸಹೋದರರು ಉತ್ತಮ ತಂಡವಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಹಿರಿಯ ಸಹೋದರ ಪುರುಷೋತ್ತಮ ಒಬ್ಬ ಅರ್ಥ ಮುಂದಾಳು, ವಿಚಾರವಾದಿ. ದ್ವಿತೀಯ ಸಹೋದರ ಉಪೇಂದ್ರ ಚತುರ ರಾಜಕಾರಣಿ. ಮಾಧವ ಪೈ ಒಬ್ಬ ವೈದ್ಯ ಮಾತ್ರವಲ್ಲ ವಿದ್ವತ್ಪೂರ್ಣ ಶಿಕ್ಷಣ ತಜ್ಞರು. ಇಡೀ ಕುಟುಂಬದ ಹಿಂದಿನ ಶಕ್ತಿ ಕೊನೆಯ ಸಹೋದರ ರಘುನಾಥ. ವ್ಯಾಪಾರ ವಹಿವಾಟಿನಲ್ಲಿ ಸರಿಗಟ್ಟುವವರು ಯಾರೂ ಇಲ್ಲದ ಭಲೇ ವ್ಯವಹಾರಸ್ಥರು. ಈ ನಾಲ್ವರು ಸಹೋದರರು ತಮ್ಮ ಸಾಮೂಹಿಕ ಯತ್ನದಿಂದ ಅದ್ಭುತವನ್ನೇ ಸಾಧಿಸಿದರು. ಯಾರೂ ಊಹಿಸಲಾಗದ್ದನ್ನು ಕಣ್ಣಳತೆಗೂ ಮೀರಿದ ಕನಸಿನ ವಿದ್ಯಾನಗರಿಯನ್ನೇ ಸೃಷ್ಟಿಮಾಡಿದರು ; ಸಾಮಾಜಿಕ ಕ್ರಾಂತಿಯನ್ನೇ ನಡೆಸಿದರು.

1934ರಲ್ಲಿ ಹನ್ನೆರಡು ಹಾಸಿಗೆಗಳ ಕ್ಷಯರೋಗದ ಆಸ್ಪತ್ರೆಯನ್ನು ಡಾ॥ ಮಾಧವ ಪೈಗಳು ಮೊತ್ತಮೊದಲು ಮಣಿಪಾಲದಲ್ಲಿ ಪ್ರಾರಂಭಿಸಿದರು. ಅದು ಅಷ್ಟೊಂದು ಯಶಸ್ಸನ್ನು ಪಡೆಯಲಿಲ್ಲ. ಈ ಕಟ್ಟಡವು ಮುಂದೆ ಆಸ್ಪತ್ರೆಯಿಂದ ವಾಚನಾಲಯ, ವಿದ್ಯಾಕೇಂದ್ರ ಹೀಗೆ ಹಲವು ಬಾರಿ ರೂಪಾಂತರಗೊಂಡು ಕೊನೆಗೆ ಪೆಥೋಲಜಿ ಬ್ಲಾಕ್ ಆಗಿ ಇಂದಿಗೂ ಉಳಿದುಕೊಂಡಿದೆ. 1945ರಲ್ಲಿ ಡಾ॥ ಪೈಯವರೇ ಪ್ರಾರಂಭಿಸಿದ ಬ್ಯಾಂಕ್, ವ್ಯವಹಾರದ ದೃಷ್ಟಿಯಿಂದ ಉನ್ನತಿ ಹೊಂದುತ್ತಾ ಬಂತು. ಇವರಿಗೆ ವೈದ್ಯಕೀಯದಲ್ಲಿ ಆಸಕ್ತಿಯೂ ಕುಂದುತ್ತಾ ಬಂದಿತ್ತು. ಅಂತೂ 1949ರಲ್ಲಿ ಇವರು ವೈದ್ಯ ವೃತ್ತಿಯನ್ನು ಸಂಪೂರ್ಣವಾಗಿ ನಿಲ್ಲಿಸಲು ತೀರ್ಮಾನಿಸಿದರು. ತಮ್ಮ ದವಾಖಾನೆ ಹಾಗೂ ಅದಕ್ಕೆ ಸಂಬಂಧಿಸಿದ ಸಮಸ್ತ ಆಸ್ತಿಗಳನ್ನು ಡಾ॥ ಮೋಹನ್‌ದಾಸ್ ಪೈ ಅವರ ವಶಕ್ಕೆ ನೀಡಿ ಡಾ॥ ಮಾಧವ ಪೈ ವೃತ್ತಿಯಿಂದ ಮುಕ್ತರಾದರು ; ಪ್ರವೃತ್ತಿಯಿಂದಲ್ಲ. ಹೀಗೆ ತಮ್ಮ ಇಪ್ಪತ್ತೈದು ವರುಷಗಳ ಡಾಕ್ಟರಿಕೆಗೆ ಹಂಸಗೀತೆ ಹಾಡಿದರು. ಸಮಾಜಸೇವೆಯ ಒಂದು ಅಧ್ಯಾಯವನ್ನು ಮುಗಿಸಿದರು. "ಅಗಣಿತ ರೋಗಿಗಳಿಗೆ ಚಿಕಿತ್ಸೆ ನೀಡಿದ್ದೇನೆ. ಇನ್ನೀಗ [illegible] ಡಾಕ್ಟರುಗಳನ್ನು ಹುಟ್ಟುಹಾಕುತ್ತೇನೆ. ವಿದ್ಯಾ ಶಾಲೆಗಳನ್ನು ಪ್ರಾರಂಭಿಸುತ್ತೇನೆ"- ಎಂದು ಪೈ ಸನ್ನದ್ಧರಾದರು.

**ವೈದ್ಯಕೀಯ ಕಾಲೇಜು :**

ಡಾ॥ ಪೈಗಳ ಜೀವನದ ಸಾಧನೆಗಳಲ್ಲಿ ಅತ್ಯಂತ [illegible] ವೈದ್ಯಕೀಯ ಕಾಲೇಜುಗಳ ಸ್ಥಾಪನೆಗೆ ತಮ್ಮ ಸ್ವಂತ ಸಂಪಾದನೆಯಾಗಿದ್ದ ಹತ್ತುಸಾವಿರಕ್ಕೂ

ಮಿಗಿಲು ಹಣ ಮತ್ತು ತಮ್ಮ ಸ್ವಂತದ ಸೈಟನ್ನು ಕೃಷ್ಣಾರ್ಪಣ ಮಾಡಿದ್ದು. 1934ರಲ್ಲಿ ಆರು ಸಾವಿರ ಎಕರೆಯಷ್ಟು ವಿಸ್ತೀರ್ಣದ ಪ್ರದೇಶವನ್ನು ಸರಕಾರ ಪಬ್ಲಿಕ್ ಪ್ರೊಜೆಕ್ಟ್ ಅಭಿವೃದ್ಧಿಗಾಗಿ ಕಾದಿರಿಸಿತ್ತು. ಅದರ ಆರುನೂರು ಎಕರೆ ಪ್ರದೇಶವನ್ನು ವೈದ್ಯಕೀಯ ಕಾಲೇಜು ಸ್ಥಾಪನೆಗಾಗಿ ಉಪಯೋಗಿಸಬೇಕೆಂಬುದು ಪೈಯವರ ವಿನಮ್ರ ಬೇಡಿಕೆ. ಆ ಕಾಲಕ್ಕಾಗಲೇ ಸರ್ವವಿಧದಲ್ಲೂ ಮದರಾಸು ವಿಶ್ವವಿದ್ಯಾನಿಲಯವು ಶ್ರೇಷ್ಠತಮವೆಂದು ಪರಿಗಣಿಸಲ್ಪಟ್ಟಿದ್ದು. ಹೊಸ ವೈದ್ಯಕೀಯ ಕಾಲೇಜುಗಳ ಸ್ಥಾಪನೆಗೆ ಅದರ ಅನುಮತಿ ಅವಶ್ಯಕವಾಗಿತ್ತು. ಮಣಿಪಾಲ ಗುಡ್ಡದಲ್ಲಿ ಅದೂ ಆಸ್ಪತ್ರೆಯೇ ಇಲ್ಲದ ಕಡೆ ಕಾಲೇಜು ಕಟ್ಟುವ ಪೈಯವರ ನಿರ್ಧಾರ ಅವರಿಗೆ ಹಾಸ್ಯಾಸ್ಪದ ವಿಚಾರವಾಗಿತ್ತು. ಈ ಮನುಷ್ಯನೆಲ್ಲೋ ಹುಚ್ಚನಿರಬೇಕು ಎಂದೂ ಉದ್ಗರಿಸಿದವರು ಹಲವರು. "ಮಣಿಪಾಲದಂತಹ ಗ್ರಾಮೀಣ ಪ್ರದೇಶದಲ್ಲಿ ಒಂದು ವೈದ್ಯಕೀಯ ಕಾಲೇಜು ಪ್ರಾರಂಭಿಸುವುದು ಅನುಮಾನಾಸ್ಪದ ವಿಚಾರ. ಕಾಲೇಜನ್ನು ಕಟ್ಟುಹಾಕಿದವನ ಮೃತ ಶರೀರವನ್ನೇ ಮುಂದೆ ಶವಪರೀಕ್ಷೆಗೆ ಕೊಡಬೇಕಾಗಬಹುದು." ಎಲುಬಿಲ್ಲದ ನಾಲಿಗೆ ಹರಿದ ಹಾದಿ ಇದು. ಪ್ರಿ-ಕ್ಲಿನಿಕಲ್ ಮತ್ತು ಕ್ಲಿನಿಕಲ್, ಮಂಗಳೂರು-ಮಣಿಪಾಲದ 36 ಮೈಲುಗಳ ಅಂತರದಲ್ಲಿ ಸ್ಥಾಪಿಸಲು ವಿರೋಧಿಗಳ ಸುರಿಮಳೆಯೇ ಮೊದಲು. ತಮ್ಮ ಯೋಜನೆಯ ಬಗ್ಗೆ ಅಚಲ ವಿಶ್ವಾಸವಿದ್ದ ಪೈಗಳು ಪ್ರವಾಹದ ವಿರುದ್ಧ ದಿಕ್ಕಿನಲ್ಲಿ ತಮ್ಮ ಈಜನ್ನು ಮುಂದುವರಿಸಿದರು.

ಅವರ ಮನಸ್ಸ್ಥೈರ್ಯವನ್ನು ಇನ್ನಷ್ಟು ದೃಢಪಡಿಸಿದ ಒಂದು ಘಟನೆಯೂ ಇದಕ್ಕೆ ಪುಷ್ಟಿಯನ್ನು ಕೊಟ್ಟಿತು. ಡಾ|| ಪೈ ಅವರ ತೃತೀಯ ಪುತ್ರ ಪಾಂಡುರಂಗ ನೆಫ್ರೈಟಿಸ್ ರೋಗಕ್ಕೆ ತುತ್ತಾದ. ಒಂಬತ್ತು ವರುಷದ ಈ ಬಾಲಕನಿಗೆ ಮುಂಬಯಿಯ ವೈದ್ಯರಿಂದ ಚಿಕಿತ್ಸೆ ನೀಡಲಾಯಿತು. ಅವರೂ ಹೆಚ್ಚೆಂದರೆ ಎರಡು ವರ್ಷ ಕಾಲ ಬದುಕಬಲ್ಲ ಎಂದ ಅವರ ನುಡಿಯನ್ನು ಡಾ|| ಪೈ ಸುಳ್ಳಾಗಿಸಿದರು. ಹೌದು. ಇದಕ್ಕೊಂದೇ ದಾರಿ. ಮಣಿಪಾಲದಲ್ಲೂ ಸುಸಜ್ಜಿತ ವೈದ್ಯಕೀಯ ಕಾಲೇಜು ತೆರೆಯಲೇ ಬೇಕು. ಇಲ್ಲಿನ ರೋಗಿಗಳು ಮುಂಬೈಗೆ ಚಿಕಿತ್ಸೆಗೆ ಓಡುವಂತಾಗಬಾರದು. ಡಾ|| ಪೈಯವರು ದೃಢ ನಿರ್ಧಾರಕ್ಕೆ ಬಂದೇ ಬಿಟ್ಟರು.

ಕಾಲೇಜು ಸ್ಥಾಪನೆಗೆ ಡಾ|| ಪೈಗಳು ಆರೋಗ್ಯ, ವಿದ್ಯಾಭ್ಯಾಸ, ವಿತ್ತ ಮಂತ್ರಿಗಳನ್ನು ಒಪ್ಪಿಸಿದ ರೀತಿಯೇ ಬೇರೆ. "ಒಂದು ನಯಾ ಪೈಸೆ ಖರ್ಚಿಲ್ಲದೆ ಸೈಟು ಸಿಕ್ಕಿದೆ. ವಿದೇಶಿ ವಿದ್ಯಾರ್ಥಿಗಳಿಂದ ಬೇಕಾದಷ್ಟು ವಿದೇಶಿ ವಿನಿಮಯ ಡಾಲರ್ ರೂಪದಲ್ಲಿ ಸಿಗಲಿದೆ. ಹಾಗಿರುವಾಗ ಮಂಗಳೂರು–ಮಣಿಪಾಲದ ಅಂತರ ಲಂಡನ್ ಆಸ್ಪತ್ರೆಯಿಂದ-ಕೇಂಬ್ರಿಡ್ಜ್ ಕ್ಲಿನಿಕಲ್‌ನಷ್ಟು ಕೂಡಾ ದೂರವಿಲ್ಲ." ಈ ಮಾತಿಗೆ ಎರಡುಂಟೇ ?

ವೈದ್ಯಕೀಯ ಕಾಲೇಜು ಸ್ಥಾಪಿಸುವಾಗ ಇದ್ದ ಅಡಚಣೆಗಳ ಬಗ್ಗೆ ಪ್ರಸ್ತಾಪಿಸಿದಾಗ, ತಮ್ಮ ಮನಕಲಕಿದ ಘಟನೆಯನ್ನು ಅವರು ಹೇಳಿದ್ದುಂಟು. ಗುಂಟೂರು ಮೆಡಿಕಲ್ ಕಾಲೇಜಿನ ಪ್ರಿನ್ಸಿಪಾಲರೊಬ್ಬರು ಡಾ॥ ಪೈಗಳ ಸ್ನೇಹಿತರು. ಅವರು ತಮ್ಮ ಕಾಲೇಜಿನ ಸಮಾರಂಭ ಒಂದರಲ್ಲಿ ಡಾ॥ ಪೈಗಳಿಗೆ ಮಾತನಾಡಲು ಅವಕಾಶ ನೀಡಿದರು. ಮಣಿಪಾಲದಲ್ಲಿ ತಾನು ಕಾಲೇಜು ಸ್ಥಾಪಿಸುವುದರ ಬಗ್ಗೆ ಡಾ॥ ಪೈಗಳು ತಮ್ಮ ಭಾಷಣದಲ್ಲಿ ಹೇಳಿದಾಗ ವಿದ್ಯಾರ್ಥಿಗಳ ಪ್ರತಿಕ್ರಿಯೆ ಅಪಹಾಸ್ಯ. 'ಮದ್ರಾಸ್ ಮೈಲ್' ಪತ್ರಿಕೆ ಪೈಯವರ ಭಾಷಣದ ಬಗ್ಗೆ ಮರುದಿನವೇ ಲೇಖನ ಹೊರಡಿಸಿತ್ತು. ಒಂದು ವಾರದ ಕಾಲಾವಕಾಶದಲ್ಲಿ ಸುಮಾರು ಎಂಟು ಸಾವಿರಕ್ಕೂ ಮಿಕ್ಕ ಅರ್ಜಿಗಳು ಭಾರತದ ಎಲ್ಲೆಡೆಯಿಂದ ಪೈಗಳನ್ನು ಹುಡುಕಿ ಬಂದಿದ್ದವು. ಸೀಟು ಸಿಗದ ತಮ್ಮ ಅಳಲನ್ನು ತೋಡಿಕೊಂಡ ವಿದ್ಯಾರ್ಥಿಗಳ ಆ ನೋವು ಪೈಗಳಿಗೆ ಮೆಡಿಕಲ್ ಕಾಲೇಜು ಸ್ಥಾಪನೆಯ ಪ್ರಯತ್ನ ಮುಂದುವರಿಸಲು ಉತ್ತೇಜಕವಾಯಿತು.

ಅಂತೂ 1957 ರಲ್ಲಿ ಭಾರತದ ಮೂವತ್ತು ಮೂರನೆಯ ವೈದ್ಯಕೀಯ ಕಾಲೇಜ್ ಆಗಿ- ಕಸ್ತೂರಬಾ ಮೆಡಿಕಲ್ ಕಾಲೇಜು ಜನ್ಮ ತಾಳಿತು. 'ನಾ ಬಂದೆ ನಾ ನೋಡಿದೆ ನಾ ಗೆದ್ದೆ" ಎಂದವರು ಆಗಿನ ಆರ್ಥಿಕ ಮಂತ್ರಿ ಶ್ರೀ ಸಿ. ಸುಬ್ರಮಣ್ಯಂ.

1958ರಲ್ಲಿ ಖ್ಯಾತ ಪತ್ರಕರ್ತ ಎಂ. ವಿ. ಕಾಮತ್ ಅವರ ಮೂಲಕ ಡಾ॥ ಪೈಯವರ ವೈದ್ಯಕೀಯ ಸಾಧನೆಯ ಬಗ್ಗೆ ತಿಳಿದುಕೊಂಡ ಹೇರ್ರಿಪ್ಲಿನ್ಸರ್ ಎನ್ನುವ ಅಮೇರಿಕನ್ ವಾಸಿ ಒಬ್ಬ ಹತ್ತು ಸಾವಿರಕ್ಕೂ ಅಧಿಕ ಪುಸ್ತಕಗಳನ್ನು ಕಾಲೇಜು ಗ್ರಂಥಾಲಯಕ್ಕೆ ಕಳುಹಿಸಿಕೊಟ್ಟರು. ಮತ್ತೊಬ್ಬ ಅಮೇರಿಕನ್ ಮಹಿಳೆ ಕೆ.ಎಂ.ಸಿ.ಯ ಬಗ್ಗೆ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದು ಪುಸ್ತಕಗಳ ರಾಶಿಯನ್ನೇ ಸಂಗ್ರಹಿಸಿ ಮಣಿಪಾಲಕ್ಕೆ ನೀಡಿದರು. ಕಂಡು ಕಾಣದ ಈ ಜನರ ಮೂಕ ಸ್ನೇಹ ಪೈಗಳ ಸಾಧನೆಗೆ ಸಂಜೀವಿನಿ ಎನಿಸಿತ್ತು.

**ಸಮಾಜ ಸೇವೆ:**

ಡಾ॥ ಪೈಯವರದ್ದು ಎಂದೂ ಅಲ್ಪತೃಪ್ತ ಜೀವನವಲ್ಲ, ತನ್ನ ಸುತ್ತಲಿನ ಪ್ರಪಂಚಕ್ಕೆ ತನ್ನಿಂದಾದ ಕಾಣಿಕೆ ನೀಡಬೇಕೆಂದು ಕಣ್ತೆರೆದು ನೋಡಿತು. ಈ ನಿಸ್ವಾರ್ಥ ಜೀವ ಕಾರ್ಮಿಕರು, ಮೀನುಗಾರರು, ನೇಯ್ಗೆಯವರು- ಇವರ ಉಳಿತಾಯ ಭವಿಷ್ಯದ ಬಗ್ಗೆ ಚಿಂತಿಸಿ 1925ರಲ್ಲಿ ಕೆನರಾ ಇಂಡಸ್ಟ್ರಿಯಲ್ ಮತ್ತು ಬ್ಯಾಂಕಿಂಗ್ ಸಿಂಡಿಕೇಟ್ ಲಿಮಿಟೆಡ್ ಸ್ಥಾಪಿಸಿದರು. ಸೆಲ್ವನ್ ಮೆನಾಷಿ ಹೇಳುವಂತೆ 'ಸಣ್ಣ ಉಳಿತಾಯದಾರರಲ್ಲಿಗೆ ಬ್ಯಾಂಕನ್ನು ಒಯ್ಯುವುದು ಈ ಯೋಜನೆಯ ಮೂಲ ಉದ್ದೇಶ." ಇದು ಇಂದಿನ ಭವಿಷ್ಯವನ್ನು ಡಾ॥ ಪೈಗಳಾಗಲೇ ಚಿಂತಿಸಿದ್ದಾಗಿತ್ತು.

"ಬ್ಯಾಂಕ್‌ನಲ್ಲಿ ಖಾತೆ ತೆರೆಯುವ ಯಾವನೊಬ್ಬ ಗಳಿಸುವ ವ್ಯಕ್ತಿಯೂ ಅರ್ಹನಾಗಿದ್ದಾನೆ." ಹೀಗೆ ಹುಟ್ಟಿದ ಯೋಜನೆಯೇ ಪಿಗ್ಮಿಯೋಜನೆ. ಸಣ್ಣ ಉಳಿತಾಯ ಯೋಜನೆ ಇದು. ಪಿಗ್ಮಿ ಯೋಜನೆ ಬಡಜನರ ಅಕ್ಷಯ ನಿಧಿ ಎನಿಸಿತು.

1933ರಲ್ಲಿ ಭೂಮಿಯ ಬೆಲೆ ಒಂದೇ ಸಮನೆ ಇಳಿದು ಭೂ ಮಾಲೀಕರು ಕಂಗಾಲಾಗಲು ಡಾ॥ ಪೈಯವರು ಇದನ್ನು ತಡೆಗಟ್ಟಲು ಕೆನರಾ ಲ್ಯಾಂಡ್ ಇನ್‌ವೆಸ್ಟ್‌ಮೆಂಟ್ಸ್ ಲಿಮಿಟೆಡ್ ಸ್ಥಾಪಿಸಿ, ತಮ್ಮದೇ ಒಂದು ಬ್ಯಾಂಕನ್ನು ಅದರ ಉಸ್ತುವಾರಿಯಾಗಿ ನೇಮಿಸಿದರು. ಈ ಹೊಸ ಸಂಸ್ಥೆ ಹಲವು ಕಾರ್ಮಿಕರ ಜೀವನ ನಿರ್ವಹಣೆಗೆ ಕಾರಣೀಭೂತವಾಯಿತು.

ಇತರರ ಸೇವೆಗಾಗಿಯೇ ಹುಟ್ಟಿದ ಜೀವ ಡಾ॥ ಪೈಗಳದ್ದು. ಇಷ್ಟೆಲ್ಲ ಮಾಡಿದರೂ, ಆ ಕಾಲಕ್ಕಾಗಲೇ ಟೈಫಾಯಿಡ್, ಟಿ.ಬಿ. ಮೊದಲಾದ ಮಾರಕ ರೋಗಗಳು ಹರಡಿ ಕುಟುಂಬದ ಯಜಮಾನನೇ ತೀರಿಕೊಂಡ ನಿರ್ಗತಿಕ ಕುಟುಂಬ ನೋಡಿ ಇವರ ಮನ ನೊಂದಿತ್ತು. ಇದರ ಫಲವೇ 1935ರಲ್ಲಿ ಅಸ್ತಿತ್ವಕ್ಕೆ ಬಂದ–ದಿ ಕೆನರಾ ಮ್ಯೂಚುವಲ್ ಎಶುರೆನ್ಸ್ ಕಂ. ಲಿಮಿಟೆಡ್. ಈ ವಿಮಾ ಯೋಜನೆ ಬಡ ಜನರ ಕುಟುಂಬ ಕಲ್ಯಾಣಕ್ಕಾಗಿಯೇ ಜನ್ಮತಾಳಿದ್ದು. ಕೆಲವೇ ವರ್ಷಗಳಲ್ಲಿ ಇದು ದಕ್ಷಿಣ ಭಾರತದುದ್ದಕ್ಕೂ ಹಬ್ಬಿ ಜನರ ವಿಶ್ವಾಸ ಸ್ಥಿರಪಡಿಸಿತು.

ಹಲವು ಅಡಚಣೆಗಳಿದ್ದರೂ ಹಿಡಿದ ಕೆಲಸ ಬಿಡದೆ ಮಾಡುವ ಈ ಛಲದಂಕಮಲ್ಲನ ಮುಂದಿನ ಯೋಜನೆ–ವಿದ್ಯಾಭ್ಯಾಸ–ವಿದ್ಯಾದಾನ. ಈಗ ಇವರ ಕಾರ್ಯಭಾರ ಬೇರೆಡೆಗಳಿಂದ ಬರುತ್ತಿದ್ದ ವಿದ್ಯಾಭ್ಯಾಸಿಗರಿಗೆ ವಿಶಾಲವಾಗಿ ಹರಡುತ್ತಿತ್ತು. ಆಗ ಇನ್ನೂ ಉಡುಪಿಯಲ್ಲಿ ಕಾಲೇಜು ಪ್ರಾರಂಭಗೊಂಡಿರಲಿಲ್ಲ. 1942ರಲ್ಲಿ ಆಕಾಡಮಿ ಆಫ್ ಜನರಲ್ ಎಜುಕೇಶನ್ ಸ್ಥಾಪಿಸಿ ಡಾ॥ ಪೈಗಳೇ ಅದರ ರಿಜಿಸ್ಟ್ರಾರರಾದರು.

ಈ ಸಂಸ್ಥೆ ನಡೆಸುವ ವಿದ್ಯಾಕೇಂದ್ರಗಳಲ್ಲಿ ಸಾವಿರಗಟ್ಟಲೆ ವಿದ್ಯಾರ್ಥಿಗಳು ವಿದ್ಯಾಶೀಲರಾಗುತ್ತಿದ್ದರು.

ಡಾ॥ ಪೈಗಳ ಅವಿರತ ಯತ್ನದ ಫಲವಾಗಿ 1949ರಲ್ಲಿ ಅಕಾಡಮಿಯ ಮಹಾತ್ಮಗಾಂಧಿ ಮೆಮೋರಿಯಲ್ ಕಾಲೇಜು (ಎಂ.ಜಿ.ಎಂ.) ಪ್ರಾರಂಭಗೊಂಡಿತು. ಒಟ್ಟು ಎಂಬತ್ತು ಮಂದಿ ಹುಡುಗರು ಹತ್ತು ಹುಡುಗಿಯರು ಅದರ ವಿದ್ಯಾರ್ಥಿಗಳು. Co-educationಗೆ ಪ್ರತಿಭಟನೆ. ಪ್ರೋತ್ಸಾಹ ಇಲ್ಲದ ಕಾಲ ಅದಾಗಿತ್ತು. ಸ್ವಂತ ಕಟ್ಟಡ ಇಲ್ಲದೆ. ಮದರಾಸು ಸರಕಾರ ನೀಡಿದ ಮೂವತ್ತುಮೂರು ಎಕರೆ ಸ್ಥಳವನ್ನು ಉಪಯೋಗಿಸಿ ಕಟ್ಟಡ ಕಟ್ಟಬೇಕಾಯಿತು. ಈ ಸಂದರ್ಭದಲ್ಲಿ ಡಾ॥ ಪೈಗಳ ಶ್ರಮದಾನ

ಸ್ಮರಣೀಯ. ಸ್ನೇಹಿತರು. ಬಂಧುಗಳು, ವಿದ್ಯಾರ್ಥಿಗಳು. ಶಿಕ್ಷಕರು. ಬ್ಯಾಂಕ್ ನೌಕರರು ಹೀಗೆ ಸಕಲ ಕ್ಷೇತ್ರಗಳಲ್ಲಿ ಕಾರ್ಯ ಎಸಗುವವರು ಪೈಯವರಿಗೆ ಸಹಾಯ ಹಸ್ತ ನೀಡಿ. ಅವರ ನಿಧಿ ಸಂಗ್ರಹಣಾ ಕಾರ್ಯಕ್ರಮ ಯಶಸ್ವಿಗೊಳಿಸಿದರು. ಹೀಗಾಗಿ 1951ರಲ್ಲಿ ಎಂ.ಜಿ.ಎಂ. ಕಾಲೇಜು ತನ್ನ ಸ್ವಂತ ಕಟ್ಟಡಕ್ಕೆ ವರ್ಗಾಯಿಸಲ್ಪಟ್ಟಿತು. ಇದೇ ಮುಂದೆ ಮಂಜೇಶ್ವರ ಗೋವಿಂದ ಪೈ ಸಂಶೋಧನಾ ಕೇಂದ್ರ ಹಾಗೂ ಯಕ್ಷಗಾನ ಕೇಂದ್ರಕ್ಕೆ ನೆಲೆಯಾಯಿತು.

1950ರಲ್ಲಿ ಸಿಂಡಿಕೇಟ್ ಬ್ಯಾಂಕ್ ತನ್ನ ಬೆಳ್ಳಿ ಹಬ್ಬವನ್ನು ಆಚರಿಸಿತು. ಇದೇ ಸಮಯದಲ್ಲಿ ಡಾ॥ ಪೈಯವರು ತಮ್ಮ ವೃತ್ತಿ ಜೀವನಕ್ಕೆ ಶರಣು ಹೊಡೆದು ಶಸ್ತ್ರವನ್ನು ಕೆಳಗಿಟ್ಟರು. ಮುಂದೆ ಬ್ಯಾಂಕಿಂಗ್ ಅನ್ನೇ ಮುಖ್ಯ ವ್ಯವಹಾರವನ್ನಾಗಿ ಸ್ವೀಕರಿಸಿದರು.

ಸಮಾಜ ಸೇವೆಯಲ್ಲಿ ಈ ಸಿಂಡಿಕೇಟ್ ಬ್ಯಾಂಕ್‌ನದ್ದು ಪ್ರಮುಖ ಪಾತ್ರ. ವಿದ್ಯಾವಂತ ನಿರುದ್ಯೋಗಿಗಳ ಸಮಸ್ಯೆಯನ್ನೇ ಇದು ಬಗೆಹರಿಸಿದೆ. ಇವರ ಸ್ಕಾಲರ್‌ಶಿಪ್ ಲೋನ್ ಕಾರ್ಯಕ್ರಮ ಇದಕ್ಕೆ ಮತ್ತಷ್ಟು ಖ್ಯಾತಿಯನ್ನು ತಂದುಕೊಟ್ಟಿದ್ದು ಮಾತ್ರವಲ್ಲ ವಿದ್ಯಾರ್ಥಿಗಳ ಭವಿಷ್ಯ ನಿರ್ಮಾಣದಲ್ಲಿ ತನ್ನ ಪಾತ್ರವನ್ನು ಸ್ಥಿರಪಡಿಸಿಕೊಂಡಿತು.

ಈ ಹೊತ್ತಿಗಾಗಲೇ ಪೈಯವರ ಕೈಗೂಸು ಸಿಂಡಿಕೇಟ್ ಬ್ಯಾಂಕ್ ಎಂಬ ವಟವೃಕ್ಷ ತನ್ನ ಬಿಳಿಲುಗಳನ್ನು ದಕ್ಷಿಣ ಭಾರತದುದ್ದಕ್ಕೂ ಹಬ್ಬಿಸಿತ್ತು. ಅದು ತನ್ನ ಕಾರ್ಯ ನಿರ್ವಹಣೆಯ ಮೂರನೆಯ ದಶಕದಲ್ಲಿ ತೊಂಬತ್ತುಮೂರು ಶಾಖೆಗಳನ್ನು ಹೊಂದಿದ್ದು ಮಾತ್ರವಲ್ಲ ಬೊಂಬಾಯಿ. ಮಂಗಳೂರು, ಬೆಂಗಳೂರು ಕಡೆಗಳಲ್ಲಿ ಮಹಿಳಾ ಕಛೇರಿಗಳನ್ನು ಸ್ಥಾಪಿಸಿ ತನ್ನ ಹಿರಿಮೆಯನ್ನು ಪ್ರದರ್ಶಿಸಿತು. ಬ್ಯಾಂಕಿಂಗ್ ಇತಿಹಾಸದಲ್ಲೇ ಮೊತ್ತಮೊದಲ ಮಹಿಳಾ ಅಧಿಕಾರಿಗಳು ಬಂದದ್ದು ಈ ಬ್ಯಾಂಕಿನ ಮೂಲಕ ಎನ್ನುವುದು ಗಮನಾರ್ಹ ವಿಷಯ.

1962ರಲ್ಲಿ ಇವರು ಬ್ಯಾಂಕಿಂಗ್ ವ್ಯವಹಾರವನ್ನೆಲ್ಲ ಟಿ. ಎ. ಪೈಗಳಿಗೆ ಧಾರೆ ಎರೆದು ತಾವು ನಿವೃತ್ತಿ ಪಡೆದರು.

1969ರಲ್ಲಿ ವಾತ್ಸಲ್ಯ ಆರೋಗ್ಯ ಧಾಮ ಸ್ಥಾಪಿಸಿದರು. "ವಿದ್ಯಾ ಕ್ಷೇತ್ರಗಳಲ್ಲಿನ ಡಾ॥ ಪೈ ಅವರ ಈ ಕ್ರಾಂತಿ ಭಾರತಾದ್ಯಂತ ಹಿಂದೂ ನಡೆದಿಲ್ಲ ಮುಂದೆಯೂ ನಡೆಯುವಂತಿಲ್ಲ. ಇದರ ಸಾಕ್ಷಾತ್ಕಾರ ಮಣಿಪಾಲದಲ್ಲಿ ಮಾತ್ರ ಆಗಿದೆ" ಎಂದು ಸೆಲ್ಡನ್ ಸೋನಾಥ ತಮ್ಮ 'ಪ್ರೈಸ್ ಆಫ್ ಮಣಿಪಾಲ್' ಕೃತಿಯಲ್ಲಿ ಒಪ್ಪಿಕೊಂಡಿದ್ದಾರೆ.[53]

**ಗ್ರಾಮೀಣ ಅಭಿವೃದ್ಧಿ :**

ತಮ್ಮ ಜೀವನಮಾನವನ್ನೆಲ್ಲ ಇತರರಿಗಾಗಿ ಮೀಸಲಾಗಿಟ್ಟವರಿಗೆ ವಿಶ್ರಾಂತಿ ಎಲ್ಲಿಯದು ? ಬ್ಯಾಂಕಿಂಗ್‌ನಿಂದ ದೂರವಿದ್ದ ಪೈಗಳು ಈಗ ಗ್ರಾಮೀಣ ಅಭಿವೃದ್ಧಿಯತ್ತ ತಮ್ಮ ಕಾರ್ಯಭಾರ ತೊಡಗಿಸಿದರು. ಪ್ರತಿ ಹಳ್ಳಿಯಲ್ಲೂ ಒಂದೊಂದು ಹೈಸ್ಕೂಲು ತೆರೆಯುವುದು ಅವರ ಮುಂದಿನ ಯೋಜನೆಯಾಗಿತ್ತು–

"ಅಜ್ಞಾನವೇ ಭಾರತದ ಬಡತನಕ್ಕೆ ಕಾರಣ. ವಿದ್ಯಾಭ್ಯಾಸ ಒಂದೇ ಇದಕ್ಕೆ ಮದ್ದು. ವಿದ್ಯಾಭ್ಯಾಸದಿಂದ ಕಂಗೊಳಿಸುವ ವ್ಯಕ್ತಿ ಕುಟುಂಬಕ್ಕೆ ಮಾತ್ರವಲ್ಲ. ದೇಶಕ್ಕೂ ಆಸ್ತಿ" ಎನ್ನುವುದು ಪೈ ಅವರ ಅಭಿಮತ.

ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ರಂಗಗಳಲ್ಲಿ ಹಿಂದುಳಿದ ಗ್ರಾಮೀಣ ಜನತೆಯನ್ನು ಮುಂದುವರಿಸುವಲ್ಲಿ ಪೈಯವರು ಪಟ್ಟ ಶ್ರಮ ಅವರೊಬ್ಬರೇ ಬಲ್ಲರು. ರೈತರಿಗೆ ಅವಶ್ಯಕವಾದ ರಾಸಾಯನಿಕ ಪೆಸ್ಟಿಸೈಡ್, ಪಂಪುಸೆಟ್ಟು, ಆಧುನಿಕ ತಂತ್ರಜ್ಞಾನದ ಬಗ್ಗೆ ತರಬೇತಿ ನೀಡುವಲ್ಲಿ ಡಾ|| ಪೈಗಳು ಸಫಲರಾಗಿದ್ದರು. ಇವರಿಗಾಗಿಯೇ ರೂಪುಗೊಂಡ–ಮಣಿಪಾಲ ಇಂಡಸ್ಟ್ರೀಸ್ ಲಿಮಿಟೆಡ್ ನವೀನ ರೀತಿಯ ಉಪಕರಣಗಳನ್ನು ರೈತರಿಗೆ ಕಡಿಮೆ ದರದಲ್ಲಿ ಸಾಲದ ರೂಪದಲ್ಲಿ ದೊರೆಯಲು ಸಹಕರಿಸಿತು. ಡಾ|| ಪೈಯವರು ತಮ್ಮ ಫಾರ್ಮ್ ಅನ್ನು ಪ್ರದರ್ಶನಾ ಕೃಷಿಕ್ಷೇತ್ರವಾಗಿ ಬಳಸಿ ರೈತರಿಗೆ ಪ್ರತ್ಯಕ್ಷದರ್ಶಿಯಾಗಿ ಮಾರ್ಗದರ್ಶನ ನೀಡುತ್ತಿದ್ದರು.

ಅವರು 1942 ರಿಂದ 1978ರ ನಡುವಣ ಮೂವತ್ತಾರು ವರ್ಷಗಳಲ್ಲಿ ಮೂವತ್ತೆಂಟಕ್ಕೂ ಮಿಕ್ಕಿದ ಶಾಲಾ–ಕಾಲೇಜುಗಳನ್ನು ತೆರೆದು ವಿದ್ಯಾನಿಧಿಗಳೆನಿಸಿದ್ದಾರೆ.

**ಸಾಧನೆ–ಪುರಸ್ಕಾರಗಳು :**

ನ್ಯೂಯಾರ್ಕಿನ ಡಾ|| ಡಬ್ಲ್ಯು. ಬಿ. ಮೇಯೋ ಅವರಿಗೆ ತಮ್ಮ ಸಾಧನೆಯ ಬಗ್ಗೆ ಯಾರೋ ಪ್ರಶ್ನಿಸಿದಾಗ ಅವರು ಹೇಳಿದರಂತೆ- "ಜೀವನದಲ್ಲಿ ಮಹತ್ತರವಾದುದನ್ನು ಸಾಧಿಸಬೇಕು. ಸರಿಯಾದ ಸಮಯದಲ್ಲಿ ಅರ್ಹ ತಾಯಿ ತಂದೆಯರು ನಮಗೆ ಜನ್ಮ ನೀಡಿದ್ದಾರೆ. ನಾವು ಪ್ರತಿಭಾವಂತರಲ್ಲ. ಕಾಯಕದ ಮೇಲೆ ಮನುಷ್ಯ ಪ್ರಯತ್ನದ ಮೇಲೆ ಭರವಸೆಯನ್ನಿಟ್ಟ ಕರ್ಮಯೋಗಿಗಳು." ಇದೇ ಮಾತು ಡಾ|| ಪೈಯವರಿಗೂ ಅನ್ವಯಿಸುತ್ತದೆ. ಹುಟ್ಟಿನಿಂದಲೇ ಬಂದ ಅದ್ವಿತೀಯ ಕೌಟುಂಬಿಕ ಹಿನ್ನೆಲೆ, ಆದರ್ಶವಾದಿತ್ವ-ಇವರನ್ನು ಸಮಾಜ ಸೇವೆಯತ್ತ ಮುನ್ನುಗ್ಗಲು ಪ್ರೇರೇಪಿಸಿದವು. ಅವರ ನಾಯಕತ್ವದ ಗುಣಗಳು ಅವರ ಆತ್ಮವಿಶ್ವಾಸ- ಇವು ಅವರನ್ನು ಒಬ್ಬ ಸಮರ್ಥ [illegible] ರನನ್ನಾಗಿ ರೂಪಿಸಿದವು. "ಡಾ|| ಪೈ

ಚಿನ್ನದ ಪರಪಡೆವ ಸುಪುತ್ರ. ಅವರು ಹುಟ್ಟಿದ ಮಣ್ಣು ಹೊನ್ನು. ಅವರು ಯೂರೋಪ್ ದೇಶದಲ್ಲಿ ಹುಟ್ಟಿದ್ದರೆ ಕೋಪರ್ನಿಕಸ್ ಆಗುತ್ತಿದ್ದರು. ಅಮೇರಿಕಾದಲ್ಲಿ ಹುಟ್ಟಿದ್ದರೆ ಗಿಯಾನಿನಿ ಆಗುತ್ತಿದ್ದರು. ಅವರೊಬ್ಬ ಯಶಸ್ವೀ ಮಾನವ" ಎಂದಿದ್ದಾರೆ ಸೆಲ್ಡನ್ ಮೆನಾಘ.[54]

ಡಾ॥ ಪೈಯವರಲ್ಲಿ. ಸಾವಿರ ಸಮಸ್ಯೆಗಳ ಹಿಂದೆ ಅವರದೇ ಆದ ಪರಿಹಾರ ಕ್ರಮ ಸಿದ್ಧವಾಗಿರುತ್ತಿತ್ತು. ಅವರು ಯೋಚಿಸಿದ್ದು ಎಂದೂ. ಎಲ್ಲವೂ. ನನಸೇ.

"ದೇಶದ ಜನರು ಒಬ್ಬರು ಒಂದೊಂದು ಸಮಸ್ಯೆಯನ್ನು ರಾಷ್ಟ್ರದ ಪಾಲಿಗೆ ಬಿಟ್ಟರೆ ಅದರ ಮೊತ್ತ ಅರವತ್ತು ಕೋಟಿಯಾಗುವುದು. ಅದರೆ ರಾಷ್ಟ್ರೀಯ ಸಮಸ್ಯೆ ಬಿಡಿಸಲು ಅರವತ್ತು ಕೋಟಿ ಜನರು ಮುಂದೆ ಬಂದರೆ ಸಮಸ್ಯೆ ಲೀಲಾಜಾಲವಾಗಿ ಸಾಯು." ಇದು ಡಾ॥ ಪೈಯವರ ಸಂದೇಶ. ಸಾರ್ವಕಾಲಿಕ ಸತ್ಯವಾದದ್ದು.

'ಅದ್ಭುತ ಸಾಧನೆಯ ಅಭಿನವ ವಿಶ್ವಾಮಿತ್ರ' ಎಂದು ಉಡುಪಿಯ ನಾಗರಿಕರು ಇವರನ್ನು ಕೊಂಡಾಡಿದ್ದಾರೆ. ಲಕ್ಷ್ಮೀ ಸರಸ್ವತಿಯರನ್ನು ಒಂದೆಡೆ ಕಲೆ ಹಾಕಿದ ಅರ್ಜಕರಿವರು ಎಂದು ಬಣ್ಣಿಸಿದ್ದಾರೆ.

1956ರಲ್ಲಿ ಜೀವ ವಿಮಾ ಸಂಸ್ಥೆ ರಾಷ್ಟ್ರೀಕೃತವಾದಾಗ ಡಾ॥ ಪೈಯವರ ಯೋಜನೆಯ ಶಿಶು ಕೆನರಾ ಮ್ಯೂಚುವಲ್ ಎಶುರೆನ್ಸ್ ಕಂಪನಿ ಕೂಡಾ ಇದರಲ್ಲೇ ಸೇರಿಕೊಂಡಿತು. ಡಾ॥ ಪೈಯವರು ತಮ್ಮ ಸರ್ವ ಪ್ರಯತ್ನದಿಂದ ಜೀವ ವಿಮಾ ಸಂಸ್ಥೆಯ ಪ್ರಧಾನ ಕಛೇರಿಯನ್ನು ಮಣಿಪಾಲದಲ್ಲೇ ತೆರೆದು ಉಡುಪಿ ನಾಗರಿಕರಿಗೆ, ಕನ್ನಡಿಗರಿಗೆ ನೌಕರಿಯ ಅವಕಾಶವನ್ನು ಮತ್ತಷ್ಟು ಒದಗಿಸಿಕೊಟ್ಟರು. 'ಮಣಿಪಾಲದ ಬ್ರಹ್ಮ ದಕ್ಷಿಣ ಕನ್ನಡ ಜಿಲ್ಲೆಯ ಸುಪುತ್ರ' ಎಂಬ ಮಾತು ಒಪ್ಪಿಕೊಳ್ಳುವಂತಹದೇ ಆಗಿದೆ.

ಡಾ॥ ಪೈಯವರ ವಿಚಾರಧಾರೆಯನ್ನು ಕು. ಶಿ. ಹರಿದಾಸಭಟ್ಟರು ಹೀಗೆಂದು ಹೇಳುತ್ತಾರೆ :

1. ಜನಪದಕ್ಕೆ ವಿದ್ಯೆಯೇ ಮುಖ್ಯ ಸಂಪತ್ತು. ಅಳಿಯಲಾರದ ಈ ಸಂಪತ್ತಿನ ಸಂವರ್ಧನೆಗೆ ಜನರ ಸಹಕಾರದಿಂದ ಶಿಕ್ಷಣ ಸಂಸ್ಥೆಗಳನ್ನು ಕಟ್ಟಬೇಕು. ಉಚ್ಚ ಶಿಕ್ಷಣವು ಕೂಡಾ ವ್ಯಾಪಕವಾಗಿ ಹರಡಬೇಕು.

2. ವ್ಯಕ್ತಿಗಳು ಸ್ವಾವಲಂಬಿಗಳಾಗಿ ಬಾಳಲು ಸಂಪಾದಿಸಿದ್ದರ ಸ್ವಲ್ಪಾಂಶವನ್ನಾದರೂ ಉಳಿಸಬೇಕು. ಸರ್ಕಾರೀಕರಣದಿಂದ ಎಲ್ಲರೂ ಸರ್ಕಾರೀ ನೌಕರರಾಗುವ ಸಮಾಜ ಪದ್ಧತಿಯೊಂದು; ಸರ್ಕಾರದ ಬೆಂಬಲದಿಂದ ಪ್ರತಿ ವ್ಯಕ್ತಿಯೂ ಸ್ವಾವಲಂಬಿಯಾಗಿ ಸ್ವತಂತ್ರವಾಗಿ ಬಾಳುವ ಪರಿಸರವನ್ನು ಹೊಂದಿದ ಸಮಾಜ ಪದ್ಧತಿ ಇನ್ನೊಂದು.

ವೃತ್ತಿಯಲ್ಲಿ ಡಾಕ್ಟರರಾದರೂ ಪ್ರವೃತ್ತಿಯಲ್ಲಿ ಇವರು ಸಮಾಜ ಸೇವಕರು. ಲಕ್ಷೋಪಲಕ್ಷ ಡಾಕ್ಟರರುಗಳನ್ನು ರಾಷ್ಟ್ರಕ್ಕೆ ನೀಡಬಲ್ಲ ಸಂಸ್ಥೆ ಕಟ್ಟಿ ಮಾತೃ ಋಣ ತೀರಿಸಿದವರು. ಸಮಾಜಕ್ಕೆ ಉತ್ತಮ ಫಲಗಳನ್ನು ನೀಡುವ ಸಂಸ್ಥೆಗಳನ್ನು ಕಟ್ಟಿದ ಈ ಪ್ರಾಮಾಣಿಕ ವ್ಯಕ್ತಿಯಲ್ಲೂ ಆಕಾಂಕ್ಷೆಯನ್ನು ಕಂಡವರಿದ್ದಾರೆ. ಅವರು ಮುಟ್ಟಿದ್ದು ಪರುಷ. ಅವರು ಕಟ್ಟಿದ ಸಂಸ್ಥೆ ಯುಗ ಯುಗಗಳ ತನಕ ಮಾನವಕುಲದ ಉದ್ಧಾರಕ್ಕೆ ನೆರವಾಗುವಂತಹವು.

"ನಾಡಿನ ಪ್ರತಿಯೊರ್ವ ವ್ಯಕ್ತಿ ಶಿಕ್ಷಣ ಪಡೆಯಬೇಕು. ತಾನು ಗಳಿಸಿದ ಶಿಕ್ಷಣ ಮತ್ತು ಸಂಪತ್ತನ್ನು ನಾಡಿನ ಹಿತಕ್ಕಾಗಿ ವಿನಿಯೋಗಿಸಬೇಕು" ಇದು ಡಾ॥ ಪೈಗಳ ನೀತಿ.

"ಡಾ॥ ಪೈ ಅವರಲ್ಲಿನ ಅತ್ಯದ್ಭುತ ವ್ಯಾವಹಾರಿಕ ಚತುರತೆ, ಜನರೊಂದಿಗೆ ಅವರ ಸ್ಪಂದನ. ಜನರ ವಿಶ್ವಾಸವನ್ನು ಗೆಲ್ಲಬಲ್ಲ ಅವರ ಆತ್ಮವಿಶ್ವಾಸ. ಹಿಡಿದ ಕೆಲಸವನ್ನು ಮಾಡಿ ಮುಗಿಸುವ ಅವರ ಅತೀವ ಛಲ" ಸಲ್ಡಾನ್ ಮೆನಾಸೆ ಡಾ॥ ಪೈಯವರನ್ನು ಕಂಡುಕೊಂಡ ರೀತಿ ಇದು.

ಮಣಿಪಾಲದ ಕಸ್ತೂರ ಬಾ ವೈದ್ಯಕೀಯ ಕಾಲೇಜಿನಲ್ಲಿ ಹಲವು ವರ್ಷಗಳಿಂದ ಸೇವೆ ಸಲ್ಲಿಸುತ್ತಿರುವ–ಪೈಯವರನ್ನು ಹತ್ತಿರದಿಂದ ಬಲ್ಲ ಡಾ॥ ಪದ್ಮಾರಾವ್ 1954 ರಿಂದ 1979 ರವರೆಗೆ ಪೈಯವರ ಒಡನಾಡಿ—

ಡಾ॥ ಪೈಯವರ ಸಮಯ ಪ್ರಜ್ಞೆಯ ಬಗ್ಗೆ ಆಕೆಗೆ ಅಭಿಮಾನ. ಯಾವುದೇ ಕಾರ್ಯಕ್ರಮಕ್ಕೆ ಅತಿಥಿಗಳಾಗಿ ಡಾ॥ ಪೈಗಳಿಗೆ ಆಮಂತ್ರಣವಿದ್ದಲ್ಲಿ ಸಮಯಕ್ಕೆ ಸರಿಯಾಗಿ ಕಾರ್ಯಕ್ರಮಕ್ಕೆ ತಲುಪಿ ಅದನ್ನು ನಡೆಸಿಕೊಡುವ ಅವರ ಧೋರಣೆಗೆ ಆಕೆ ಸೋತುಹೋಗಿದ್ದರು. ಅವರೊಬ್ಬ ಉತ್ತಮ ಸಲಹೆಗಾರ ಹಾಗೂ ಶ್ರೇಷ್ಠ ವಾಕ್ಪಟು. "ರಾಜ್ಯಪಾಲರೊಂದಿಗಿರಲಿ, ಒಬ್ಬ ಚಿಕ್ಕ ಬಾಲಕನೊಂದಿಗೇ ಇರಲಿ ಡಾ॥ ಪೈ ಅವರವರಿಗೆ ಸಲ್ಲಬೇಕಾದ ಗೌರವದೊಂದಿಗೇ ಸಂಭಾಷಿಸುತ್ತಿದ್ದರು. ಮಾತ್ರವಲ್ಲ ಮಕ್ಕಳೊಂದಿಗೆ ಮಕ್ಕಳಾಗಿ, ಹಿರಿಯರೊಂದಿಗೆ ಹಿರಿಯರಾಗಿ ವ್ಯವಹರಿಸುತ್ತಿದ್ದರು." "ಪ್ರತಿಯೊಬ್ಬರ ಸಮಸ್ಯೆಗಳಿಗೂ ಅವರಲ್ಲಿ ಸಮಯವಿತ್ತು. ನೋಡೋಣ.

ಮಾಡೋಣ ಮೊದಲಾದ ಪದಗಳು ಅವರಲ್ಲಿರಲಿಲ್ಲ. ಬದಲಿಗೆ ನಾನದನ್ನು ಮಾಡುತ್ತೇನೆ ಎನ್ನುವ ದೃಢ ನಿರ್ಧಾರವಿತ್ತು." ಪೈಯವರ ಎಂಬತ್ತು ವರುಷಗಳ ತುಂಬು ಜೀವನದ ರಹಸ್ಯವನ್ನು ತಿಳಿದ ಡಾ. ಪದ್ಮಾರಾವ್‌ರವರ ಮಾತಿದು.

ಮೆಡಿಕಲ್ ಕಾಲೇಜು ಪ್ರಾರಂಭವಾದ ಕೆಲವೇ ವರ್ಷಗಳಲ್ಲಿ ಒಬ್ಬ ವಿದ್ಯಾರ್ಥಿ. ದಾದಿಯೊಬ್ಬಳ ಮಾನಹಾನಿ ಮಾಡಿದನು. ಹತಭಾಗ್ಯ ದಾದಿಗೆ ಮರುಗಿ ಇತರ ದಾದಿಯರು ಮಿಂಚಿನ ಮುಷ್ಕರ ಹೂಡಿದರು. ಈ ಘಟನೆ ಡಾ. ಪೈಯವರ ಹಸ್ತಕ್ಷೇಪಕ್ಕೆ ಕಾಯುತ್ತಿತ್ತು. ಅವರು ಈ ಕಗ್ಗಂಟನ್ನು ಬಿಡಿಸಿದ ರೀತಿಯಾದರೂ ವಿಶೇಷ. ಹದಿ ವಯಸ್ಕ ಆ ವಿದ್ಯಾರ್ಥಿಯ ಭವಿಷ್ಯದ ಬಗೆಗೆ ಚಿಂತಿಸಿ ದಾದಿಯರನ್ನೂ ಆ ವಿದ್ಯಾರ್ಥಿಗಳನ್ನೂ ಒಂದು ಒಪ್ಪಂದಕ್ಕೆ ಬರಿಸಿದರು. ಕಾಲೇಜಿನಿಂದ ಉಚ್ಚಾಟನೆ ಮಾಡಿ ಆ ವಿದ್ಯಾರ್ಥಿಯ ಭವಿಷ್ಯಕ್ಕೆ ಕಲ್ಲುಹಾಕುವುದು ಪೈಯವರಿಗೆ ಬೇಡವಾದ ವಿಷಯ. ಈ ಒಂದೆ ಘಟನೆ ಅವರೊಬ್ಬ ಮಾನವತಾವಾದಿ ಎನ್ನುವುದನ್ನು ತೋರಿಸಿ ಕೊಡುತ್ತದೆ. 'ಏನಾದರೂ ಆಗು ಮೊದಲು ಮಾನವನಾಗು' ಎಂದು ಸಿದ್ದಯ್ಯ ಪುರಾಣಿಕರು ಹೇಳಿದ್ದನ್ನು ಇವರು ತಮ್ಮ ಜೀವನದಲ್ಲಿ ಅಳವಡಿಸಿಯೇ ಬಿಟ್ಟಿದ್ದರು.

ಡಾ. ಪೈಯವರ ಬಹುಮುಖ ಸೇವೆಗಾಗಿ 1965ರಲ್ಲಿ ಅವರಿಗೆ ಪದ್ಮಶ್ರೀ ಪ್ರಶಸ್ತಿ ನೀಡಲಾಗಿತ್ತು. 'ಕರರಹಿತ ಸಮಾಜ' ಪೈಗಳ ಕನಸು. "ಪ್ರಕೃತ ಸರಕಾರವು ಹೊರಿಸಿದ ತೆರಿಗೆಗಳು ರದ್ದಾಗಲಿ" ಇದು ಪದ್ಮಶ್ರೀ ಡಾ. ಪೈಗಳ ದಿಟ್ಟತನದ ಕರೆ ಸರಕಾರಕ್ಕೆ. "ಪ್ರತಿಯೊಬ್ಬನ ಆದಾಯಕ್ಕನುಗುಣವಾಗಿ ಶೇಕಡಾ ಹತ್ತರಿಂದ ಎಪ್ಪತ್ತೈದರವರೆಗೆ ಆತನ ಆದಾಯಾಂಶವನ್ನು ಸರಕಾರದೊಡನೆ ನಿಬಡ್ಡಿಯಿಂದ ಠೇವಣಿಯಾಗಿ ವರ್ಷಂಪ್ರತಿ ಇಪ್ಪತ್ತು ವರುಷಗಳ ವರೆಗೆ ಇಡುತ್ತಾ ಬರಬೇಕು. ಇಪ್ಪತ್ತು ವರುಷಗಳ ಬಳಿಕ ಸರಕಾರವು ಆತನಿಗೆ ಇಲ್ಲವೇ ಆತನ ಹಕ್ಕುದಾರರಿಗೆ ವರ್ಷಂಪ್ರತಿ ಠೇವಣಿಯನ್ನು ಸಲ್ಲಿಸುತ್ತಾ ಬರಲಿ." ಇದು ಪೈಯವರ ಯೋಜನೆಯ ಗುಟ್ಟು. ಅರ್ಥಶಾಸ್ತ್ರದಲ್ಲಿ ಪೈಯವರ ಹೊಸ ಯೋಜನೆ ಸರಕಾರಕ್ಕೆ ಮಾತ್ರ ಮಾನ್ಯವಾಗಲಿಲ್ಲ.

ಡಾ. ಪೈ ವಯಸ್ಸಿನಲ್ಲಿ ವೃದ್ಧರಾದರೂ ಅವರ ಕರ್ತವ್ಯ ಶಕ್ತಿಗೆ ಚಿಂತನ ಶೀಲತೆಗೆ ಮತ್ತು ದೂರದೃಷ್ಟಿಗೆ ವೃದ್ಧಾಪ್ಯ ಬಂದಿಲ್ಲ. ಸ್ವಾವಲಂಬನ ಮತ್ತು ಪರಿಶ್ರಮದ ಪಾಠವನ್ನು ದೇಶಕ್ಕೊಟ್ಟು ಸ್ವತಃ ಕ್ಷೇತ್ರದಲ್ಲಿ ಇಳಿದು ದುಡಿದು ಮಾದರಿ ಹಾಕಿ ಹೊಸ ಕ್ರಾಂತಿಯನ್ನೇ ಅವರು ಈ ದೇಶದಲ್ಲಿ ಮಾಡಿ ತೋರಿಸಿದ್ದಾರೆ. ಸಿಂಡಿಕೇಟ್ ಬ್ಯಾಂಕನ್ನು ಅವರು ಕಟ್ಟಿದ ರೀತಿ ಮತ್ತು ಆಧುನಿಕ ಮಣಿಪಾಲವನ್ನು ಅವರು ನಿರ್ಮಿಸಿದ ಬಗೆ ಎರಡೂ ಚರಿತ್ರಾರ್ಹವಾದವುಗಳು.ತಾವು ಸ್ವತಃ ಕೆಲಸ ಮಾಡಿ ಎಲ್ಲರನ್ನೂ ಆ ಕ್ರಿಯೆಯಲ್ಲಿ ತೊಡಗಿಸುವ ಡಾ. ಪೈಗಳಂತಹ ನಾಯಕರು ಈಗ ದೇಶಕ್ಕೆ

1. ಮನುಷ್ಯ ಸ್ವಭಾವವನ್ನು ಅರ್ಥೈಸಿಕೊಳ್ಳುವ ಮಾನವತೆ.
2. ವೈಯಕ್ತಿಕ ಅಪಾಯವನ್ನೂ ಪರಿಗಣಿಸದ ಸಾಹಸ ಪ್ರವೃತ್ತಿ.
3. ಸಮಾಜವನ್ನು ಸುಧಾರಣೆಯತ್ತ ಒಯ್ಯಬೇಕೆನ್ನುವ ಅದಮ್ಯ ಆಕಾಂಕ್ಷೆ: ಸುಧಾರಿತ ಸಮಾಜವೇ ಗುರಿ, ಅದೇ ಹೊಂಗನಸು.

ಬಹುಮುಖಿ ಪ್ರತಿಭೆಯ ಉಜ್ವಲ ವ್ಯಕ್ತಿ – ಡಾ॥ ಪೈಗಳು. ಸರ್ಕಾರದಿಂದ ಅಸಾಧ್ಯವಾದ ಕೆಲಸ ಉಡುಪಿಯ ಮಣ್ಣಿನಲ್ಲಿ ಅವರಿಂದ ಸಾಧ್ಯವಾಗಿದೆ. ಹಲವು ಯೋಜನೆಗಳನ್ನು ರೂಪಿಸುವ ಕಾರ್ಯದಲ್ಲಿ ಡಾ॥ ಪೈ ಸರಕಾರವನ್ನು ಹಿಂದೆ ಹಾಕಿದ್ದಾರೆ.

ಪ್ರತಿಯೊಂದು ಸಾಮಾಜಿಕ ಬದಲಾವಣೆಗೂ ಸರಕಾರವನ್ನೇ ನಂಬಿ ಕುಳಿತ ಜನತೆಗೆ ಡಾ॥ ಪೈಯವರ ಸಂದೇಶ ಹೀಗಿದೆ : 'ವಿದ್ಯಾಭ್ಯಾಸದ ಸೌಕರ್ಯಕ್ಕಾಗಿ ಕೇವಲ ಸರಕಾರವನ್ನು ನಂಬಿ ಕೂರುವುದರಲ್ಲಿ ಅರ್ಥವಿಲ್ಲ. ವಿದ್ಯಾಭ್ಯಾಸದ ನಿರ್ವಹಣೆಗೆ ಜನತೆ ತಾನಾಗಿ ಮುಂದೆ ಬರಬೇಕು. ಆಗಲೇ ವಿದ್ಯಾಕ್ಷೇತ್ರಗಳಲ್ಲಿ ಬದಲಾವಣೆಯ ಗಾಳಿ ಬೀಸಲು ಸಾಧ್ಯ. ಕ್ರಾಂತಿಯ ಕಹಳೆಯನ್ನೇ ಊದಬಹುದು." ಡಾ॥ ಪೈಯವರ ಈ ಮನೋಧರ್ಮದ ಫಲವೇ ವಿದ್ಯಾಸಂಸ್ಥೆಗಳ ನಿರ್ಮಾಣ. ಇವರ ಮಾಂತ್ರಿಕ ದಂಡ ಮಣಿಪಾಲದ ಗುಡ್ಡವನ್ನು ವಿದ್ಯಾಕೇಂದ್ರವನ್ನಾಗಿಸಿತು. ಮಣಿಪಾಲದ ಚತುರ ಶಿಲ್ಪಿ ಈ ವ್ಯಕ್ತಿ.

"ಪ್ರೇಮವಿದ್ದಲ್ಲಿದೆ ಜೀವನದ ಅದಮ್ಯ ಶಕ್ತಿ. ಯಾವ ಕೆಟ್ಟ ಶಕ್ತಿಯೂ ಪ್ರೇಮವನ್ನು ಜಯಿಸಲಾರದು. ಕಟ್ಟಿಹಾಕಿ ತಡೆ ಒಡ್ಡಲಾರದು. ಜನರ ಪ್ರೇಮ ಸಂಪಾದನೆಯೇ ಮಾನವನಲ್ಲಿನ ನಾಯಕತ್ವದ ಗುಣವನ್ನು ತೋರಿಸುತ್ತದೆ." ಡಾ॥ ಪೈಯವರು ನಂಬಿಕೊಂಡು ಬಂದ ಜೀವನದ ಸತ್ಯವಿದು.

ಈ ತುಂಬು ಜೀವನದ ವ್ಯಕ್ತಿಯ ಬಗ್ಗೆ ನೆಲ್ಸನ್ ಮೆನಾಷಿಗೆ [illegible] ಅವರು. "ಒಬ್ಬ ವ್ಯಕ್ತಿಯ ವ್ಯಕ್ತಿತ್ವದಿಂದ ಇಡೀ ಒಂದು ವಿದ್ಯಾನಗರಿಯ ನಿರ್ಮಾಣ, ಜೀವನದಲ್ಲಿ ಎಲ್ಲಾ ಕನಸುಗಳೂ ನನಸಾಗುವುದು ವಿರಳ. ಡಾ॥ ಪೈ ಈ ನಿಯಮಕ್ಕೆ ಅಪವಾದ. ಅವರ ಎಲ್ಲಾ ಕನಸುಗಳೂ ಇಲ್ಲಿ ಅರಳಿವೆ. ನನಸಾಗಿವೆ, ಸಾಕ್ಷಾತ್ಕರಿಸಿವೆ." ಹೃದಯ ತುಂಬಿ ನುಡಿದಿದ್ದಾರೆ ಈ ವಿದೇಶಿ.[56]

[illegible] ತರುಣರ ಸತತ ಪರಿಶ್ರಮ ಡಾ॥ ಪೈಯವರ ಉತ್ಸಾಹವನ್ನು ಕುಗ್ಗಿಸಿಲ್ಲ. 'ವೈಯಕ್ತಿಕವಾಗಿ ನಾನು ಕುಗ್ಗಿದರೂ, ಮಾನಸಿಕ [illegible] ಬತ್ತಿಲ್ಲ. ಈ [illegible] ನನಗೆ [illegible]

ಬೇಕಿಲ್ಲ. ಬಲ್ಲವರು ಹೇಳಿದ್ದಾರೆ—'ಗಗನಂ ಗಗನಾಕಾರಂ, ಸಾಗರಂ ಸಾಗರೋಪಮಂ' ಆಕಾಶಕ್ಕೆ ಆಕಾಶ, ಸಮುದ್ರಕ್ಕೆ ಸಮುದ್ರವೇ ಉಪಮೆ. ಡಾ. ಪೈಯವರಿಗೆ ಪೈಯವರೇ ಸರಿಸಾಟಿ. ಹೋಲಿಕೆಗಳಿಲ್ಲದ ಮನುಷ್ಯಾತೀತರವರು. ಕರ್ಮಯೋಗಿಗಳು ಕೆಲವರು ಪ್ರತಿಷ್ಠಿತರಾಗಿ ಹುಟ್ಟುತ್ತಾರೆ. ಇನ್ನೂ ಕೆಲವರು ಪ್ರತಿಷ್ಠೆಯನ್ನು ಸಂಪಾದಿಸುತ್ತಾರೆ. ಮತ್ತೂ ಕೆಲವರ ಮೇಲೆ ಪ್ರತಿಷ್ಠೆ ಹೇರಲ್ಪಡುತ್ತದೆ. ಡಾ. ಪೈ ಈ ಮೂರೂ ಮಾತಿಗೆ ಅಪರೂಪದ ಉದಾಹರಣೆ.

ಡಾ. ಪೈಯವರು ಆಧುನಿಕ ಭಾರತ ಕರ್ಮ ಶಿಲ್ಪಿಗಳಲ್ಲಿ ಒಬ್ಬರು ಎನ್ನುವುದು ಸಾರ್ವಕಾಲಿಕ ಸತ್ಯ.

**ಡಾ॥ ಟಿ. ಎಂ. ಎ. ಪೈ ಅವರ ವೈಯಕ್ತಿಕ ಜೀವನದ ಒಂದು ನೋಟ :**

**ವಿದ್ಯಾಭ್ಯಾಸ :**

1906—1911 : ಹಿರಿಯ ಪ್ರಾಥಮಿಕ ಶಾಲೆ, ಕಲ್ಯಾಣಪುರ.

1911—1914 : ತಾಲೂಕು ಬೋರ್ಡ್ ಮಾಧ್ಯಮಿಕ ಶಾಲೆ, ಉಡುಪಿ.

1914—1916 : ಕ್ರಿಶ್ಚನ್ ಪ್ರೌಢಶಾಲೆ, ಉಡುಪಿ.

1916—1919 : ಸೈಂಟ್ ಅಲೋಶಿಯಸ್ ಕಾಲೇಜು, ಮಂಗಳೂರು.

1920—1925 : ಮದರಾಸ್ ವೈದ್ಯಕೀಯ ಕಾಲೇಜು ಶಿಕ್ಷಣ.
ಡಾಕ್ಟರ್ ಪದವಿ ಗ್ರಹಣ.

1921 : ಶಾರದೆಯೊಂದಿಗೆ ವಿವಾಹ.

1925 : ಉಡುಪಿಯಲ್ಲಿ ವೈದ್ಯಕೀಯ ವೃತ್ತಿ ಪ್ರಾರಂಭ.

1959—1962 : ಮೈಸೂರು ಸರಕಾರದಿಂದ 'ಸಾರ್ವಜನಿಕ ಸೇವಾ ಪ್ರಶಸ್ತಿ'
: ಪ್ರದಾನ (Public Service award)

1965 : 'ಪದ್ಮಶ್ರೀ' ಪ್ರಶಸ್ತಿ. ಭಾರತದ ರಾಷ್ಟ್ರಪತಿಗಳಿಂದ.

1974 : ಮೈಸೂರು ವಿಶ್ವವಿದ್ಯಾನಿಲಯದಿಂದ ಗೌರವ ಡಾಕ್ಟರೇಟ್.

1979 : ಗೋಕರ್ಣ ಪರ್ತಗಾಳಿ ಮಠಾಧೀಶರಿಂದ 'ವಿದ್ಯಾಧಿರಾಜ ಪ್ರಶಸ್ತಿ.

29-5-79 : ಟಿ. ಎಂ. ಎ. ಪೈ ಎಂಬ ಜ್ಯೋತಿಯೊಂದು
ಅನಂತತೆಯಲ್ಲಿ ಲೀನವಾಯಿತು.

## ಡಾ|| ಟಿ. ಎಂ. ಎ. ಪೈ ಅವರ ಜೀವನದ ಸಾಧನೆಗಳು

### ವಿದ್ಯಾಭ್ಯಾಸ ಹಾಗೂ ಆರೋಗ್ಯ ಕೇಂದ್ರ :

1925 : ವೈದ್ಯಕೀಯ ವೃತ್ತಿಯ ಪ್ರಾರಂಭ.
1934 : ಕ್ಷಯರೋಗದ ಆಸ್ಪತ್ರೆ ಪ್ರಾರಂಭ.
1938 : ಹಿಂದೂ ಅನಾಥಾಶ್ರಮ ಪ್ರಾರಂಭ.
1942 : ಅಕಾಡಮಿ ಆಫ್ ಜನರಲ್ ಎಜುಕೇಶನ್ ಪ್ರಾರಂಭ.
1948 : ಪ್ರೌಢಶಾಲೆ ಮಣಿಪಾಲವಲ್ಲಿ ಪ್ರಾರಂಭ.
1949 : ಮಹಾತ್ಮಾಗಾಂಧಿ ಸ್ಮಾರಕ ಕಾಲೇಜು, ಉಡುಪಿ.
1953 : ಕಸ್ತೂರ ಬಾ ವೈದ್ಯಕೀಯ ಕಾಲೇಜು, ಮಣಿಪಾಲ.
1955 : ಕಸ್ತೂರ ಬಾ ಮೆಟರ್ನಿಟಿ ಸೆಂಟರ್, ಮಣಿಪಾಲ.
1955 : ಕಸ್ತೂರ ಬಾ ವೈದ್ಯಕೀಯ ಕಾಲೇಜು, ಮಂಗಳೂರು.
1955 : ಮೂಡೆ ಪ್ರೈಮರಿ ಶಾಲೆ, ಮೂಡೆ.
1956 : ನೆಹರು ಸ್ಮಾರಕ ಗ್ರಂಥಾಲಯ, ಮಣಿಪಾಲ.
1957 : ಮಣಿಪಾಲ ತಾಂತ್ರಿಕ ವಿದ್ಯಾಲಯ (M.I.T.), ಮಣಿಪಾಲ.
1957 : ಉಡುಪಿ ಲಾ ಕಾಲೇಜು, ಉಡುಪಿ.
1957 : ಸಂಗೀತ ಹಾಗೂ ಕಲಾ ಶಾಲೆ, ಮಣಿಪಾಲ.
1958 : ಸ್ಕೂಲ್ ಆಫ್ ಕ್ರಾಫ್ಟ್ಸ (School of crafts) ಉಡುಪಿ.
1959 : ನರ್ಸಿಂಗ್ ತರಬೇತಿ ಕೇಂದ್ರ, ಮಣಿಪಾಲ.
1960 : ಶ್ರೀ ಭುವನೇಂದ್ರ ಕಾಲೇಜು, ಕಾರ್ಕಳ.
1961 : ಕಸ್ತೂರ ಬಾ ಜನರಲ್ ಆಸ್ಪತ್ರೆ, ಮಣಿಪಾಲ.
1961 : ಪ್ರೌಢ ಶಾಲೆ, ಪೆರ್ಡೂರು.
1961 : ಕಲ್ಯಾಣಪುರದ ಹಿಂದೂ ಹೈಯರ್ ಪ್ರೈಮರಿ ಶಾಲೆಯನ್ನು ವಶಕ್ಕೆ ತೆಗೆದುಕೊಂಡದ್ದು.
1962 : ಇಂಗ್ಲಿಷ್ ಮೀಡಿಯಂ ನರ್ಸರಿ ಶಾಲೆ.
1962 : ಹರಿಹರಪುರ ಪ್ರೌಢಶಾಲೆ, ಹರಿಹರಪುರ.
1963 ಭಂಡಾರ್ಕರ್ಸ್ ಕಲಾ ಮತ್ತು ವಿಜ್ಞಾನ ಕಾಲೇಜು, ಕುಂದಾಪುರ.

1963 : ವಿಜಯಾ ಕಾಲೇಜು, ಮುಲ್ಕಿ.

1963 : ಕಮಲಾ ಬಾಯಿ ಪ್ರೌಢಶಾಲೆ, ಉಡುಪಿ.

1963 : ನಗರ್ ಪ್ರೌಢಶಾಲೆ, ನಗರ. (ಶಿವಮೊಗ್ಗ ಜಿಲ್ಲೆ)

1963 : ಇಂಗ್ಲಿಷ್ ಪ್ರೈಮರಿ ಶಾಲೆ, ಮಣಿಪಾಲ.

1964 : ನೆಹರು ಪ್ರೌಢಶಾಲೆ. ಅಲೆವೂರು.

1964 : ಪರ್ಕಳ ಪ್ರೌಢಶಾಲೆ, ಪರ್ಕಳ.

1964 : ಶಾರದಾ ಪ್ರೌಢಶಾಲೆ, ಪಾಂಡೇಶ್ವರ ಮಂಗಳೂರು.

1965 : ಕಾಲೇಜ್ ಆಫ್ ಎಜುಕೇಶನ್, ಉಡುಪಿ.

1965 : ಕಾಲೇಜ್ ಆಫ್ ಡೆಂಟಲ್ ಸರ್ಜರಿ, ಮಣಿಪಾಲ.

1965 : ಫಾರ್ಮಸಿ ಕಾಲೇಜ್. ಮಣಿಪಾಲ.

1965 : ಮಹಾವೀರ ಕಾಲೇಜ್, ಮೂಡಬಿದ್ರಿ.

1965 : ಜೆ.ಸಿ.ಬಿ.ಎಂ. ಕಾಲೇಜ್, ಶೃಂಗೇರಿ.

1965 : ಎಸ್. ವಿ. ಎಸ್. ಪ್ರೌಢಶಾಲೆ, ಆಗುಂಬೆ.

1967 : ಬರ್ನ್ಸ್ ಸೆಂಟರ್, ಮಣಿಪಾಲ.

1969 : ವ್ಯಾಲಿ ವ್ಯೂ ಆರೋಗ್ಯಧಾಮ, ಮಣಿಪಾಲ.

1973 : ಇಂಗ್ಲಿಷ್ ಮೀಡಿಯಂ ನರ್ಸರಿ ಶಾಲೆ, ಉಡುಪಿ.

1976 : ಇಂಗ್ಲಿಷ್ ಮೀಡಿಯಂ ಪ್ರೈಮರಿ ಶಾಲೆ, ಉಡುಪಿ.

1978 : ಇಂಗ್ಲಿಷ್ ಮೀಡಿಯಂ ಪ್ರೌಢಶಾಲೆ, ಉಡುಪಿ.

ಬ್ಯಾಂಕಿಂಗ್ ಹಾಗೂ ವಾಣಿಜ್ಯ ವಿಭಾಗ :

1925 : ಕೆನರಾ ಇಂಡಸ್ಟ್ರಿಯಲ್ ಮತ್ತು ಬ್ಯಾಂಕಿಂಗ್ ಸಿಂಡಿಕೇಟ್ ಪ್ರಾರಂಭ.

1933 : ಕೆನರಾ ಲ್ಯಾಂಡ್ ಇನ್‌ವೆಸ್ಟ್‌ಮೆಂಟ್ಸ್ ಲಿಮಿಟೆಡ್. ಮಣಿಪಾಲ

1935 : ಕೆನರಾ ಮ್ಯೂಚುವಲ್ ಎಶುರೆನ್ಸ್ ಕಂ. ಲಿಮಿಟೆಡ್.

1941 : ಮಣಿಪಾಲ್ ಪವರ್ ಪ್ರೆಸ್.

1955 : ಮಹಾರಾಷ್ಟ್ರ ಏಪೆಕ್ಸ್ ಕೋಆಪರೇಶನ್ ಲಿಮಿಟೆಡ್. ಮಣಿಪಾಲ

1962 : ಮಣಿಪಾಲ್ ಇಂಡಸ್ಟ್ರೀಸ್ ಲಿಮಿಟೆಡ್.

## ಎಂ. ವಿ. ಕಾಮತ್

“ಕೆಲವು ವ್ಯಕ್ತಿಗಳು ಅದೃಷ್ಟವಂತರು. ಜೀವನದ ಪ್ರಾರಂಭದ ದಿನಗಳಿಂದಲೇ ಅವರಿಗೆ ತಾವು ಭವಿಷ್ಯದಲ್ಲಿ ಏನಾಗಬೇಕು ಎನ್ನುವ ಬಗ್ಗೆ ಸ್ಪಷ್ಟ ಚಿತ್ರಣ ಇರುತ್ತದೆ. ಭವಿಷ್ಯದಲ್ಲಿ ತಾವು ಬಯಸಿದ್ದನ್ನೇ ಅವರು ಆಗುತ್ತಾರೆ ಕೂಡಾ. ಈ ಯಶಸ್ಸು ಅವರಿಗೆ ಅನಿರೀಕ್ಷಿತವೆಂದೆನಿಸುವುದಿಲ್ಲ. ಆದರೆ ನನ್ನ ಪಾಲಿಗೆ ಜೀವನ ಉದ್ದಕ್ಕೂ ಅಘಟಿತ ಘಟನೆಗಳ ಸಾಲು ಸಾಲು. ನಾನು ಬಯಸಿದ್ದೇನೋ ನಾನು ಆದುದ್ದೇನೋ. ನಾನು ಅಂದುಕೊಂಡಿದ್ದಂತೆ ನಾನು ಆಗಿದ್ದರೆ ಇಂದು ನಾನೊಬ್ಬ ತತ್ವಜ್ಞಾನಿಯಾಗುತ್ತಿದ್ದೆ....” ಕಾಮತರ ಹೃದಯಾಂತರಾಳದಿಂದ ಬಂದ ಮಾತುಗಳಿವು. ಕಾಮತರಿಗೆ ತಾವು ಬಯಸಿದ ಭವಿಷ್ಯ ತಮ್ಮದಾಗಲಿಲ್ಲ. ಗಾಳಿ ಬೀಸಿದತ್ತ ತೂರಿದ್ದು. ಹಿರಿಯಣ್ಣನ ಮೇಲ್ವಿಚಾರಣೆಯಲ್ಲೇ ಭವಿತವ್ಯ ಕಂಡದ್ದು. ಇವರ ತತ್ವಜ್ಞಾನದ ಮೇಲಿನ ಮೋಹ ತೀರಾ ವಾಸ್ತವಿಕವಾದಿ ಎನಿಸಿದ್ದ ಶಿವಣ್ಣನಿಗೆ ಒಂದು ಒಗಟು. “ತತ್ವಜ್ಞಾನದಲ್ಲಿ ನೀನು ಪಡೆಯಲಿರುವ ಪದವಿ ನಿನಗೆ ಹೊಟ್ಟೆ ತುಂಬಿಸಲಾರದು. ತತ್ವಜ್ಞಾನಿಗಳಾದರೇನು ? ಹೊಟ್ಟೆ ಹೊರೆಯಬೇಕಾದ ಅವಶ್ಯಕತೆ ಎಲ್ಲರಿಗೂ ಇದೆ ತಾನೇ ?” ಇದು ಸಾರ್ವಕಾಲಿಕ ಸತ್ಯ. ಆದರೆ ಅಪ್ರಾಪ್ತ ವಯಸ್ಕ ಮಾಧವನಿಗೆ ಅದಿನ್ನೂ ಅರ್ಥವಾಗದ ಬದುಕು. ತಂದೆಗೆ ವೃದ್ಧಾಪ್ಯ ಪ್ರಾಪ್ತಿಯಾದಾಗ ಹಿರಿಯಣ್ಣನೇ ಮಾಧವನ ಭವಿಷ್ಯದ ಹೊಣೆ ಹೊತ್ತವರು. ಈಗ ಎರಡು ನುಡಿಯುವಂತಿಲ್ಲ. ಆದರೂ–“ಬದುಕಿನ ವಾಸ್ತವಿಕತೆಯೊಂದಿಗೆ ಸಂಧಾನ ಮಾಡುವ ಯತ್ನ ಕಾಮತರಿಗೆ : “ತತ್ವಜ್ಞಾನಿಯಾಗದಿದ್ದರೂ ಒಬ್ಬ ವೈದ್ಯನಾದರೂ ಆಗಬಲ್ಲೆ. ಉಪಶಮನಗಾರನಾದರೂ ಸರಿಯೆ.” ಇದಕ್ಕೂ ಒಂದು ಕಾರಣವಿದೆ. ತಮಿಳು ನಾಡಿನಲ್ಲಿ ಡಾ॥ ಜೇಸುದಾಸ್ ಹಾಗೂ ಒಬ್ಬ ಆಂಗ್ಲನು ಸೇರಿ ಒಂದು ಆಶ್ರಮವನ್ನು ಪ್ರಾರಂಭಿಸಿದರು. ಸಮಾಜ ಸೇವೆಯ ಕಾಂಕ್ಷೆ ಮಾಧವನ ಆಕಾಂಕ್ಷೆ. ತಾನು ಡಾಕ್ಟರನಾಗಿ ಲೋಕಸೇವೆಗೈಯಬೇಕೆಂಬ ಬಯಕೆ.

ಅಂತೂ 1941ರಲ್ಲಿ ಮಾಧವ ಸ್ಸೈಂಟ್ ಕ್ಸೇವಿಯರ್ ಕಾಲೇಜ್‌ನಲ್ಲಿ ವಿಜ್ಞಾನ ಪದವೀಧರನಾದ. ಬಯಸಿದ್ದೇನೂ ಸಿಗದೆ, ಬಂದದ್ದನ್ನೇ ಸ್ವೀಕರಿಸುವ ಪ್ರವೃತ್ತಿ ಬೆಳೆಸಿಕೊಳ್ಳಬೇಕಾದ್ದು ಮಾಧವನಿಗೆ ಅನಿವಾರ್ಯವಾಗಿತ್ತು. ರಸಾಯನ ಶಾಸ್ತ್ರಜ್ಞನಾಗಿ ಇ.ಡಿ. ಸಸ್ಸೂನ್ಸ್ ಟರ್ಕಿ ಡೈ ವರ್ಕ್ಸ್‌ನಲ್ಲಿ ಮುಂಬಯಿಯಲ್ಲಿ ವೃತ್ತಿ ಗಿಟ್ಟಿಸಿಕೊಳ್ಳಬೇಕಾಯಿತು. ಆದರೂ ಮನಸ್ಸಿನ ಮೂಲೆಯಲ್ಲಿ ತಾನಿನ್ನೂ ಸೋತಿಲ್ಲವೆಂಬ ಭಾವನೆ. ಮೂಲ

ಭೂತವಾದ ಒಂದು ಪದವಿ ಹಾಗೂ ತನ್ನ ಕಾಲಮೇಲೆ ತಾನು ನಿಲ್ಲಬಲ್ಲ ಒಂದು ವೃತ್ತಿ ಇವೆರಡೂ ಮಾಧವನ ಮನಸ್ಸಿನಲ್ಲಿ ಅರಸ ಆಕಾಂಕ್ಷೆಗಳಿಗೆ ಇಂಬುಕೊಡುವಂತೆ ಭದ್ರವಾಗಿದ್ದವು. ಅದಾಗಲೇ ಸ್ವಾತಂತ್ರ್ಯ ಪೂರ್ವದ ಕಾಲ. ಕೇವಲ ಹತ್ತು ವರ್ಷದ ಬಾಲಕನಲ್ಲೂ ಸ್ವದೇಶಾಭಿಮಾನ ತುಂಬಿ ತುಳುಕುವ ಪರಿಸರ. ದೇಶೀಯ ಆಂದೋಲನದಲ್ಲಿ ಹಿರಿಯರೊಂದಿಗೆ ಎಲ್ಲಾ ಬಾಲಕರೂ ಸಹಕರಿಸುತ್ತಿದ್ದರು. ಮಾತೃಭೂಮಿಯ ಋಣ ತನ್ನ ಮೇಲಿದೆ. ಆಕೆಗೆ ಸ್ವಾತಂತ್ರ್ಯ ದೊರಕಿಸಿಕೊಟ್ಟು ತಾನು ಋಣಮುಕ್ತನಾಗಬೇಕು. ಇದು ಎಲ್ಲರ ಜೀವನ ಧ್ಯೇಯ. ಅಹಿಂಸಾ ತತ್ವ–ಸತ್ಯಾಗ್ರಹ ಇದು ದೈನಂದಿನ ಜೀವನದಲ್ಲಿ ಬೆಸೆದು ಹಾಸುಹೊಕ್ಕಾಗಿತ್ತು. ಈ ಸಮಯದಲ್ಲೇ ಭಗತ್‌ಸಿಂಗ್, ಸುಖದೇವ್, ಮಲ್ಲಪ್ಪದಾನಶೆಟ್ಟಿ, ಜಗನ್ನಾಥ ಶಿಂಧೆ, ಬಾಬು ದಾಸು ಇವರೇ ಮೊದಲಾದವರು ಕೊಲ್ಲಲ್ಪಟ್ಟರು, ಇಲ್ಲವೇ ಗಲ್ಲಿಗೇರಿಸಲ್ಪಟ್ಟರು. ಅಂದಿನ ಸಾಮಾಜಿಕ ಪರಿಸರವೂ ಹಾಗಿತ್ತು. ವಿದ್ಯುಚ್ಛಕ್ತಿ, ಟಾರ್, ರೇಡಿಯೋಗಳಿನ್ನೂ ಹುಟ್ಟಿರಲಿಲ್ಲ. ಮಡಿಯ ವಾತಾವರಣ. ಆದರೂ ಜನರು ಒಗ್ಗಿಕೊಂಡು ಹೋಗಿದ್ದರು. ದೇಶ ತನಗೆಲ್ಲವನ್ನೂ ಕೊಟ್ಟಿದೆ–ತಾನು ದೇಶಕ್ಕೆ ನೀಡಿದ್ದೇನು? ಈ ಭಾವನೆ ಎಲ್ಲ ದೇಶಪ್ರೇಮಿಗಳಲ್ಲೂ ಸುಪ್ತವಾಗಿತ್ತು.

ಕಾಮತರು ಒಬ್ಬ ಅವಿಶ್ರಾಂತ ಪಾಠಕರಾಗಿದ್ದರು. ಕಾಲೇಜಿನಲ್ಲಿರುವಾಗಲೇ ಕಾಲೇಜು ಪತ್ರಿಕೆಗಳಿಗೆ ಸಂಪಾದಕರಾಗಿದ್ದರು. ಚರ್ಚಾ ಸ್ಪರ್ಧೆಯಲ್ಲಿ ಪಾಲುಗೊಳ್ಳುತ್ತಿದ್ದರು. ಗರ್‌ವಾರೆ, ಅಗಾಥ ಕ್ರಿಸ್ಟಿ, ಫಿಲಿಫ್ ಓಪೆನ್ ಹೈ, ಯೇನ್ ಗ್ರೇ ಮೊದಲಾದವರ ಕೃತಿಗಳನ್ನು ಕಾಲೇಜು ದಿನಗಳಿಂದಲೇ ಓದುತ್ತಿದ್ದರು. ಬ್ರಿಟಿಷ್ ಮಹಾ ಕೃತಿಗಳಾದ ಪ್ರೈಡ್ ಎಂಡ್ ಪ್ರೆಜುಡೀಸ್, ಡೇವಿಡ್ ಕೋಪ್ಪರ್ ಫೀಲ್ಡ್‌ರ ಕೃತಿಗಳು, ದೇವಿ ಚೌಧುರಾಣಿ, ಆನಂದಮಠ, ದುರ್ಗೇಶನಂದಿನಿ ಹೀಗೆ ಓದದೆ ಬಿಟ್ಟ ಕೃತಿಗಳಿಲ್ಲ. ಸಾಹಿತ್ಯ ಪ್ರೇಮ ಇವರೊಂದಿಗೇ ಬೆಳೆದು ಬಂದಿತ್ತು.

ಜನರಲ್ಲಿ ಸ್ವದೇಶಾಭಿಮಾನ ಹುಟ್ಟಿಸುವಂತಹ ಬಾಂಬೇ ಕ್ರಾನಿಕಲ್, ಫ್ರೀ ಪ್ರೆಸ್ ಜರ್ನಲ್‌ಗಳು ಯುವಕರಿಗೆ ಮಾರ್ಗದರ್ಶಕಗಳಾಗಿದ್ದುವು. ಸಾಮಾಜಿಕ ಪರಿಸ್ಥಿತಿ ಈ ರೀತಿಯಲ್ಲಿರಲು, ಜೀವನಪರ್ಯಂತ ಒಬ್ಬ ರಸಾಯನ ಶಾಸ್ತ್ರಜ್ಞನಾಗಿ ಇರುವುದು ಮಾಧವರಿಗೆ ಅದೊಂದು ಶಿಕ್ಷೆ. ಪ್ರತಿಯೋರ್ವನ ಜೀವನದಲ್ಲೂ ಒಂದೊಂದು ಪರ್ವಕಾಲ ಬರುತ್ತದೆ. ನಮ್ಮ ನಮ್ಮ ಭವಿತವ್ಯದ ಬಗ್ಗೆ ನಾವು ನಾವೇ ನಿರ್ಧಾರ ತೆಗೆದುಕೊಳ್ಳಬೇಕಾದ ಪ್ರಮೇಯ ಬರುತ್ತದೆ. ಇಂತಹ ಸಂದಿಗ್ಧ ಸ್ಥಿತಿ ಮಾಧವರಿಗೂ ಒದಗಿತ್ತು. ಹೊಸ ಅನುಭವಗಳ ಅನ್ವೇಷಣೆಯಲ್ಲಿದ್ದ ಈ ಯುವಕನಿಗೆ ಬದಲಾವಣೆಗಳಿಲ್ಲದ ಈ ವೃತ್ತಿ ಬೇಸರವೆನಿಸಿತು. ಬದಲಾವಣೆಗೆ ಅವಕಾಶ ಕಾಯುತ್ತಿತ್ತು. ಆಯ್ಕೆ ಪತ್ರಿಕೋದ್ಯಮದತ್ತ ವಾಲಿತ್ತು. ಅದಕ್ಕೆ ಪುಟವನ್ನಿತ್ತದ್ದು

ಸ್ವಾಮಿ ವಿವೇಕಾನಂದರ ವಾಣಿಗಳು. ಆ ಕಾಲಕ್ಕಾಗಲೇ ಭಾರತದ ಯಾವ ವಿಶ್ವ ವಿದ್ಯಾನಿಲಯದಲ್ಲೂ ಪತ್ರಿಕೋದ್ಯಮ ಪದವಿ ಇನ್ನೂ ಬಂದಿರಲಿಲ್ಲ. ಕೆಲಸಕ್ಕೆ ರಾಜಿ ನಾಮೆ ಇತ್ತಾಗಿತ್ತು. ಬದುಕಿಗೊಂದು ಉದ್ಯಮದ ಅವಶ್ಯಕತೆ ಇತ್ತು. ಸಂಡೆ ಸ್ಟ್ಯಾಂಡರ್ಡ್ ಪತ್ರಿಕೆಯ ಅಂಕಣಕಾರರಾಗಿದ್ದ ಶ್ರೀ ಯು. ಬಿ. ರಾವ್ ಅವರು ಎಂ. ವಿ. ಕಾಮತರಿಗೆ ಫ್ರೀ ಪ್ರೆಸ್ ಜರ್ನಲ್‌ನಲ್ಲಿ ವರದಿಗಾರರಾಗಿ ಕೆಲಸ ಕೊಡಿಸಿದರು. ಇವರಲ್ಲಿನ ಬರವಣಿಗೆಗೆ ಸ್ಫೂರ್ತಿಯಾಗಿ ಬೆಂಗಳೂರಿನಿಂದ ಹೊರಡುವ ಪತ್ರಿಕೆ ಮೈಸ್ ಇಂಡಿಯಾದಲ್ಲಿ ಇವರ ಮೊತ್ತ ಮೊದಲ ಲೇಖನ ಒಂದು ಪ್ರಕಟಗೊಂಡಿತು. ಇದು ಎಂ. ವಿ. ಕಾಮತರಲ್ಲಿನ ಕವಿತ್ವವನ್ನು ಜಾಗ್ರತಗೊಳಿಸಿದ್ದು ಮಾತ್ರವಲ್ಲ ಭವಿಷ್ಯದಲ್ಲಿ ನಂಬಿಕೆಯನ್ನೂ ಮೂಡಿಸಿತ್ತು. ಆದರೆ ಈ ಬೆಂಗಳೂರಿನ ಪತ್ರಿಕೆ ಮುಂಬೈಯಲ್ಲಿ ಇವರ ಜೀವನೋಪಾಯಕ್ಕೆ ಸಾಕಾಗುವಷ್ಟು ಆದಾಯ ತರುತ್ತಿರಲಿಲ್ಲ. ಹಾಗಾಗಿ ಫ್ರೀ ಪ್ರೆಸ್ ಜರ್ನಲ್‌ನ ನಾಲ್ವರು ವರದಿಗಾರರಲ್ಲಿ ಒಬ್ಬರಾಗಿ ಇವರು ಸೇರಿದರು.

ವೃತ್ತಿ ಜೀವನದ ಮೊತ್ತ ಮೊದಲ ಅನುಭವವನ್ನು ಎಂ.ವಿ.ಕಾಮತರು ಈಗಲೂ ಜ್ಞಾಪಿಸುತ್ತಾರೆ. ಹಾರ್ಬರ್ಟ್ ಹೂವರ್ ಅಮೇರಿಕದ ಮಾಜೀ ಅಧ್ಯಕ್ಷ ಮುಂಬಯಿಗೆ ಬರುವವರಿದ್ದರು. ಅವರ ಬಗ್ಗೆ ಪತ್ರಿಕಾ ವರದಿ ಬರೆಯುವ ಕೆಲಸ ಎಂ. ವಿ. ಕಾಮತರ ಪಾಲಿಗಾಯ್ತು. ಏನೇನೂ ಅನುಭವವಿಲ್ಲದ ತರುಣನಿಗೆ ಇಂತಹ ಜವಾಬ್ದಾರಿಯುತ ಕೆಲಸ ಇವರಿಗೋ ಅಮೇರಿಕದ ಅಧ್ಯಕ್ಷರ ಭಾರತದ ವಾಸ್ತವದ ಸ್ಥಳ. ಟೀರ್ಸೆ ಡ್ರೈವರನ ಸಹಾಯದಿಂದ ಸೆಕ್ರೆಟೇರಿಯೆಟ್‌ಗೆ ತಲಪಿದಾಗ ಅಲ್ಲಿ ಭಾರತ ಸರಕಾರದೊಂದಿಗೆ ಅದಾಗಲೇ ಸಮಾಲೋಚನೆ ನಡೆಸಿದ ಅಧ್ಯಕ್ಷ ಹೂವರ್ ಸಭೆ ಮುಗಿಸಿ ಹೊರಡುವವರಿದ್ದರು. ನಿಯಮಾನುಸರಣೆ, ಯಥಾಚಾರವರ್ತನೆ- ಇವುಗಳ ಬಗ್ಗೆ ಏನೇನೂ ತಿಳಿಯದ ಎಂ. ವಿ. ಕಾಮತರು ನೇರವಾಗಿ ಅವರತ್ತ ಹಾರಿ ಭಾರತ ಪ್ರವಾಸದ ಉದ್ದೇಶ ಕೇಳುತ್ತಾರೆ. ಭಾರತಕ್ಕೆ ಅಮೇರಿಕದಿಂದ ಆಹಾರ ಧಾನ್ಯಗಳ ರಫ್ತಿನ ಬಗ್ಗೆ ಮಾತುಕತೆ ಆಡಲು ತಾನು ಬಂದಿರುವುದಾಗಿ ಅವರು ಹೇಳಿ, ಈ ಯುವಕನ ಧೀರತೆಗೆ ಮೆಚ್ಚಿ ಮರೆಯಾಗುತ್ತಾರೆ. ಈ ಒಂದು ಘಟನೆ ತನ್ನ ಜೀವನದಲ್ಲಿ ಎಷ್ಟು ಮಹತ್ವದ ಪಾತ್ರ ವಹಿಸುತ್ತದೆ ಎಂದು ತಿಳಿಯದೆ ಕೇವಲ ಬಾಲಿಶ ಕುತೂಹಲದಿಂದ ಹಾಗೂ ಅಧಿಕ ಪ್ರಸಂಗಿತನದ ಫಲ ಕಾಮತರ ಜೀವನದ ಪಥವನ್ನೇ ಬದಲಾಯಿಸಿತು. ಹೂವರನ ಭೇಟಿಗಾಗಿ ಕಾದುನಿಂತ ಸಾಲು ಸಾಲು ಹಿರಿಯ ಅನು ಭವೀ ವರದಿಗಾರರ ಎದುರು ಈ ಯುವಕನ ಧೈರ್ಯ ಅಸಾಮಾನ್ಯವಾಗಿತ್ತು. ಅಸಾ ಧಾರಣವಾಗಿತ್ತು.

"ಮಾಧವಾ. ನೀನು ಇಲ್ಲೇನು ಮಾಡುತ್ತಿರುವೆ ?"

"ನಾನೊಬ್ಬ ವರದಿಗಾರ"

"ಎಂದಿನಿಂದ ?"

"ಕಳೆದ ಎರಡು ಗಂಟೆಗಳಿಂದ ಮಾತ್ರ"

–ಈ ಘಟನೆ ಅವರ ವರದಿಗಾರನ ವೃತ್ತಿಯನ್ನು ಭದ್ರಪಡಿಸಿತ್ತು. ಮಾತ್ರವಲ್ಲ "ನನಗೆ ಮಾರ್ಗದರ್ಶನವೇ ಇರಲಿಲ್ಲ. ಹೀಮ ಮುಂದಿಲ್ಲದ ಅಂತರ್ ಪಿಶಾಚಿಯಂತೆ ಅಲೆಯುತ್ತಿದ್ದೆ. ಸಂಪಾದಕರ ಕೈಯಲ್ಲೇ ನನ್ನ ಜುಟ್ಟು ಇತ್ತು" ಎಂತಹ ಆತ್ಮ ಕಥನ ! ಈ ಘಟನೆಯು ಬಳಿಕ ಎಂ. ವಿ. ಕಾಮತರಿಗೆ ಹಿರಿಯ ವರದಿಗಾರರಾಗಿ ಬಡ್ತಿ ದೊರೆಯಿತು.

ದೇಶ ಸೇವೆಯಲ್ಲಿ ಎಂ. ವಿ. ಕಾಮತರಿಗೆ ಅಚಲ ವಿಶ್ವಾಸ. ಇವರು ಸೈಂಟ್ ಕ್ಸೇವಿಯರ್ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗಲೇ ಕಾಲೇಜಿನ ಸೋಶಿಯಲ್ ಸರ್ವಿಸ್ ಲೀಗ್‌ನ ಸದಸ್ಯರಾಗಿದ್ದರು. ಸಮಾಜ ಸೇವೆಗೆ ಅವಕಾಶ ಹುಡುಕುತ್ತಿದ್ದ ಕಾಲವದು. ಮುಂಬಯಿಯ ಧಾರಾವಿ ಕೊಳಚೆ ಪ್ರದೇಶದ ವಯಸ್ಕರಿಗೆ ಶಿಕ್ಷಣ ನೀಡುವ ಕೆಲಸ ಎಂ. ವಿ. ಕಾಮತರ ಪಾಲಿಗೆ ಬಂದಿತು. ಆದರೆ ಪ್ರಥಮ ಚುಂಬನಂ ದಂತ ಭಗ್ನಂ–ಪರಿಸ್ಥಿತಿ. ವಯಸ್ಕರಿಗೆ ಆಸಕ್ತಿಯೇ ಇಲ್ಲದೆ ಗುರುಗಳ ಉತ್ಸಾಹ ಕಮರುವಂತಾಯಿತು.

ಆ ನಂತರ, ದಾದರ್‌ನ ಕುರುಡರ ಶಾಲೆಯಲ್ಲಿ ಮೂರು ವರ್ಷ ಅಧ್ಯಾಪಕರಾಗಿ ದುಡಿದರು. ಇಷ್ಟರಲ್ಲೇ ಪತ್ರಿಕಾ ವರದಿಗಾರರಾಗಿ ಕೆಲಸ ಸಿಕ್ಕಿ ಸಂಜೆಯ ಬಿಡುವೂ ಇಲ್ಲದಾಯಿತು. ಆದರೂ ರಾತ್ರಿ ಹೊತ್ತು ಮುಂಬಯಿ ಪೋರ್ಟ್‌ನ ಉಚಿತ ರಾತ್ರಿ ಪ್ರೌಢಶಾಲೆಯಲ್ಲಿ ಅಧ್ಯಾಪಕರಾಗಿ ಕೆಲಸ ಮಾಡುತ್ತಿದ್ದರು. ಇವರ ಹಲವು ವಿದ್ಯಾರ್ಥಿಗಳು ಇಂದು ಡಾಕ್ಟರರಾಗಿ, ಕೈಗಾರಿಕೋದ್ಯಮಿಗಳಾಗಿ ತಮ್ಮ ಈ ಬಾಲ ವಿದ್ಯಾ ಗುರುಗಳನ್ನು ಕೃತಜ್ಞತೆಯಿಂದ ಸ್ಮರಿಸುತ್ತಾರೆ.

ಇದೇ ಶಾಲೆಯ ಮೂವರು ಅಧ್ಯಾಪಕರು ಹಾಗೂ ಎಂ. ವಿ. ಕಾಮತ್ ಅವರು ಸೇರಿ 1947ರಲ್ಲಿ 'ನುಡಿ ಕೂಟ' ಎನ್ನುವ ಕನ್ನಡ ಪತ್ರಿಕೆಯನ್ನು ಪ್ರಾರಂಭಿಸಿದರು. ಮುಂಬಯಿಯ ಕನ್ನಡಿಗರಿಗೊಂದು ಔತಣವಿದು. ವ್ಯಾಸರಾಯ ಬಲ್ಲಾಳ, ಶಿವರಾಮ ಕಾರಂತರೇ ಮೊದಲಾದ ಲೇಖಕರ ನಿರ್ಭಿಡೆಯ ಬರವಣಿಗೆಗೆ ಈ ಪತ್ರಿಕೆ ಒಂದು ವೇದಿಕೆಯಾಯಿತು. ಇದು ಮುಂಬಯಿಯಲ್ಲಿ ಮಾತ್ರವಲ್ಲ ಕರ್ನಾಟಕದಲ್ಲೂ ಯುವಲೇಖಕರ ಮುಖವಾಣಿಯಾಗಿ ಮೆರೆಯಿತು. 1947ರಲ್ಲಿ ಕಾಸರಗೋಡಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಬಗ್ಗೆ ಹಾಗೂ ನವೀನ ಕೃತಿಗಳ ಬಗ್ಗೆ ವಿಮರ್ಶೆಯನ್ನು 'ನುಡಿ ಕೂಟ' ಪ್ರಕಟಿಸಿ ತನ್ನ ಪ್ರಸಿದ್ಧಿಯನ್ನು ಬೆಳೆಸಿತು. ಕನ್ನಡಿಗರಿಗೆ ನವೀನತಮ

ವೆನಿಸಿದ ವ್ಯಂಗ್ಯಚಿತ್ರ (ಕಾರ್ಟೂನ್) ನುಡಿ ಕೂಟದಲ್ಲಿತ್ತು. ಇದೊಂದು 'ನಿರ್ಭಯ ವಾಣಿ' ಎಂದೇ ಖ್ಯಾತಿ ಪಡೆದಿತ್ತು. ಸ್ವಾತಂತ್ರ್ಯ ಕಾಲದಲ್ಲೇ ಹುಟ್ಟಿದ್ದು ಇದರ ಖ್ಯಾತಿಗೆ ಮತ್ತೂ ಒಂದು ಕಾರಣವಾಯಿತು. ಫ್ರೀ ಪ್ರೆಸ್ ಜರ್ನಲ್‌ನ ಬಾತ್ಮೀದಾರ ಹಾಗೂ ನುಡಿ ಕೂಟದ ವಿಶೇಷ ವರದಿಗಾರರಾದ ಎಂ. ವಿ. ಕಾಮತರಿಗೆ ಬಿಡುವಿಲ್ಲದ ಕೆಲಸ. ಜಾಹಿರಾತುಗಳು ಸಿಗುವುದೇ ದುಸ್ತರವಾಗಿ ಈ ಪತ್ರಿಕೆಯ ಆರ್ಥಿಕ ಸ್ಥಿತಿ ತೊಂದರೆಗೀಡಾಗಿತ್ತು. ಅಂತೂ 1950 ರಲ್ಲಿ ಫ್ರೀ ಪ್ರೆಸ್ ಜರ್ನಲ್ ಗುಂಪಿನ ಇಂಡಿಯನ್ ನೇಶನಲ್ ಪ್ರೆಸ್ ಬೇನ್ನರ್‌ನವರು ಈ ಪತ್ರಿಕೆಯನ್ನು ಖರೀದಿಸಲು ಮುಂದೆ ಬಂದರು. ತಾವೇ ಹುಟ್ಟಿಸಿದ ಅಚ್ಚಿಯ ಕೂಸನ್ನು ಇತರರಿಗೆ ಮಾರುವ ನೋವಿನ ಅನುಭವ. ಸದಾನಂದರು ಅದರ ಹೊಸ ಯಜಮಾನರಾದರೂ ಸಂಪಾದಕರ ತಂಡ ಮೊದಲಿನದೇ ಇತ್ತು.

ಈಗಾಗಲೇ ಎಂ. ವಿ. ಕಾಮತರ ಪ್ರಸಿದ್ಧಿ ಗಗನಕ್ಕೇರಿತ್ತು. ಜನಶಕ್ತಿ, ಪ್ರವಾಸಿ ಮೊದಲಾದ ಗುಜರಾತಿ ಪತ್ರಿಕೆಯಲ್ಲೂ ಭಾಷಾಂತರಗೊಂಡು ಇವರ ಲೇಖನಗಳು ಪ್ರಕಟಗೊಳ್ಳುತ್ತಿದ್ದವು. ಆ ಕಾಲದಲ್ಲೇ ಗಾಂಧೀಜಿಯನ್ನು ನಾಥುರಾಂ ಗೋಡ್ಸೆ ಗುಂಡಿಕ್ಕಿ ಕೊಂದದ್ದು. ರಾಷ್ಟ್ರಪಿತನ ಈ ಅಮಾನುಷ ಹತ್ಯೆ ಜನಮನದಲ್ಲಿ ವಿಪರೀತ ದ್ವೇಷ ಭಾವನೆ ಹುಟ್ಟಿಸಿತ್ತು. ಇಂತಹ ವಾತಾವರಣದಲ್ಲಿ ಅವರ ಬಗ್ಗೆ ಫ್ರೀ ಪ್ರೆಸ್ ಜರ್ನಲ್‌ನಲ್ಲಿ ನ್ಯಾಯಾಲಯದ ದೃಶ್ಯ ಮತ್ತು ಅಂತಿಮ ದಿನದ ಆತನ ನಡವಳಿಕೆಯ ಬಗ್ಗೆ ಬರೆದ ಸಂಪಾದಕೀಯ ಮರಾಠಿಯ'ನವಶಕ್ತಿ'ಹಾಗೂ'ಫ್ರೀಪ್ರೆಸ್ ಜರ್ನಲ್'ನಲ್ಲಿ ಮುಖಪುಟದಲ್ಲಿ ಕಾಣಿಸಿಕೊಂಡಿತು. ಜನಮನದಲ್ಲಿ ಬೇರೂರಿದ್ದ ದ್ವೇಷ ಭಾವನೆಯನ್ನು ಉದಾತ್ತ ಭಾವನೆಯನ್ನಾಗಿ ತಿರುಗಿಸಿದ ಲೇಖನಕ್ಕೆ ಓದುಗರ ಶ್ಲಾಘನೆಯ ಸುರಿಮಳೆ. ಸ್ವತಃ ಗೋಡ್ಸೆಯೇ ಪತ್ರಿಕಾಲಯಕ್ಕೆ ಬರೆದು ಪ್ರಕಟಗೊಂಡ ಆ ಅದ್ಭುತ ಲೇಖನ ಹಾಗೂ ಅದನ್ನು ಬರೆದಾತನ ಬಗ್ಗೆ ವಿಚಾರಿಸಿದ್ದ. ಇದಲ್ಲವೇ ಲೇಖನಿಯ ಶಕ್ತಿ.

ಸ್ವಾತಂತ್ರ ಪೂರ್ವದಲ್ಲಿ ಆಗ ಇನ್ನೂ ಮಂತ್ರಿಗಳು ಈಗಿನಂತೆ ಹೆಲಿಕಾಪ್ಟರ್, ವಿಮಾನಗಳಲ್ಲಿ ಹೋಗದೆ ರೈಲಿನಲ್ಲೇ ಪಯಣಿಸಬೇಕಾಗಿತ್ತು. ಜವಾಹರಲಾಲ್ ನೆಹರು ರೈಲಿನಲ್ಲಿ ಪಯಣಿಸುವುದನ್ನು ತಿಳಿದ ಎಂ. ವಿ. ಕಾಮತ್ ಹಾಗೂ ಅವರ ಮಿತ್ರರೊಬ್ಬರು ಇವರೊಂದಿಗೆ ಸಂದರ್ಶನ ಪಡೆಯಲು ಅವರಿಗೆ ತಿಳಿಯದೇನೇ ಹಿಂದಿನ ಬಾಗಿಲಿನಿಂದ ಅವರ ಬೋಗಿಯೊಳಗೆ ನುಗ್ಗಿಬಿಟ್ಟರು. ಚಂಡಿ ಹಿಡಿದ ಮಳೆಯಲ್ಲಿ ನೆನೆದು ಮುದ್ದೆಯಾದ ಈ ಇಬ್ಬರು ಯುವಕರನ್ನು ನೋಡಿಯೂ ನೋಡದಂತೆ ನೆಹರುರವರು ವರ್ತಿಸುತ್ತಿದ್ದರು. ಇವರಿಗೋ ಸಾಹಸಕೇಳಿ. ತಮ್ಮ ಅನುಭವವನ್ನು ನಾಳಿನ ಪತ್ರಿಕೆಯ ಮುಖಪುಟದಲ್ಲಿ ರಂಗಾಗಿ ಬರೆಯುವ ಹುಮ್ಮಸ್ಸು. ಉಪೇಕ್ಷೆ

ಯಿಂದ ಇವರಿಬ್ಬರನ್ನೂ ನೋಡಿದರೂ ಗುಂಪು, ಪೋಲಿಸರ ಕಣ್ಣು ತಪ್ಪಿಸಿ ಬಂದ ಇವರ ಧೀರತೆಗೆ ಸಹರುರರವರಿಗೆ ಮೆಚ್ಚುಗೆ ಸೂಸದೆ ಇರಲು ಸಾಧ್ಯವಾಗಲೇ ಇಲ್ಲ. ಪಂಡಿತ್‌ಜಿಯೊಡನೆ ತಮ್ಮ ವೈಯಕ್ತಿಕ ಅನುಭವ ಮಾರುದಿನದ ಪತ್ರಿಕೆಯಲ್ಲಿ ಮೂಡಿ ಬಂದಾಗ ಈ ಯುವಕರ ಸಾಹಸಕೇಳಿಗೆ ತಲೆಬಾಗದವರು ಯಾರೂ ಇರಲಿಲ್ಲ.

ಇದೇ ರೀತಿಯ ಅನುಭವ ಮತ್ತೂ ಒಮ್ಮೆ ಎಂ.ವಿ. ಕಾಮತರಿಗಾಗಿತ್ತು. ಇವರು ಫ್ರೀ ಪ್ರೆಸ್ ಜರ್ನಲ್‌ನ ವರದಿಗಾರರಾಗಿದ್ದ ಕಾಲವದು. ಮುಂಬಯಿ ಪ್ರದೇಶ ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿಗಳಾಗಿದ್ದ ಸಲೀಂ ಅವರು ಎಂ. ವಿ. ಕಾಮತರಿಗೆ ದೂರವಾಣಿಯ ಮೂಲಕ ತೀರಾ ವೈಯಕ್ತಿಕವಾಗಿ ಗಾಂಧೀಜಿಯವರ ಆ ದಿನದ ರೈಲು ಪ್ರಯಾಣದ ಬಗ್ಗೆ ತಿಳಿಸುತ್ತಾರೆ. ಗಾಂಧೀಜಿಯ ಭೇಟಿಗಾಗಿ ರೈಲು ನಿಲ್ದಾಣಕ್ಕೆ ಓಡಿದರೆ ರಾತ್ರಿ ಘಂಟೆ ಹನ್ನೆರಡು ಕಳೆದರೂ ರೈಲಿನ ಪತ್ತೆ ಇಲ್ಲ. ಮಾತ್ರವಲ್ಲ ಇವರಂತೆಯೇ ಗಾಂಧೀಜಿಯ ಪಯಣದ ವಿಷಯ ತಿಳಿದು ಬಂದ ಇತರ ಮೂವರು ವರದಿಗಾರರು ಕೂಡಾ ಹಾದಿ ಕಾದು ಬಸವಳಿದಿದ್ದರು. ಆದರೂ ಗಾಂಧೀಜಿಯವರನ್ನು ಕಂಡು ಭೇಟಿಯಾಗಿ ಮರುದಿನದ ಪತ್ರಿಕೆಯಲ್ಲಿ ಬಿಸಿ ಬಿಸಿ ಸುದ್ದಿ ಬಿತ್ತರಿಸುವ ಬಯಕೆ ಈ ನಾಲ್ವರಿಗೂ. ಅಂತೂ ಹೊತ್ತು ಮೀರಿದ ಮೇಲೆ ರೈಲೇನೋ ಬಂದಿತು ಗಾಢ ನಿದ್ದೆಯಲ್ಲಿದ್ದ ಗಾಂಧೀಜಿಯವರನ್ನು ಹೊತ್ತುಕೊಂಡು. ಸರಿ, ಅವರು ಏಳುವಂತಿಲ್ಲ, ಇವರು ಎಬ್ಬಿಸುವಂತಿಲ್ಲ. ಕಾದದ್ದೆಲ್ಲ ನೀರ ಮೇಲಿನ ಹೋಮ. ಆದರೆ ಅದೃಷ್ಟ ತೀರಾ ಕೆಟ್ಟದ್ದಿರಲಿಲ್ಲ. ಗಾಂಧೀಜಿಯವರ ಜೊತೆ ಪಯಣಿಸುತ್ತಿದ್ದವರು ಲಂಡನ್‌ನ ನ್ಯೂಸ್ ಕ್ರಾನಿಕಲ್‌ನ ವರದಿಗಾರ. ಅವರಿಗೂ ಮುಂಬೈಯಲ್ಲೇ ಇಳಿಯಬೇಕಾಗಿತ್ತು. ಮಾತ್ರವಲ್ಲ ರಾಶಿಗಟ್ಟಲೆ ಸಾಮಾನುಗಳು ಬೇರೆ. ಆಕಾಶ ಸೋರುವಂತಿದ್ದ ಮಳೆಯಲ್ಲಿ ಆತನ ಸಾಮಾನುಗಳನ್ನು ತಲೆಯ ಮೇಲೆ ಹೊತ್ತು ಈ ನಾಲ್ಕು ಮಂದಿಯೂ ಅವನನ್ನು ಹೋಟೇಲಿಗೆ ತಲಪಿಸಿದರು. ಬೆಳ್ಳಂ ಬೆಳಗ್ಗೆ ಎಂ. ವಿ. ಕಾಮತರಿಗೊಂದು ಫೋನ್ ಕರೆ–ಗಾಂಧೀಜಿ ಪಯಣಿಸುತ್ತಿದ್ದ ರೈಲಿಗೆ ಘಾಟಿನಲ್ಲಿ ಅಪಘಾತವಾಯಿತೆಂದೂ ದೈವಬಲದಿಂದ ಅವರ ಪ್ರಾಣಕ್ಕೇನೂ ಅಪಾಯ ವಿಲ್ಲವೆಂದು. ಸರಿ. ಎಂ. ವಿ. ಕಾಮತರು ಅಲ್ಲಿಗೆ ದೌಡಾಯಿಸಿದರು. ಬೇಕಾದ ಛಾಯಚಿತ್ರ ವಿಷಯಗಳನ್ನೆಲ್ಲ ಸಂಗ್ರಹಿಸಿದರು. ಅದೇ ದಿನ ಎ.ಐ.ಸಿ.ಸಿ. ಬಹಿರಂಗ ಅಧಿವೇಶನ ಮುಂಬಯಿಯಲ್ಲಿದ್ದುದು ಮಾತ್ರವಲ್ಲ ಸಚಿತ್ರವಾಗಿ ಬಂದ ಗಾಂಧೀಜಿ ಯವರನ್ನು ಕುರಿತ ಲೇಖನ ಎಲ್ಲರನ್ನೂ ದಂಗುಬಡಿಸಿತ್ತು.

ಈ ಕತೆ ಇಲ್ಲಿಗೇ ಮುಕ್ತಾಯವಾಗಲಿಲ್ಲ. ಇವರ ಫ್ರೀ ಪ್ರೆಸ್ ಜರ್ನಲ್‌ನ ಸಂಪಾದಕರ ವಿಳಾಸಕ್ಕೆ ನಾಗಪುರದ ಫಾರ್ಸಿ ಮಹಿಳೆಯನೊಬ್ಬ ಮೂರು ಸಾವಿರ

ರೂಪಾಯಿಗಳ ಚೆಕ್ಕೊಂದನ್ನು ಕಳುಹಿಸಿಕೊಟ್ಟು. ಗಾಂಧೀಜಿಯ ಪ್ರಾಣವನ್ನುಳಿಸಿದ ಆ ಮಹಾನ್ ಡ್ರೈವರನಿಗೆ ಕೊಡಬೇಕೆಂದು ಬರೆದಿದ್ದ.

1959ರಲ್ಲಿ ಟೈಮ್ಸ್ ಆಫ್ ಇಂಡಿಯಾದ ಬಾತ್ಮೀದಾರರಾಗಿ ಜರ್ಮನಿಯ ಬಾನ್‌ಗೆ ಎಂ. ವಿ. ಕಾಮತರವರು ರವಾನಿಸಲ್ಪಟ್ಟರು. ಅಲ್ಲಿನ ತಮ್ಮ ನವೀನ ಆಫೀಸನ್ನು ಸುವ್ಯವಸ್ಥಿತಗೊಳಿಸಲು ಇವರು ಮೇಜು, ಕುರ್ಚಿಗಳನ್ನು ಖರೀದಿಸಿ ಅವನ್ನು ತಮ್ಮ ನವೀನ ಕಛೇರಿಗೆ ಸಾಗಿಸುವ ಪರಿ ತಿಳಿಯದೆ ವಿಹ್ವಲರಾಗಿರಲು ಅಜಾನುಬಾಹು ಬ್ರಿಟಿಷನೊಬ್ಬ ಅನಾಯಾಸವಾಗಿ ಅವನ್ನು ತಲೆಯ ಮೇಲೆ ಹೊತ್ತು ಇವರ ಕೋಣೆಗೆ ಸಾಗಿಸಿದ. ಹದಿನೈದು ವರುಷಗಳ ಹಿಂದಿನ ಘಟನೆ ಎಂ. ವಿ. ಕಾಮತರ ಸ್ಮೃತಿಪಟಲದಲ್ಲಿ ಮೂಡಿಬರುತ್ತದೆ. ಗಾಂಧೀಜಿಯವರ ರೈಲು ಪಯಣಿಗ 'ನ್ಯೂಸ್ ಕ್ರಾನಿಕಲ್'ನ ಶ್ರೀ ನೋರ್ಮನ್‌ರವರ ಸಾಮಾನುಗಳನ್ನು ಜಡಿಮಳೆಯಲ್ಲಿ ಇದೇ ರೀತಿ ತಲೆಯ ಮೇಲೆ ಹೊತ್ತು ಅವರು ನಡೆದಿದ್ದರು. ಈ ಘಟನೆಯನ್ನು ನೆನಪಿಸಿ ಅದನ್ನು ಆ ಬ್ರಿಟಿಷನಿಗೆ ಹೇಳಲು–ಆತ ತಾನೇ ಆ ವ್ಯಕ್ತಿಯೆಂದು ತನ್ನನ್ನು ಪರಿಚಯಿಸುತ್ತಾನೆ. ಎಂತಹ ಕಾಕತಾಳೀಯ ಘಟನೆ! ಜಗತ್ತು ಎಷ್ಟೊಂದು ಚಿಕ್ಕದು!!

ತಮ್ಮ ಮನಸ್ಸನ್ನು ಅತಿಯಾಗಿ ಕಲಕಿದ ಘಟನೆಯನ್ನು ಎಂ. ವಿ. ಕಾಮತರು ಈಗಲೂ ಜ್ಞಾಪಿಸುತ್ತಾರೆ. ಡಾ॥ ಎ. ವಿ. ಬಾಳಿಗಾ ಮುಂಬಯಿಯ ಪ್ರಖ್ಯಾತ ಸರ್ಜನ್. ಅವರು ಸೋವಿಯತ್ ಯೂನಿಯನ್ ಹಾಗೂ ಯುರೋಪ್ ಪ್ರವಾಸಕ್ಕೆ ಹೊರಟಾಗ ತಮ್ಮ ಆಸ್ಪತ್ರೆಯನ್ನು ನೋಡಿಕೊಳ್ಳಲು ಮಿಸೆಸ್ ಫಾತಿಮಾ ಇಸ್ಮೈಲ್ ಎಂಬಾಕೆಗೆ ಒಪ್ಪಿಸುತ್ತಾರೆ. ಫಾತಿಮಾ ಒಬ್ಬ ಸಮಾಜ ಸೇವಕಿ. ಆಕೆಯ ಕತೆಯೇ ದಾರುಣ. ಫಾತಿಮಾಳ ಚಿಕ್ಕ ಮಗು ಪೋಲಿಯೋಗೆ ಆಹುತಿಯಾಗಿತ್ತು. ತಮ್ಮ ಮಗಳಲ್ಲಿನ ಊನ ಅವರಿಗೆ ಸಮಾಜ ಸೇವೆಯತ್ತ ಪ್ರೇರೇಪಿಸಿತ್ತು. ಡಾ॥ಬಾಳಿಗಾರವರ ಆಸ್ಪತ್ರೆಯನ್ನು ಆಕೆ ಪೋಲಿಯೋ ಮಕ್ಕಳ ಫಿಜಿಯೋಥೆರಪಿಗಾಗಿ ಉಪಯೋಗಿಸುತ್ತಿದ್ದಳು. ಈಕೆಯನ್ನು ಭೇಟಿಯಾಗಿ ಮಾತನಾಡಿದ ಎಂ. ವಿ. ಕಾಮತರಿಗೆ ಈಕೆಯ ಬಗ್ಗೆ ಸವಿವರವಾದ ಭಾವಚಿತ್ರ ಸಮೇತ ಲೇಖನ ಬರೆಯದೆ ಇರಲು ಸಾಧ್ಯವಾಗಲೇ ಇಲ್ಲ. 'ಇಲ್ಲಸ್ಟ್ರೇಟೆಡ್ ವೀಕ್ಲಿ'ಯಲ್ಲಿ ಪ್ರಕಟವಾದ ಈ ಲೇಖನಕ್ಕೆ ಪೋಲಿಯೋ ಪೀಡಿತ ಮಕ್ಕಳ ತಾಯ್ತಂದೆಯರಿಂದ ಅಮೋಘ ಪ್ರತಿಕ್ರಿಯೆ ಲಭಿಸಿತು. ಭಾರತದ ಸಿಸ್ಟರ್ ಕೆನ್ನಿ ಎಂದು ಎಂ.ವಿ. ಕಾಮತರು ಈಕೆಯನ್ನು ಹೊಗಳಿ ಬರೆದದ್ದು ಎರಡು ಸಲ್ಲದ ಮಾತು. ಲೇಖನ ಪ್ರಕಟವಾದ ಬಳಿಕ ಫಾತಿಮಾಗೆ ಬಿಡುವಿಲ್ಲದ ಕೆಲಸ. ತಮ್ಮ ಸಮಾಜ ಸೇವಾ ಕಾರ್ಯಕ್ರಮಗಳಲ್ಲಿ ಅವರು ತಮ್ಮನ್ನು ಇನ್ನಷ್ಟು ತೊಡಗಿಸಬೇಕಾಯಿತು. ಇದಾದ ಹಲವು ವರುಷಗಳ ಬಳಿಕ ಎಂ. ವಿ. ಕಾಮತರವರು

ನ್ಯೂಯಾರ್ಕ್‌ನ ಚಿತ್ರಣಕೂಟ ಒಂದರಲ್ಲಿ ಮಿಸ್ ಇಸ್ಮೈಲ್ ಹೆಸರಿನ ತರುಣಿಯನ್ನು ಭೇಟಿಯಾಗುತ್ತಾರೆ. ಈಕೆಯ ಹೆಸರಿನಿಂದಲೇ ಎಂ. ವಿ. ಕಾಮತರಿಗೆ ಮಿಸೆಸ್ ಫಾತಿಮಾ ಇಸ್ಮೈಲ್ ಹಾಗೂ ಆಕೆಯ ಪೋಲಿಯೋ ಮಗುವಿನ ನೆನಪಾಗುತ್ತದೆ. ಈ ಬಗ್ಗೆ ಆಕೆಯನ್ನು ವಿಚಾರಿಸಲು ತಾನೇ ಆ ಪೋಲಿಯೋ ಪೀಡಿತ ಮಗು ಎಂದೂ ತಾಯಿಯ ಸಹನೆ ತನ್ನ ರೋಗ ವಾಸಿಗೆ ಕಾರಣವಾಗಿದೆ ಎಂದೂ ಹೇಳಿದಾಗ ಎಂ. ವಿ. ಕಾಮತರು ಒಪ್ಪಲೇಬೇಕಾಗುತ್ತದೆ. 'children grow only adults dont !' ಎಷ್ಟೊಂದು ಸತ್ಯದ ಮಾತು !

ಎಂ.ವಿ. ಕಾಮತ್ ಅವರ ಮೇಲಧಿಕಾರಿ ಶ್ರೀ ಸದಾನಂದ ಅವರು ಶೀಘ್ರಕೋಪಿ. ಆದರೆ ಅಷ್ಟೇ ವಿನಯಿ ಕೂಡಾ. ಅವರು ಎಂ. ವಿ. ಕಾಮತರನ್ನು ಕೆಲವೊಮ್ಮೆ ಸಿಕ್ಕಾಪಟ್ಟೆ ಬೈದುಬಿಟ್ಟಾಗ ಇವರು ರಾಜಿನಾಮೆ ಎಸೆದದ್ದೂ ಇದೆ. ಅದೇ ಕ್ಷಣದಲ್ಲಿ ಅವರು ಎಂ. ವಿ. ಕಾಮತರ ಮನೆಗೆ ಓಡಿಬಂದು ಆಲಿಂಗಿಸಿ ಅವರನ್ನು ಎಳೆದೊಯ್ದುದ್ದೂ ಇದೆ. ಎಂ. ವಿ. ಕಾಮತರನ್ನು ಕಂಡರೆ ಅವರಿಗೆ ಇಂತಹ ನಿರ್ವ್ಯಾಜ್ಯ ಪ್ರೀತಿ–ಕಾಳಜಿ. ಇವರನ್ನು ಒತ್ತಾಯ ಪೂರ್ವಕವಾಗಿ ತೊಂಬತ್ತು ದಿನಗಳ ರಜೆಯ ಮೇಲೆ, ಮೂರು ತಿಂಗಳ ಸಂಬಳ ನೀಡಿ ಕಳುಹಿಸಿದ್ದನ್ನು ಎಂ. ವಿ. ಕಾಮತರು ಈಗಲೂ ಜ್ಞಾಪಿಸುತ್ತಾರೆ. ಈ ಕಾಲದಲ್ಲೇ (1953ರಲ್ಲಿ) ಎಂ. ವಿ. ಕಾಮತರು ತಮ್ಮ ಪೂರ್ಣ ಭಾರತ ಯಾತ್ರೆಯನ್ನು ಮುಗಿಸಿದ್ದು.

ಎಂ. ವಿ. ಕಾಮತ್, ಸದಾನಂದ, ನಾಡಕರ್ಣಿ ಮೊದಲಾದ ಘಟಾನುಘಟಿಗಳಿದ್ದರೂ ಫ್ರೀ ಪ್ರೆಸ್ ಜರ್ನಲ್‌ನ ಆರ್ಥಿಕ ಸ್ಥಿತಿ ದೀನಾವಸ್ಥೆಯಲ್ಲಿದ್ದಿತು. ಈ ಪತ್ರಿಕೆಯನ್ನು ಮಾರುವ ಸನ್ನಾಹದಲ್ಲಿದ್ದರು ಸದಾನಂದ. ಡಾ|| ಎ. ವಿ. ಬಾಳಿಗಾ, ಎ. ಜಿ. ನಾಯರ್ ಹಾಗೂ ಕಲ್ಕತ್ತನ ಆರ್ಥಿಕ ಸಹಾಯಕ ಜೈಕುಮಾರ್‌ಕರ್‌ನಾನಿ ಈ ಮೂವರು ಈ ಪತ್ರಿಕೆಯನ್ನು ಕೊಳ್ಳಲು ಮುಂದೆ ಬಂದರು. ಹೆತ್ತ ತಾಯಿ ಮಗುವನ್ನು ತಾನೇ ಮಾರಾಟ ಮಾಡಲು ಹೊರಟಂತಿತ್ತು ಸದಾನಂದರ ಮನೋಸ್ಥಿತಿ. "ದೇಶದಾದ್ಯಂತ 'ಫ್ರೀ ಪ್ರೆಸ್ ಜರ್ನಲ್' ಪತ್ರಿಕೆಯ ಪ್ರತಿಷ್ಠೆಯನ್ನು ಸದಾನಂದರು ಬೆಳಗಿಸಿದ್ದರು. ಅದೊಂದು ಆಂದೋಲನಕಾರಿ ಪತ್ರಿಕೆಯಾಗಿ ಜನಮಾನಸವನ್ನು ಗೆದ್ದು ಖ್ಯಾತಿಗಳಿಸಿದ್ದರೂ ಆರ್ಥಿಕವಾಗಿ ಅದು ಎಂದೂ ಉನ್ನತ ಮಟ್ಟವನ್ನು ಏರಲೇ ಇಲ್ಲ" ಎನ್ನುತ್ತಾರೆ ಎಂ. ವಿ ಕಾಮತ್ ವಿಷಾದದಿಂದ. ಯಾವ ವ್ಯಕ್ತಿಯೊಬ್ಬ ಈ ವಯಸ್ಸಿನಲ್ಲಿ ತನ್ನ ವೃತ್ತಿ ಜೀವನದ ತುತ್ತತುದಿಗೆ ಏರಬೇಕಾಗಿತ್ತೋ ಅದೇ ವಯಸ್ಸಿನಲ್ಲಿ ಸದಾನಂದ ಕಂಗಾಲಾಗಿದ್ದರು. ಆಗಿನ್ನೂ ಅವರಿಗೆ 54ರ ಹರಯ.

ತಮ್ಮ ಮೂರು ತಿಂಗಳ ಭಾರತ ದರ್ಶನ ಮುಗಿಸಿ ಬಂದ ಎಂ. ವಿ. ಕಾಮತರು ಫ್ರೀ ಪ್ರೆಸ್ ಜರ್ನಲ್‌ನ ಮುಖ್ಯ ಕಚೇರಿಗೆ ಹೊರಟರು. ಸದಾನಂದರು

ಕತ್ತಲೆಯ ಆ ಕಿರುಮೆಟ್ಟಿಲಲ್ಲಿ ಇಳಿದು ಬರುತ್ತಿದ್ದರು. ಸದಾನಂದರನ್ನು ಕಂಡವರೇ ಎಂ. ವಿ. ಕಾಮತ್ ತಾವೂ ಕೂಡ ಅವರೊಂದಿಗೆ ಇಳಿದು ಬರಲು "ನನ್ನೊಂದಿಗೆ ಇಳಿದು ಬರದಿರಿ, ಮೇಲೇರಿ, ಉನ್ನತ ಸ್ಥಿತಿಗೇರಿ" ಅವರು ಎಂದು ಆದೇಶಿಸಿದರು. ಇದು ಹೃದಯ ಮುರಿದ ಮನುಷ್ಯನೊಬ್ಬನ ಅಹವಾಲು. ಇನ್ನು ಅವರನ್ನು ಹಿಂಬಾಲಿಸಿ ಮಾತನಾಡುವುದರಲ್ಲಿ ಅರ್ಥವಿರಲಿಲ್ಲ. ಎಂ. ವಿ. ಕಾಮತರು ಅವರ ಮಾತನ್ನು ಮನ್ನಿಸಿ ಫ್ರೀ ಪ್ರೆಸ್ ಜರ್ನಲ್‌ನ ಕಛೇರಿಗೇ ಮರಳಿ ಹೋದರು. ಅದೇ ಕೊನೆ. ಮತ್ತೊಂದೂ ಸದಾನಂದ ಹಾಗೂ ಎಂ. ವಿ. ಕಾಮತರ ಭೇಟಿಯಾಗಲೇ ಇಲ್ಲ. ಅಷ್ಟರಲ್ಲೇ ಅವರ ಮರಣದ ವಾರ್ತೆ ಕೇಳಿ ಬಂದಿತು. ಬಾತ್ಮೀದಾರರಾಗಿ ಎಂ. ವಿ. ಕಾಮತರ ಜೀವನವನ್ನು ಭದ್ರಪಡಿಸಿ, ಪತ್ರಿಕೋದ್ಯಮದಲ್ಲಿ ಒಂದು ಸ್ಥಿರ ನೆಲೆಯನ್ನು ಗಳಿಸಿಕೊಟ್ಟ ವ್ಯಕ್ತಿ ಸದಾನಂದ ತಾವೇ ಇಲ್ಲವಾದರು. 'ಭಾರತ ಜ್ಯೋತಿ, ಬುಲೆಟಿನ್, ಫ್ರೀ ಪ್ರೆಸ್ ಜರ್ನಲ್' ಈ ಮೂರು ಪತ್ರಿಕೆಗಳನ್ನು ನೋಡಿಕೊಳ್ಳುವವರು ಯಾರು ? ಫ್ರೀ ಪ್ರೆಸ್ ಜರ್ನಲ್‌ಗೆ ಸದ್ಯಕ್ಕಂತೂ ಎಂ. ವಿ. ಕಾಮತರೇ ಸಂಪಾದಕರಾದರು. ಆದರೆ ಸದಾನಂದರನ್ನು ಕಳೆದುಕೊಂಡ ಮೇಲೆ ಎಂ. ವಿ. ಕಾಮತರ ಆಸಕ್ತಿಯೇ ಕಮರಿ ಹೋಗಿತ್ತು. ಮೇಲಾಗಿ ಪಿ. ವಿ. ಬಾಳಿಗಾ ಅವರ ಜೊತೆ ಇವರ ವಿಚಾರ ಎಂದೂ ಒಮ್ಮತಕ್ಕೆ ಬರುತ್ತಿರಲಿಲ್ಲ. ಈ ಹೊತ್ತಿಗಾಗಲೇ ಪ್ರೆಸ್ ಟ್ರಸ್ಟ್ ಆಫ್ ಇಂಡಿಯಾದ ಜನರಲ್ ಮ್ಯಾನೇಜರ್ ಡಿ. ವಿ. ವಾಗ್ಲೆ ಎಂ. ವಿ. ಕಾಮತರಿಗೆ ಪಿ.ಟಿ.ಐ. ಬಾತ್ಮೀದಾರರಾಗಿ ಅಮೇರಿಕಾಗೆ ಹೋಗುವ ಅವಕಾಶವನ್ನು ಒದಗಿಸಿ ಕೊಡುತ್ತಾರೆ.

ಎಂ. ವಿ. ಕಾಮತರ ಅನುಭವ ಭಂಡಾರ ಬೆಳೆದದ್ದೇ ವಿದೇಶದಲ್ಲಿ, ಅವರು ನೆಲೆಸಿದ ಮೊದಲ ಮೂರು ವರ್ಷಗಳಲ್ಲಿ 1955–58. ಈ ಮೂರು ವರ್ಷ ಅವರು ವಿದೇಶದ ಗಣ್ಯರೆಲ್ಲರ ಅತಿಥಿಯಾಗಿದ್ದರು. ಲಿಸ್ಬನ್‌ಗೆ ಭೇಟಿಕೊಡುವುದು ಇವರ ಬಹುದಿನದ ಆಕಾಂಕ್ಷೆ. ಭಾರತೀಯರಿಗೆ ಅಲ್ಲಿ ಪ್ರವೇಶ ನಿಷಿದ್ಧ. ಅದರಲ್ಲೂ ಒಬ್ಬ ಪತ್ರಿಕಾ ವರದಿಗಾರ ಅಂದರೆ ಅದು ಖಂಡಿತ ನಿಷಿದ್ಧ. ಇವರ ಬೇಡಿಕೆಯನ್ನು ನ್ಯೂಯಾರ್ಕ್‌ನ ಸರಕಾರ ನಿರಾಕರಿಸಿತ್ತು. ಇದಕ್ಕೆ ಒಂದು ಅವಕಾಶವೂ ಸದ್ಯದಲ್ಲೇ ಒದಗಿ ಬಂದಿತ್ತು. ಯುರೋಪಿನ ವಿಮಾನ ಲಿಸ್ಬನ್ (ಪೋರ್ಚುಗಲ್) ಮೂಲಕವೇ ಹೋಗಬೇಕಾಗಿತ್ತು. ಸರಿ. ಸಿಕ್ಕಿದಷ್ಟು ಲಾಭ. ಒಂದೆರಡು ಗಂಟೆಗಳಷ್ಟು ಕಾಲ ಸಿಕ್ಕಿದರೆ ಲಿಸ್ಬನ್ ಸುತ್ತಾಡಿ ಅಲ್ಲಿನ ಸ್ಥಿತಿಗತಿಯ ಬಗ್ಗೆ ತಿಳಿಯುವ ಆಕಾಂಕ್ಷೆ. ಅಂತೂ ಹೊರಟದ್ದೂ ಆಯಿತು. ಲಿಸ್ಬನ್ ತಲುಪಿದಾಗ ಬೆಳ್ಳಂ ಬೆಳಗ್ಗೆ. ರಕ್ಷಕದಳದವರು ಇವರ ಪಾಸ್‌ಪೋರ್ಟ್ ನೋಡಿ ಹಿಡಿದೇ ಬಿಟ್ಟರು. ಭಾರತೀಯ ಪತ್ರಿಕೋದ್ಯಮಿಗೆ ಬಹಿಷ್ಕಾರವನ್ನು ಹಾಕಿದರು. ಇವರ ಬೇಡಿಕೆಗೆ ಅವರ ಕಿವಿ ಕಿವುಡಾಗಿತ್ತು. ಲಿಸ್ಬನ್‌ನಲ್ಲಿ ತಿರುಗಾಡಲು ಅವಕಾಶವನ್ನು ನೀಡದೆ ಇಬ್ಬರು ಪೋಲೀಸರ

ಯನ್ನು 'ಪುನರಪಿ ಜನನಂ' ಕೃತಿಯಾಗಿ ಪ್ರಕಟಿಸಿದರು. ಬಾನ್‌ನಲ್ಲಿ ಎಂ. ವಿ. ಕಾಮತರ ಹಿಂದಣ ಅನುಭವಗಳಿಗೆ ಬೆಲೆಯೇ ಇರಲಿಲ್ಲ. ಅವರು ತಮ್ಮನ್ನು ತಾವು ಮತ್ತೊಮ್ಮೆ ಸಾಧಿಸಿ ತೋರಿಸಬೇಕಾಗಿತ್ತು. ಆಗ ಅವರಿಗೆ ಗೆಳೆಯ ಚಂದ್ರಚೂಡನ ಮಾತು ನಿಜವೆನಿಸಿತ್ತು. ಅಲ್ಲಿ ಮಾರ್ಗದರ್ಶಕರೆಂದು ಕರೆಸಿಕೊಳ್ಳುವವರು ಯಾರೂ ಇರಲಿಲ್ಲ. ಇವರ ಹಳೆಯ ಸ್ನೇಹಿತ ಹಿಂದುಸ್ತಾನ್ ಟೈಮ್ಸ್‌ನ ಮುಂಬಯಿ ವರದಿಗಾರ ಚಂದ್ರಚೂಡ ಯಾವಾಗಲೂ ಹೇಳುತ್ತಿದ್ದ – "ಕನಿಷ್ಟ ಪಕ್ಷ ಮೂರು ಪತ್ರಿಕೆಗಳು ತನ್ನನ್ನು ಸ್ವೀಕರಿಸುವವರೆಗೆ ಒಬ್ಬ ವರದಿಗಾರ ತಾನು ಅತ್ಯುತ್ತಮನೆಂದುಕೊಳ್ಳಬಾರದು. ಇಲ್ಲಿ ವರದಿಗಾರರೆಲ್ಲ ತಮ್ಮನ್ನು ತಾವು ಸಾಧಿಸಿ ತೋರಿಸಬೇಕಾದ್ದು ಅವಶ್ಯ. ಒಬ್ಬ ವರದಿಗಾರ ಏಳು ವರ್ಷಗಳಿಗೊಮ್ಮೆಯಾದರೂ ತನ್ನ ವೃತ್ತಿ ಬದಲಾಯಿಸುತ್ತಲಿರಬೇಕು. ಚಂದ್ರಚೂಡನ ಈ ಅನುಭವದ ಮಾತುಗಳನ್ನು ಎಂ. ವಿ. ಕಾಮತರು ಅಪ್ರಯತ್ನವಾಗಿಯೇ ಇಲ್ಲಿ ಒಪ್ಪಿಕೊಂಡರು.

ಇವರ ಯುರೋಪ್ ದೇಶದ ಏಳು ವರ್ಷಗಳ ವಾಸ್ತವ್ಯದಲ್ಲಿ ಸ್ವಂತ ಟೆಲೆಕ್ಸ್ ವ್ಯವಸ್ಥೆಯೂ ಇರಲಿಲ್ಲ. ತಾವೇ ಬರೆದ ವಾರ್ತೆಗಳನ್ನು ಹೊತ್ತು ಟೆಲಿಗ್ರಾಫ್ ಕಚೇರಿಗೆ ಚಳಿ–ಮಳೆ ಎನ್ನದೆ ಹೋಗಬೇಕಾಗಿದ್ದ ಪರಿಸ್ಥಿತಿ. ಆದರೆ ಇವರು ವಾಶಿಂಗ್ಟನ್‌ಗೆ ಬಂದಾಗ ಪರಿಸ್ಥಿತಿ ಸುಧಾರಿಸಿತ್ತು. ಇವರಿದ್ದ ಕಟ್ಟಡದಲ್ಲೇ ಎರಡು ಟೆಲೆಕ್ಸ್ ವ್ಯವಸ್ಥೆ ಇತ್ತು. ಅಪೋಲೋ ದೃಶ್ಯಗಳನ್ನು ಇವರು ತಮ್ಮ ಮನೆಯ ದೂರದರ್ಶನದಲ್ಲೇ ಚಿತ್ರೀಕರಿಸಿದರು–ಕೇಪ್ ಕನವೆರಲ್‌ಗೆ ಹೋಗುವ ಬದಲು. ಆಧುನಿಕ ತಂತ್ರಜ್ಞಾನ, ಪತ್ರಿಕೋದ್ಯಮದ ಕೆಲಸವನ್ನು ಎಷ್ಟರ ಮಟ್ಟಿಗೆ ಕಡಿಮೆ ಮಾಡಿದೆ ಅನ್ನುವುದಕ್ಕೆ ಇದೇ ಸಾಕ್ಷಿ.

ಅಣುಶಕ್ತಿಗಳ ಶಾಂತಿಯುತ ಬಳಕೆ–ಈ ಸಮ್ಮೇಳನವೊಂದು ಅಮೇರಿಕದಲ್ಲಿ ಜರುಗಲಿತ್ತು. ಹೋಮಿ ಭಾಭಾ ಈ ಸಮಾರಂಭದ ಸಭಾಧ್ಯಕ್ಷ. ಪ್ರೆಸ್ಸನ್ನು ಪ್ರತಿನಿಧೀಕರಿಸಿ ಎಂ. ವಿ. ಕಾಮತರು ಅವರನ್ನು ಭೇಟಿಯಾಗಿದ್ದರು. ಒಬ್ಬ ಸಾಮಾನ್ಯ ಪತ್ರಕರ್ತನಂತೆ ಪ್ರಶ್ನೆಗಳ ಸುರಿಮಳೆ ಎಸೆಯುವ ನಿಧಾನವಾಗಿ ಹೋಮಿ ಭಾಭಾರನ್ನು ಅರಿತುಕೊಂಡ ಎಂ. ವಿ. ಕಾಮತರ ಉದ್ಯೋಗ ಚತುರತೆ ಭಾಭಾರನ್ನು ದಂಗು ಬಡಿಸಿತ್ತು. ಇದಾದ ಕೆಲವೇ ದಿನಗಳಲ್ಲಿ ಎಂ. ವಿ. ಕಾಮತ್ ತಮ್ಮ ಮನೆಯ ವರಾಂಡದಲ್ಲಿ ಕುಳಿತು ದೂರದಲ್ಲಿ ಕಾಣುವ ಮಾಂಟ್ ಬ್ಲಾಂಕ್ ಶ್ರೇಣಿಯ ದೃಶ್ಯವನ್ನು ಸವಿಯುತ್ತಿದ್ದರು. ಇದ್ದಕ್ಕಿದ್ದಂತೆಯೇ ಸನಿಹದಿಂದಲೇ ವಾಕಿಂಗ್‌ಗೆ ಹೊರಟ ಭಾಭಾರು ಕಾಮತರನ್ನು ಕಂಡೊಡನೆ ಅವರನ್ನು ಗುರುತಿಸಿ ಆತ್ಮೀಯತೆಯಿಂದ ಮಾತನಾಡಿಸಿದರು. ಮಾಂಟ್ ಬ್ಲಾಂಕ್ ಪರ್ವತ ಶ್ರೇಣಿಯ ಸೌಂದರ್ಯವನ್ನು

ವರ್ಣಿಸಿ ಜೀವನದಲ್ಲೊಂದು ಬಾರಿ ಅಲ್ಲಿಗೆ ಹೋಗಲೇ ಬೇಕು ಎಂದು ಕಾಮತರನ್ನು ಒತ್ತಾಯಿಸಿದರು.

ಇದಾದ ಕೆಲವೇ ತಿಂಗಳಲ್ಲಿ ಏರ್-ಇಂಡಿಯಾ ವಿಮಾನ ಜಿನೇವಾ ನಿಲ್ದಾಣದಲ್ಲಿ ತಂಗಬೇಕಾದ್ದು ಮೌಂಟ್ ಬ್ಲಾಂಕ್ ಪರ್ವತಶ್ರೇಣಿಗೆ ಅಪ್ಪಳಿಸಿ ಅಪಘಾತಕ್ಕೀಡಾಗುತ್ತದೆ. ಮೃತಪಟ್ಟ ಪ್ರಯಾಣಿಕರಲ್ಲಿ ಹೋಮಿ ಭಾಭಾ ಕೂಡಾ ಒಬ್ಬರಾಗಿದ್ದರು. ಅವರು ಮುಂಬಯಿಯಿಂದ ರೋಂ ಮೂಲಕ ಯೂರೋಪ್‌ಗೆ ಹೋಗುವವರಿದ್ದರು. ಸುದ್ದಿ ತಿಳಿದವರೇ ಕಾಮತರು ಅಪಘಾತದ ಸ್ಥಳಕ್ಕೆ ಧಾವಿಸಿದರು. ಕೆಲವೇ ತಿಂಗಳ ಹಿಂದೆ ಕಾಮತರನ್ನು ಆ ಉನ್ನತ ಪರ್ವತಕ್ಕೆ ಹೋಗುವಂತೆ ಸ್ವತಃ ಬಾಬಾರೇ ಒತ್ತಾಯಿಸಿದ್ದರು. ಈಗ ತಾವೇ ಅಲ್ಲಿದ್ದರು ಮಾತ್ರ ಮೃತ್ಯುವಶರಾಗಿ! ವಿಧಿಯ ವಿರಾಟ ನೃತ್ಯಕ್ಕೆ ಭಾರತದ ಏಕಮಾತ್ರ ಶ್ರೇಷ್ಠ ಅಣುವಿಜ್ಞಾನಿ ಬಲಿಯಾಗಬೇಕಾಯಿತು. ಇವರು ಕಾಮತರಿಗೊಂದು ಅಳಿಯದ ನೆನಪು ಮಾತ್ರ ಆದರು.

ತಮ್ಮನ್ನು ಅತ್ಯಂತ ದುಃಖಕ್ಕೆ ಈಡುಮಾಡಿದ ಈ ಅನುಭವವನ್ನು ಎಂ. ವಿ. ಕಾಮತರು—ದಿ ವೈಟ್ ಮೌಂಟನ್ ಅನ್ನುವ ಶೀರ್ಷಿಕೆಯಲ್ಲಿ 'ಟೈಮ್ಸ್ ಆಫ್ ಇಂಡಿಯಾ'ದ ಭಾನುವಾರದ ಪುರವಣಿಯಲ್ಲಿ ಪ್ರಕಟಿಸಿದರು. ಕಾಲ ಎಲ್ಲವನ್ನೂ ಮರೆಸುತ್ತದೆ. ಕಾಮತರನ್ನು ನಿದ್ರಾಹೀನರನ್ನಾಗಿ ಮಾಡಿದ ಈ ಹೃದಯ ವಿದ್ರಾವಕ ಘಟನೆ ಕಾಲನ ಗತಿಯಲ್ಲಿ ಮಸುಕಾಯಿತು. 1979ರಲ್ಲಿ ಜಮ್‌ಶೆಡ್ ಜೆ. ಭಾಭಾ ಎಂ. ವಿ. ಕಾಮತರನ್ನು ಭೇಟಿಯಾದರು. ಅವರು ಹೋಮಿ ಭಾಭಾರ ಸಹೋದರರು ಮಾತ್ರವಲ್ಲ ಅಂದೆ ಟೈಮ್ಸ್‌ನಲ್ಲಿ ಪ್ರಕಟವಾದ ಭಾಭಾ ಕುರಿತ ಲೇಖನ ಓದಿದವರು ಕೂಡಾ. ಈ ಲೇಖನವನ್ನು ಅವರ ಮಾತೋಶ್ರೀ ಫ್ರೇಮ್ ಹಾಕಿಟ್ಟು, ಓದಿ, ಈಗಲೂ ಕಣ್ಣೀರ್ಗರೆಯುವ ಬಗ್ಗೆ ತಿಳಿಸಿ, ತಾವೇ ಬರೆದ–ಹೋಮಿ ಭಾಭಾ ಆ್ಯಸ್ ಆರ್ಟಿಸ್ಟ್ ಅನ್ನುವ ಕೃತಿಯನ್ನು ತಮ್ಮ ಸ್ವಂತ ಬರಹಗಳಲ್ಲಿ ಬರೆದು ಕಾಮತರಿಗೆ ನೀಡಿದರು.

For my friend Madhav Kamath
In memory of my brother Homi
and of my Mother, who never ceased
until her death to read with tears in her eyes
Your beautiful and moving description
of Homi gazing on mount Blanc

—Jamshed Bhabha

ಒಬ್ಬ ಶ್ರೇಷ್ಠ ವ್ಯಕ್ತಿಯಿಂದ ಎಂತಹ ಕಾಣಿಕೆ ! ಎಂ. ವಿ. ಕಾಮತರ ಲೇಖನಿಗೆ ಇರುವ ಶಕ್ತಿಯಾದರೂ ಎಂತಹದು ! ಜನಮನವನ್ನು ತಲುಪಿ ಹೃದಯವನ್ನು ಆರ್ದ್ರಗೊಳಿಸುವ ತಾಕತ್ತು ಅದಕ್ಕಿತ್ತು.

ಸಂಪಾದಕೀಯ ; ಕಿರು ಲೇಖನ : ಗಾಸಿಪ್ ಕಾಲಂಗಳು : ಪ್ರತಿಬಿಂಬ ; ಸಂಪಾದಕರ ಪತ್ರ ; ಘಟನಾವಳಿ ; ಓದುಗರ ಪತ್ರಗಳಿಗೆ ಸಂಪಾದಕರ ಉತ್ತರ–ಹೀಗೆ ದಿನವೊಂದಕ್ಕೆ ಸರಾಸರಿ 5000 ಶಬ್ದಗಳು ಕಾಮತರಿಂದ ಹೊರಡುತ್ತಿದ್ದವು. ಜಗತ್ತಿನ ಮೂಲೆಮೂಲೆಯ ಜನರನ್ನು ತಲುಪಲು ಇದ್ದ ಏಕಮಾತ್ರ ಸಾಧನ ಬರವಣಿಗೆ. ಅದು ಅವರಿಗೆ ಸಿದ್ಧಿಸಿತ್ತು. ಎಷ್ಟೋ ಬಾರಿ ಇವರ ಸಹಪಾಠಿಗಳು ಎಸ್‌ಒಎಸ್ ಕಳುಹಿಸಿ– "ದಯವಿಟ್ಟು ಐನೂರು ಶಬ್ದಗಳನ್ನು ಕಳುಹಿಸಿಕೊಡುವಿರಾ ?" ಎಂದು ಕೇಳಿದ್ದೂ ಇದೆ. ಪತ್ರಿಕೆಯವರಿಗೋ ಕಾಮತರೊಬ್ಬರು ಆಪತ್‌ಬಂಧು. ಎಸ್‌ಒಎಸ್‌ಗೆ ಇವರದ್ದು ಎಂದೂ ಕೂಡಲೇ ಪ್ರತಿಕ್ರಿಯೆ. ಟೈಪ್‌ರೈಟರ್ ಮುಂದೆ ಕುಳಿತು ಕಟಕಟ ಕುಟ್ಟುತ್ತಾ ಕೆಲಸ ಪೂರೈಸುತ್ತಿದ್ದರು. ಅವರದೇ ಮಾತುಗಳಲ್ಲಿ- "I went to my type-writer to hammer out my wisdom of the moment." ಇವರ ಬರವಣಿಗೆಗೆ ಒಂದು ಮೋಡಿ ಇದೆ, ಒಂದು ಶಕ್ತಿ ಇದೆ. ಒಬ್ಬ ಸಾಮಾನ್ಯ ಓದುಗನಿಗೆ ಒಬ್ಬ ವಿದೇಶೀ ಬಾತ್ಮೀದಾರನ ಕಾರ್ಯಬಾಹುಳ್ಯದ, ಕೆಲಸದ ಒತ್ತಡದ ಪರಿಚಯ ವಿರಲಾರದು. ಎಷ್ಟೋ ಬಾರಿ ಹಲವು ವಿಷಯಗಳ ಬಗ್ಗೆ ಆತ ಜಾಣನಾಗಿ ವ್ಯವಹರಿಸಬೇಕಾಗುತ್ತದೆ. ವ್ಯವಹಾರಜ್ಞಾನದ ಕೊರತೆ ಇದೆ ಎಂದು ತಿಳಿದರಂತೂ ಆತನ ಅನರ್ಹತೆಯನ್ನು ಸಾರ್ವಜನಿಕವಾಗಿ ಆತನೇ ಒಪ್ಪಿಕೊಂಡಂತೆ.

ಎಂ. ವಿ. ಕಾಮತರು ಏಳು ವರ್ಷಗಳ ವೃತ್ತಿ ಜೀವನ ಮುಗಿಸಿ ಮರಳಿ ಭಾರತಕ್ಕೆ ಬಂದರು, ವಿವಾಹಿತ ಬ್ರಹ್ಮಚಾರಿಯಾಗಿ. ಎಲಿನೋರ್ ಪೇನ್ ಇಲ್ಲಿನ ಹವಾಮಾನ, ಪರಿಸ್ಥಿತಿಗಳಿಗೆ ಒಗ್ಗಲಿಲ್ಲ. ಮತ್ತೊಮ್ಮೆ ಏಕಾಂತತೆ, ಬದುಕಿನ ಏಕತಾನತೆ. ಎಂ. ವಿ. ಕಾಮತರಿಗೆ ಮರಳಿ ವಾಷಿಂಗ್ಟನ್‌ಗೆ ಹೋಗುವ ಇಚ್ಛೆ ಪ್ರಬಲವಾಯಿತು. 1968ರ ಜೂನ್ 26 ರಂದು ಎಂ. ವಿ. ಕಾಮತರ ಪಾಲಿಗೆ ಅತ್ಯಂತ ಸಂತಸದ ದಿನ. ಆರ್. ಕೆ. ಹಜಾರಿಯಾರವರು ಕಾಮತರನ್ನು ಕರೆದು ಅವಿರೋಧವಾಗಿ ಅವರನ್ನು ವಾಷಿಂಗ್ಟನ್‌ಗೆ ಕಳುಹಿಸಲು ಬೋರ್ಡ್ ನಿರ್ಧರಿಸಿದ ಬಗ್ಗೆ ತಿಳಿಸಿದರು. 'ಅತ್ಯಂತ ಹಿರಿಯ ಹುದ್ದೆಗೆ ಅತ್ಯಂತ ಕಿರಿಯ ವ್ಯಕ್ತಿ' ಎಂದು ಯೂನಿಯನ್‌ನವರ ಆಕ್ಷೇಪವೂ ಇತ್ತು. ಆದರೆ ಇವರ ಆಯ್ಕೆ ಬಹುಜನರ ಅಪೇಕ್ಷೆಯ ಮೇರೆಗೆ ಎಂಬುದು ಅವರೆಲ್ಲರಿಗೆ ತಿಳಿಯದ ಇದ್ದ ಸತ್ಯ.

ವಾಷಿಂಗ್ಟನ್‌ನಲ್ಲಿ ಬಾತ್ಮೀದಾರನಾಗುವುದು ಕಾಮತರ ಬಹುದಿನದ ಕನಸು. ಅಂತೂ 1969ರ ಏಪ್ರಿಲ್ 3 ರಂದು ಮಗದೊಮ್ಮೆ ಅವರ [illegible] ಕನಸು

ನನಸಾಗಿತ್ತು. ಅದೂ ಇಪ್ಪತ್ತು ವರುಷಗಳ ಸುದೀರ್ಘ ಕಾಲಾನಂತರ. ಇವರ ದಿಶೆಯನ್ನು ಬದಲಿಸುವ ಒಂದು ಘಟನೆ ಅಲ್ಲಿ ಜರುಗಿತು. ಅಮೇರಿಕದ ಅಧ್ಯಕ್ಷ ನಿಕ್ಸನ್‌ರವರು ವಾಶಿಂಗ್ಟನ್‌ಗೆ ಭೇಟಿ ಇತ್ತಾಗ ಆಕಾಶವಾಣಿಯವರು ಕಾಮತರನ್ನು ಅವರ ಸಂದರ್ಶನಕ್ಕಾಗಿ ಕಳುಹಿಸಿದ್ದರು. ವಾಶಿಂಗ್ಟನ್ ವಿಮಾನ ನಿಲ್ದಾಣದಲ್ಲಿ ತಮ್ಮ ಜೀವಕ್ಕಿಂತ ದೊಡ್ಡದಾದ ಪೋರ್ಟೇಬಲ್ ರೆಕೋರ್ಡರ್ ಹಿಡಿದು ಕಾಮತರು ಸುಸ್ತಾಗಿದ್ದರು. ಇವರ ಸಂಕಷ್ಟವನ್ನು ಕಡೆಗಣ್ಣಿನಿಂದ ಗಮನಿಸುತ್ತಿದ್ದ ನಿಕ್ಸನ್‌ರವರೇ ನೇರವಾಗಿ ಇವರಲ್ಲಿಗೆ ಓಡಿ ಬಂದು 'ನಾನು ಆ ರೆಕೋರ್ಡರ್ ಅನ್ನು ಹೊತ್ತುಕೊಳ್ಳಲೇ'? ಎಂದು ಕೇಳಿಯೇ ಬಿಟ್ಟರು. ಕ್ಷಣಕಾಲ ಗಲಿಬಿಲಿಗೊಂಡರೂ ಸುಧಾರಿಸಿಕೊಂಡು ಕಾಮತರು 'ಧನ್ಯವಾದ' ಎಂದರು. ಆ ಕೂಡಲೇ ರಕ್ಷಕ ದಳದ ಸಿಬ್ಬಂದಿಗಳೆಲ್ಲರೂ ಈ ದೃಶ್ಯ ಕಂಡು ಓಡೋಡಿ ಬಂದು ಸಹಾಯ ಹಸ್ತ ನೀಡುವವರೇ. ಈ ಅನುಭವವನ್ನು ಕಾಮತರು ಟೈಮ್ಸ್ ಆಫ್ ಇಂಡಿಯಾಗೆ ಬರೆದೇ ಬಿಟ್ಟರು. ಮತ್ತೆ ಕೇಳಬೇಕೇ ? ಓದುಗರಿಂದ ಪತ್ರಗಳ ಸುರಿಮಳೆ, ಧನ್ಯತಾಭಾವ. ಇದು ಅವರ ವಾಶಿಂಗ್ಟನ್‌ನ ಜೀವನಕ್ಕೆ ಮತ್ತೊಮ್ಮೆ ಅಮೋಘ ಪರಿಚಯವನ್ನು ನೀಡಿತು.

ಸಾಟರ್‌ಡೇ ರಿವ್ಯು ಪತ್ರಿಕೆಯ ವಾಶಿಂಗ್ಟನ್‌ನ ಲೇಖಕನೊಬ್ಬ ಎಲ್ಲಾ ವಿದೇಶೀ ಬಾತ್ಮೀದಾರರನ್ನು ಸಂಪರ್ಕಿಸಿ ಎಂ. ವಿ. ಕಾಮತರ ಬಗ್ಗೆ ಹೀಗೆ ಬರೆದ– "He read too much and knew too little of America." ಹಾಗೆ ನೋಡಿದರೆ ಕಾಮತರು ಅಮೇರಿಕದ ಬಹುಭಾಗಗಳನ್ನು ಸಂಪರ್ಕಿಸಿದ್ದರು. ಹಲವು ಸಂಪಾದಕರನ್ನು ಭೇಟಿಯಾಗಿದ್ದರು. ಪ್ರಖ್ಯಾತ ತಾರೆಯರು, ಮುಖ್ಯಮಂತ್ರಿಗಳು. ಪತ್ರಿಕೋದ್ಯಮಿಗಳು, ವಿಜ್ಞಾನಿಗಳು–ಹೀಗೆ ಸಮಾಜದ ಪ್ರತೀ ರಂಗದಲ್ಲಿರುವವರ ಜೀವನವನ್ನು ಹಾಸುಹೊಕ್ಕಾಗಿ ನೋಡಿದ್ದರು. ಹಲವು ವಿಶ್ವವಿದ್ಯಾನಿಲಯಗಳಲ್ಲಿ ಇವರ ಭಾಷಣಗಳಿದ್ದುವು. ಸೆಮಿನಾರ್‌ಗಳಲ್ಲೂ ಇವರು ಭಾಗವಹಿಸಿದವರು. ಆದರೂ ಹುರುಳಿಲ್ಲದ ಮೇಲಿನ ಆರೋಪಕ್ಕೆ ಕಾಮತರು ಮನಸ್ಸು ಕೆಡಿಸಿಕೊಳ್ಳಲಿಲ್ಲ. ಒಬ್ಬ ಭಾರತೀಯ ಸಂಜಾತ ಅಮೇರಿಕವನ್ನು ತಿಳಿದುಕೊಂಡಿಲ್ಲ ಅಂದರೆ ಅದರಲ್ಲಿ ಅಪಮಾನವಾಗುವಂತಹುದು ಏನೂ ಇರಲಿಲ್ಲ. ಆದರೆ ಒಬ್ಬ ಭಾರತೀಯ ಸಂಜಾತ ಭಾರತವನ್ನೇ ಅರಿತಿಲ್ಲ ಅಂದರೆ ಮಾತ್ರ ಅದು ಖಂಡಿತ ಅಪಮಾನಕರ. ಎಲ್ಲರನ್ನೂ ಮೆಚ್ಚಿಸುವುದು ಎಂತಹ ಮೂರ್ಖತನ !! ಇನ್ನೊಬ್ಬರನ್ನು ಕುರಿತು ಮಾಡುವ ಆರೋಪ ಆ ವ್ಯಕ್ತಿಯ ಮಾನಸಿಕ ಮಟ್ಟವನ್ನು ತೋರಿಸುತ್ತವೆ ಅಷ್ಟೆ.

ಯು.ಎಸ್. ಬೈ ಸೆಂಟೆನ್ನಿಯಲ್ ಎಂಬ ಕೃತಿಯನ್ನು ಎಂ.ವಿ. ಕಾಮತರು ಭಾರತದಲ್ಲಿ ತುರ್ತು ಪರಿಸ್ಥಿತಿ ಜಾರಿಯಲ್ಲಿದ್ದಾಗಲೇ ಬರೆದಿದ್ದರು. ಸ್ವತಃ ಆಗಿನ ಪ್ರಧಾನಿ ದಿ॥ ಇಂದಿರಾಗಾಂಧಿಯವರೇ ಅದಕ್ಕೆ ಮುನ್ನುಡಿಯನ್ನು ಬರೆದಿದ್ದರು. ಈ

ಕೃತಿ ಭಾರತ–ಅಮೇರಿಕ ರಾಷ್ಟ್ರಗಳ ಮೈತ್ರಿಯ ದ್ಯೋತಕವಾಗಿದೆ. ಇದರ ಬಿಡುಗಡೆ 1976ರ ಜುಲೈ 21 ರಂದು ಭಾರತೀಯ ರಾಯಭಾರಿ ಕಚೇರಿಯಲ್ಲಿ ಶ್ರೇಷ್ಠ ಗುಣ ಮಟ್ಟದ ಸಮಾರಂಭವಾಗಿ ಆಚರಿಸಲ್ಪಟ್ಟಿತು. ವಿದೇಶೀ ಗಣ್ಯರೆಲ್ಲ ಬಹುಸಂಖ್ಯೆಯಲ್ಲಿ ನೆರೆದಿದ್ದ ಈ ಸಮಾರಂಭ ಸ್ಮರಣೀಯವಾಗಿತ್ತು ಮಾತ್ರವಲ್ಲ, ಅಮೇರಿಕಾದ ಜನತೆಗೇ ಕಾಮತರಿಂದ ಬಹು ದೊಡ್ಡ ಕಾಣಿಕೆ ಎಂಬುದು ಎರಡಿಲ್ಲದ ಮಾತು. ಇನ್ನೂರು ವರುಷಗಳ ಇಂಡೋ ಅಮೇರಿಕನ್ ಬಾಂಧವ್ಯ ಕೃತಿರೂಪದಲ್ಲಿಳಿಸಿದ್ದೇ ವೈಯಕ್ತಿಕವಾಗಿ ಅದೇ ತಮಗೆ ಸಂದ ಗೌರವ ಎಂದು ಕಾಮತರು ತಿಳಿದುಕೊಂಡಿದ್ದರು.

ಭಾರತೀಯ ವಿದ್ಯಾರ್ಥಿಯೊಬ್ಬ ತನ್ನ ಸಹಪಾಠಿ ಪ್ರತಿಭಾವಂತ ವಿದ್ಯಾರ್ಥಿಯೊಬ್ಬಳನ್ನು ಮತ್ಸರದಿಂದ ಕೊಲೆಗೈದ. ಇದನ್ನು ತಿಳಿದ ಕುಶವಂತ್ ಸಿಂಗ್ ಅವರು ಎಂ. ವಿ. ಕಾಮತರಿಗೊಂದು ತಂತಿ ಕಳುಹಿಸಿದರು ಈ ಬಗ್ಗೆ ಸವಿವರವಾದ ಲೇಖನವನ್ನು ತತ್‌ಕ್ಷಣ ಕಳುಹಿಸಿಕೊಡುವಂತೆ. ಒಬ್ಬ ವಿದೇಶೀ ಬಾತ್ಮೀದಾರರಿಗೆ ಇಂತಹ ತುರ್ತು ಕರೆಗಳು ಸಾಮಾನ್ಯ. ಆಲೋಚಿಸಲು ಇಲ್ಲಿ ಸಮಯವಿಲ್ಲ. ಕಾರ್ಯ ಪ್ರವೃತ್ತರಾಗಲೇಬೇಕು. ಆತನ ಮೆದುಳೇ ಆತನ ಶಕ್ತಿ. ಸರಿ, ಎಂ. ವಿ. ಕಾಮತರು ಸಾನ್ ಫ್ರಾನ್ಸಿಸ್ಕೋದಲ್ಲಿನ ಇಂಡಿಯನ್ ಕೌನ್ಸಿಲ್ ಜನರಲ್‌ರನ್ನು ಭೇಟಿಯಾಗಿ ಈ ಕೊಲೆ ಪ್ರಕರಣವನ್ನು ವಿವರವಾಗಿ ಅಭ್ಯಸಿಸಿದರು. ಅಲ್ಲಿಂದ ಅವರಿಗೆ ಪೋಲಿಸ್ ಅಧಿಕಾರಿ ಹಾಗೂ ಕೊಲೆಗೈದ ವ್ಯಕ್ತಿ ಪ್ರೋಗ್ರಾಮರ್‌ನ ವಿಳಾಸ, ಆತನ ಮಿತ್ರರ ವಿಳಾಸ ಮೊದಲಾದವುಗಳು ಲಭ್ಯವಾಗಿ ಕೇವಲ ಇಪ್ಪತ್ನಾಲ್ಕು ಗಂಟೆಯಲ್ಲಿ ಕೊಲೆ ಪ್ರಕರಣ ಸಂಪೂರ್ಣವಾಗಿ ತಂತಿಯಿಂದ ಹೊರಹೊಮ್ಮಿತು. ಅದು ಕುಶವಂತಸಿಂಗರನ್ನು ತಲುಪಿ 'ಇಲ್ಲಸ್ಟ್ರೇಟೆಡ್ ವೀಕ್ಲಿ' ಪತ್ರಿಕೆಯಲ್ಲಿ ಪ್ರಕಟವಾಯಿತು. ಓದುಗರಿಂದ ಪತ್ರಗಳ ಸುರಿಮಳೆಯಾಯಿತು.

ಬೊಲಿವಿಯಾದಲ್ಲಿನ ಲಾ–ಪಾಝ್‌ಗೊಮ್ಮೆ ಪ್ರವಾಸ ಹೋಗಬೇಕೆನ್ನುವ ಬಯಕೆ ಕಾಮತರಿಗಿತ್ತು. ಸಮುದ್ರ ಮಟ್ಟದಿಂದ ಹತ್ತಾರು ಸಾವಿರ ಅಡಿಗಳಷ್ಟು ಎತ್ತರದಲ್ಲಿರುವ ಈ ಗಿರಿಧಾಮಕ್ಕೆ ಹೋಗುವುದು ಅಪಾಯಕರವೆಂಬ ಸ್ನೇಹಿತರ ಹಿತವಚನಕ್ಕೆ ಎಂ. ವಿ. ಕಾಮತರು ಕಿವಿಗೊಡಲಿಲ್ಲ. ಸಹಪ್ರಯಾಣಿಕರೊಂದಿಗೆ ವಿಮಾನ ನಿಲ್ದಾಣದಲ್ಲಿ ಇಳಿದದ್ದೇ ಗೊತ್ತು. ಎಂ. ವಿ. ಕಾಮತರು ನಿಶ್ಶಕ್ತರಾದರು. ಆಮ್ಲಜನಕದ ಅಭಾವದಿಂದ ಉಂಟಾದ ಈ ಅಸಹಾಯಕತೆ ಹನ್ನೆರಡು ಗಂಟೆಗಳಷ್ಟು ಕಾಲ ಎಂ. ವಿ. ಕಾಮತರನ್ನು ಸತಾಯಿಸಿತು. ಇದೊಂದು ವೈಯಕ್ತಿಕ ಅನುಭವ. ಸೃಷ್ಟಿಯ ವೈಚಿತ್ರ್ಯ ಮೇಳೈಸುತ್ತಿದ್ದ ಈ ಲಾ ಪಾಝ್ ಪಟ್ಟಣ ಎಂ.ವಿ. ಕಾಮತರಿಗೊಂದು ಸುಂದರ ಸ್ವಪ್ನವೇ ಆಗುಳಿಯಿತು.

ಸ್ಟೇಟ್ ಸೆಕ್ರೆಟರಿ ಆಗಿದ್ದ ಮಿಸ್ಟರ್ ಸೈರಸ್ ವೇನ್ಸ್ ಅವರನ್ನು ಸಂದರ್ಶಿಸಬೇಕಾದ ಸಂದರ್ಭ, ಎಂ. ವಿ. ಕಾಮತರಿಗೊಂದು ಒಳ್ಳೆಯ ಅವಕಾಶ ತಂದೊಡ್ಡಿತು. ಅವರೊಬ್ಬ ವೃತ್ತಿಪರ ರಾಯಭಾರಿ ಆದರ್ಶ ಪ್ರಾಯರು. ಇವರನ್ನು ಕಾಣಲು ಬರಿಗೈಯಲ್ಲಿ ಹೋಗುವ ಬದಲು ಎಂ. ವಿ. ಕಾಮತರು ತಮ್ಮ ಅಮೂಲ್ಯ ಕೃತಿ—"ದಿ ಯುನೈಟೆಡ್ ಸ್ಟೇಟ್ಸ್ ಅಂಡ್ ಇಂಡಿಯಾ 1776–1976" ಅನ್ನು ಕೊಡುಗೆಯ ರೂಪದಲ್ಲಿ ಜೊತೆಗೊಯ್ದರು. ಉಡುಗೊರೆಯ ಕಟ್ಟನ್ನು ಬಿಚ್ಚಿದ ಅವರು ಆ ಕಾಗದ ಹಾಗೂ ರಿಬ್ಬನ್ನನ್ನು ಮಡಿಸಿ ತಮ್ಮ ಮೊಮ್ಮಗಳಿಗೆಂದು ತೆಗೆದಿಟ್ಟರು ಎಂ. ವಿ. ಕಾಮತರ ಎದುರಿನಲ್ಲೇ. ಅವರ ಈ ರೀತಿಯ ಸರಳ ನಡತೆಗೆ ದಂಗುಬೀಳುವ ಪರಿಸ್ಥಿತಿ ಎಂ. ವಿ. ಕಾಮತರದು. ಒಂದು ರಾಜ್ಯವನ್ನು ಪ್ರತಿನಿಧಿಸುತ್ತಿರುವ ಈ ವ್ಯಕ್ತಿ ಬಿಗಿ ಪ್ರತಿಷ್ಠೆಗಾಗಿ ಹೊಡೆದಾಡದೆ ಸಾಮಾನ್ಯ ಮನುಷ್ಯನಂತೆ ವರ್ತಿಸಿದ್ದು ಅವರ ಹಿರಿಮೆ. ಅದೊಂದು ಸಂದರ್ಶನಕ್ಕಿಂತ ಮಿಗಿಲಾಗಿ ಇಬ್ಬರು ಒಡನಾಡಿಗಳ ಆತ್ಮೀಯ ಸಂಭಾಷಣೆಯಂತಿತ್ತು. ಆ ಹೊತ್ತಿಗಾಗಲೇ ಬರಬೇಕಾಗಿದ್ದ ಛಾಯಾಗ್ರಾಹಕ ಇನ್ನೂ ತಲುಪಿರಲಿಲ್ಲ. ಎಂ. ವಿ. ಕಾಮತರಿಗೋ ಸಂದಿಗ್ಧ! ಸೈರಸ್ ವೇನ್ಸ್ ನಿರಾಳವಾಗಿ ಅರ್ಧ ಗಂಟೆಗೆ ಸೀಮಿತವಾಗಿದ್ದ ತಮ್ಮ 'ಸಂದರ್ಶನ ಕಾರ್ಯಕ್ರಮ'ವನ್ನು ಒಂದೂವರೆ ಗಂಟೆಗೂ ಮೀರಿಸಿದ್ದರು. ಇಲ್ಲಸ್ಟ್ರೇಟೆಡ್ ವೀಕ್ಲಿಯಲ್ಲಿ ಸಚಿತ್ರ ಲೇಖನವನ್ನು ಪ್ರಕಟಿಸಿ ಎಂ. ವಿ. ಕಾಮತರು ತಮ್ಮ ಓದುಗರ ಬಳಗವನ್ನು ಮತ್ತಷ್ಟು ಹೆಚ್ಚಿಸಿಕೊಂಡರು.

ಎಂ. ವಿ. ಕಾಮತರಿಗೆ ಸ್ವದೇಶ ಕೈ ಬೀಸಿ ಕರೆಯುತ್ತಿತ್ತು. ಈ ಪ್ರತಿಭಾವಂತ ಮಣ್ಣಿನ ಮಗನನ್ನು ಕಳಕೊಳ್ಳಲು ಭಾರತೀಯರು ಯಾರೂ ತಯಾರಿರಲಿಲ್ಲ. ವಯಸ್ಸಾದ ತಾಯಿಯ ಆಕರ್ಷಣೆ ಬೇರೆ ಇತ್ತು. ಇಪ್ಪತ್ತು ವರ್ಷಗಳ ವಿದೇಶೀ ವಾಸ ಇವರ ಅನುಭವ ಭಂಡಾರವನ್ನು ಹೆಚ್ಚಿಸಿತ್ತು. ಆದರೆ ಮನಸ್ಸು ಅದೇ, ವ್ಯಕ್ತಿತ್ವವೂ ಅದೇ. ಸಹಪಾಠಿಗಳಿಂದ ಗಣ್ಯರಿಂದ ಬೀಳ್ಕೊಳ್ಳುವ ಸಮಾರಂಭಗಳ ಸಾಲು ಸಾಲೇ ಕಾದಿತ್ತು. ಅರುವತ್ತರ ಅಂಚು ಯಾವಾಗಲೂ ಭಾರತೀಯರಿಗೆ ಆಧ್ಯಾತ್ಮದತ್ತ ಪ್ರೇರೇಪಿಸುವಂತಹದು. ಜೀವನದ ಸರ್ವ ಸುಖವನ್ನೂ ಭೋಗವನ್ನೂ ಅನುಭವಿಸಿದರೂ—"ಇನ್ನೆಷ್ಟು ವರುಷ ನಾನು ಬದುಕಲಿದ್ದೇನೆ ? ನನ್ನ ಅಂತ್ಯವೆಲ್ಲಿ ?" ಎನ್ನುವ ಉತ್ತರ ರಹಿತ ಪ್ರಶ್ನೆಗಳು ಮನಸ್ಸನ್ನು ಕೊರೆಯುತ್ತವೆ. ಇವರ ಕನಸೆಲ್ಲ ನನಸಾಗಿತ್ತು. ಶ್ರೀಮಂತಿಕೆಯ ಪರಮಾವಧಿಯಲ್ಲಿದ್ದು ಭೋಗ–ಭಾಗ್ಯಗಳ ಜೀವನ ನಡೆಸಿದ್ದರು. ಇವರ ಬುದ್ಧಿಶಕ್ತಿ ಇವರ ಬದುಕಿನ ಆಧಾರವಾಗಿತ್ತು. ಟೆನಿಸನ್‌ನ ಕವನಗಳ ನಾಯಕ ಯುಲಿಸಿಸ್‌ಗೂ ಇವರಿಗೂ ಹೆಚ್ಚಿನ ವ್ಯತ್ಯಾಸವಿರಲಿಲ್ಲ. ಬದುಕು ಇಬ್ಬರಿಗೂ–ಕಂಠ ಪೂರ್ತಿ. ಬದುಕಿನ ಸವಿಯ ರಸಾಸ್ವಾದವನ್ನು ಅವರು ಸವಿದಿದ್ದರು.

ಅಂತರರಾಷ್ಟ್ರೀಯ ಸಮ್ಮೇಳನಗಳಲ್ಲಿ ಭಾಗವಹಿಸಿ, ಅದರ ಕುರಿತು ಲೇಖನ ಬರೆಯುವುದು ಹಾಗೂ ಜಗತ್ತಿನ ಶ್ರೇಷ್ಠ ವರದಿಗಾರರೊಂದಿಗೆ ಸ್ಪರ್ಧೆಗಿಳಿಯುವುದು ಇದಕ್ಕಿಂತ ಮಿಗಿಲಾದ ವೈಚಾರಿಕ ವಿನೋದ ಇನ್ನೇನಿದೆ ? ಇಂದು ಜಗತ್ತಿನ ಯಾವ ಮೂಲೆಗೆ ಹೋದರೂ ಇವರು ಅಪರಿಚಿತರಲ್ಲ. ಇವರು ಭೇಟಿ ಮಾಡದ ಗಣ್ಯರಿಲ್ಲ. ಕ್ರಿಶ್ಚನ್, ಮುಸಲ್ಮಾನ್, ರಶ್ಯನ್, ಇಟಾಲಿಯನ್–ಇವೆಲ್ಲ ಭಿನ್ನಮತಗಳು ನಿಜ. ಆದರೆ ಜಗತ್ತು ಒಂದೇ.

1978ರ ಏಪ್ರಿಲ್ ಒಂದರಂದು ಭಾರತದಿಂದ ವಾಶಿಂಗ್ಟನ್‌ನಲ್ಲಿದ್ದ ಎಂ.ವಿ. ಕಾಮತರಿಗೊಂದು ತುರ್ತು ಕರೆ. ಡಾ॥ ರಾಂ ತರ್ನೇಜ (ಜನರಲ್ ಮೇನೇಜರ್ ಬೆನ್ನೆಟ್ ಕೋಲ್‌ಮನ್ ಅಂಡ್ ಕಂಪೆನಿ.) ಅವರು ಇಲ್ಲಸ್ಟ್ರೇಟೆಡ್ ವೀಕ್ಲಿಯ ಸಂಪಾದಕರಾಗುವಂತೆ ಕಾಮತರಿಗೆ ಆತ್ಮೀಯ ಕರೆ ನೀಡಿದ್ದರು. ಏಪ್ರಿಲ್ ಒಂದು ಮೂರ್ಖರ ದಿನಾಚರಣೆ ಎಂದು ತನ್ನನ್ನು ಮೂರ್ಖನನ್ನಾಗಿ ಮಾಡುವ ಯತ್ನವಲ್ಲವಷ್ಟೆ ? ಆಲೋಚಿಸಲು ಇಪ್ಪತ್ನಾಲ್ಕು ಗಂಟೆಗಳ ಅವಧಿಯೇ ಬೇಕಾಯಿತು ಕಾಮತರಿಗೆ. ಅವರ ವೃತ್ತಿ ಜೀವನದ ಒಂದು ಅಧ್ಯಾಯವೇ ಮುಗಿಯುವಂತಿದ್ದ ಕಾಲ ಅದು. ಮಗದೊಮ್ಮೆ ಹೊಸ ಭಾರ ಹೊರುವ ಬಗ್ಗೆ ಅಪನಂಬಿಕೆ. ಅಂತೂ ಆಲೋಚಿಸಿ 'ಹೂಂ' ಅಂದೇಬಿಟ್ಟರು.

ಇಲ್ಲಸ್ಟ್ರೇಟೆಡ್ ವೀಕ್ಲಿ ಪತ್ರಿಕೆಯ ಸಂಪಾದಕರಾಗಿ ಸೇರಿದ ಬಳಿಕ ಎಂ.ವಿ. ಕಾಮತರು ಎದುರಿಸಬೇಕಾದ ಸಮಸ್ಯೆಗಳು ಹಲವಿದ್ದವು. ಇವರು ದೀರ್ಘಕಾಲ ವಿದೇಶದಲ್ಲಿ ನೆಲೆಸಿದವರು. ಭಾರತದ ಬಗ್ಗೆ ಹೆಚ್ಚಿನ ಮಾಹಿತಿ ಅರಿಯರು ಹಾಗೂ ಭಾರತೀಯ ಸಮಸ್ಯೆಯನ್ನು ಅಮೇರಿಕನ್ ಮಟ್ಟದಲ್ಲಿ ಪರಿಗಣನೆ ಮಾಡುತ್ತಾರೆ–ಮುಂತಾದುವು. ಇಪ್ಪತ್ತು ವರುಷಗಳ ವಿದೇಶೀ ವಾಸ ಅವರಿಗೆ ಭಾರತದ ಸ್ಪರ್ಶ ಮರೆಸಿದ್ದೇನೋ ನಿಜ: ಆದರೆ ಮೂಲ ಬೇರು ಭಾರತದಲ್ಲೇ ತಾನೇ ?

ಈ ಹೊಸ ಸಂಪಾದಕತ್ವದ ಕೆಲಸ ಅವರಿಗೆ ಹಿರಿಯ ಪಾಠವನ್ನೇ ಕಲಿಸಿತ್ತು. ಓದುಗರಿಂದ ಇವರಿಗೆ ಬರುತ್ತಿದ್ದ ಧೃತಿಗೆಡಿಸುವಂತಹ ಪತ್ರಗಳು. ಅದ್ಯಾವ ಘಳಿಗೆಯಲ್ಲಿ ಭಾರತಕ್ಕೆ ಕಾಲಿಟ್ಟೆನೋ ಅನ್ನಿಸುತ್ತಿತ್ತು. ತಮಗೊದಗಿದ ಬೈಗುಳನ್ನು ಒಂದಾ ನಿರ್ಲಕ್ಷಿಸಬೇಕು ಇಲ್ಲವೇ ತಮಗೆ ಬರುತ್ತಿದ್ದ ಅಹಿತಕರವಾದ ಪತ್ರಗಳನ್ನು ಪ್ರಕಟಿಸುತ್ತಿರಬೇಕು. ಎಂ. ವಿ. ಕಾಮತರು ಎರಡನ್ನೂ ಮಾಡಿದರು.

ಎಂ. ವಿ. ಕಾಮತರು ತಮ್ಮ ಸಹಪಾಠಿ ಫಾತಿಮಾ ಜಕರಿಯಾಳ ಒತ್ತಾಯದ ಮೇರೆಗೆ ಕಮಿಂಗ್ ಹೋಮ್ ಬರೆದರು. ಇದು ಅವರ ಪ್ರಾಮಾಣಿಕ ಬರಹ. ವಾಶಿಂಗ್ಟನ್‌ನ ತಮ್ಮ ಕೊನೆಯ ದಿನಗಳು, ಎಂಟು ವರುಷಗಳ ದಾಂಪತ್ಯ, ಊರಲ್ಲಿ

ಪ್ರೀತಿ ವಾತ್ಸಲ್ಯ ತುಂಬಿ ತುಳುಕುವ ಕುಟುಂಬದ ಸದಸ್ಯರು. ಕಟ್ಟಿ ಹಾಕಿದ ಭಾವನೆಗಳು ಕಟ್ಟು ಒಡೆದು ರಭಸದಿಂದ ಮುನ್ನುಗ್ಗುವ ನೀರ ಧಾರೆಯಂತೆ ಪರಿದ ಮಹಾಪೂರ. ಫಾತಿಮಾಳ ಕೋರಿಕೆಯನ್ನು ಮನ್ನಿಸಿ ಬರೆದದ್ದೂ ಆಗಿತ್ತು. ಅದನ್ನು ಆಕೆಯ ಕೈಗೆ ನೀಡಿದ್ದೂ ಆಗಿತ್ತು. ಆ ನಂತರವೇ ಅವರಿಗೆ ತಮ್ಮ ತಪ್ಪಿನ ಅರಿವಾದದ್ದು—ತಮ್ಮ ವೈಯಕ್ತಿಕ ಜೀವನವನ್ನು ತಾವು ಹೀಗೆ ಬಟ್ಟಂಬಯಲು ಮಾಡಬಾರದಾಗಿತ್ತು ಎಂದು ! ಮೊದಲೇ ಅವರು ಭಾರತದಲ್ಲಿ ಸಂಪಾದಕರಾಗಿ ತಮ್ಮನ್ನು ತಾವೇ ಭದ್ರಪಡಿಸಿಲ್ಲ. ಇನ್ನೀಗ ಓದುಗರ ಪತ್ರಕ್ಕೆ ಇದಿರುನೋಡುವುದೇ ಒಂದು ಕೆಲಸವಾಯಿತು.

ಇವರ ಕಮಿಂಗ್ ಹೋಮ್ ಲೇಖನ ಇವರು ಊಹಿಸಿದುದಕ್ಕಿಂತ ವ್ಯತಿರಿಕ್ತ ರೀತಿಯಲ್ಲೇ ತಿರುವು ಪಡೆಯಿತು. ಕಳೆದು ಹೋದ ಮಧುರ–ಕಹಿ ದಿನಗಳ ಸ್ಮೃತಿಫಲಕವಾಗಿದ್ದುವು. ಅದು ಜನಮನವನ್ನು ತಟ್ಟಿ ಬಡಿದೆಬ್ಬಿಸಿ ಇವರನ್ನು ತೆರೆದಿಟ್ಟ ಪುಸ್ತಕದಂತೆ ಓದುಗರ ಮುಂದಿರಿಸಿತು. ಇವರ ಅನಾಥ ಭಾವನೆಗೆ, ಅಸಹಾಯಕತೆಗೆ ಓದುಗರೇ ನೊಂದು ಇವರಿಗೆ ಧೈರ್ಯ ಹೇಳಬೇಕಾಯಿತು. ಇದು ಓದುಗರು ಎಂ. ವಿ. ಕಾಮತರನ್ನು ಒಬ್ಬ ಹೊಸ ಸಂಪಾದಕ ಎಂದು ಸ್ವೀಕರಿಸಿದುದರ ದ್ಯೋತಕ. ಇವರೊಬ್ಬ ತೀರಾ ಸ್ವಂತಿಕೆಯ ಮನುಷ್ಯ. ತಮ್ಮ ಹಿರಿತನದ ಬಗ್ಗೆ ಯಾರೂ ಮಾತನಾಡಿಕೊಳ್ಳುವುದು ಇವರಿಗೆ ಬೇಡವಾದ ಇಷ್ಟ. ತಮ್ಮ ಮಾನಸಿಕ ತುಮುಲಗಳನ್ನು ತಾಳಲಾರದೆ, ಹತ್ತಿಕ್ಕಿದ ಭಾವನೆಗಳನ್ನು ವಾಂತಿ ಮಾಡಿದಂತಿದ್ದ ಆ ಲೇಖನ ಜನರ ಹೃದಯವನ್ನು ತಟ್ಟಿತು. ಇವರ ಹೃದಯದೊಂದಿಗೆ ಸ್ಪಂದಿಸಿದ ಸಹೃದಯರ ಹೃದಯ ಶ್ರೀಮಂತಿಕೆ ಎಂ. ವಿ. ಕಾಮತರಿಗೆ ಜೀವನಸ್ಫೂರ್ತಿಯನ್ನು ನೀಡುತ್ತಿತ್ತು. ಮಸ್ಸೂರಿಯ ಒಬ್ಬ ಓದುಗ ಬರೆದಿದ್ದ :

“ನಿಮ್ಮ ಲೇಖನಕ್ಕೆ ಶುಭಕಾಮನೆಗಳು. ಇಲ್ಲಸ್ಟ್ರೇಟೆಡ್ ವೀಕ್ಲಿಯ ಸಂಪಾದಕರಾಗಿ ಇಪ್ಪತ್ತು ವರುಷಗಳ ಬಳಿಕ ಮತ್ತೊಮ್ಮೆ ಭಾರತಕ್ಕೆ ಬಂದಿದ್ದೀರಿ. ನಿಮ್ಮ ಸಂಪಾದಕತ್ವದ ಬಗ್ಗೆ ಅಭದ್ರ ಭಾವನೆಯಿಂದ ಅಪನಂಬಿಕೆ ಉಂಟಾಗಿತ್ತು. ನಿಮ್ಮ ನಿರ್ದೇಶನದಲ್ಲಿ ಮತ್ತೊಮ್ಮೆ ಇಲ್ಲಸ್ಟ್ರೇಟೆಡ್ ವೀಕ್ಲಿ ಓದುವಂತಾಗಿದೆ. ನಿಮ್ಮ ಬಗ್ಗೆ ಹಳೆಯ ನನ್ನ ಅಭಿಪ್ರಾಯವನ್ನು ಬದಲಿಸಿಕೊಳ್ಳುತ್ತಿದ್ದೇನೆ. ನೀವು ಯಾವ ಪಕ್ಷಕ್ಕೂ ಸೇರದ ನಿಜ ನೀತಿಯ ಸಂಪಾದಕ ಎಂದು ತೋರಿಸಿಕೊಟ್ಟಿದ್ದೀರಿ. ಪತ್ರಿಕೋದ್ಯಮಕ್ಕೆ ಒಂದು ಸ್ವರೂಪವನ್ನು ನೀಡಿ ಶೋಭೆಯನ್ನು ತಂದೊಡ್ಡಿದ್ದೀರಿ. ತಮಗೆ ಧನ್ಯವಾದಗಳು.”

ಇದು ಓದುಗರ ಪತ್ರದ ಒಂದು ಮಾದರಿ. ನಾಣ್ಯದ ಮತ್ತೊಂದು ಮುಖದ ಪರಿಚಯವನ್ನೂ ಕೊಡಬೇಕು ತಾನೇ ?

ಇದೇ ರೀತಿ ಬರುವ ಕಹಿ ಪತ್ರಗಳಿಗೇನೂ ಕೊರತೆಯಿರಲಿಲ್ಲ. ಇದಕ್ಕೊಂದು ಪತ್ರ ಸಾಕ್ಷಿ :

"ಎಂ. ವಿ. ಕಾಮತರಿಗೆ,

ನೀವು ಸಂಪಾದಕರಾದ ಬಳಿಕ ನಾನು 'ಸಂಪಾದಕೀಯ' ಓದುವುದನ್ನೇ ಬಿಟ್ಟುಬಿಟ್ಟೆ. ಅದು ನನ್ನ ಮೆಚ್ಚಿನ ಭಾಗವಾಗಿತ್ತು. 'ಇಲ್ಲಸ್ಟ್ರೇಟೆಡ್ ವೀಕ್ಲಿ'ಯಲ್ಲಿ ಅದು ನನ್ನ ಮನ ಗೆದ್ದ ವಿಭಾಗ. ನಿಮ್ಮ ಸಂಪಾದಕೀಯ ರಸ ಹೀನ. ಹಾಸ್ಯ, ವಿಡಂಬನೆ ಅಲ್ಲಿ ಹುಡುಕಬೇಕು. ನಿಜ ಹೇಳಬೇಕೆಂದರೆ, ಸಂಪಾದಕೀಯ ನೆಟ್ಟಗಿಲ್ಲದ ಪತ್ರಿಕೆ ಆತ್ಮವಿಲ್ಲದ ಶರೀರದಂತೆ."

ಮುಳ್ಳುಗಳ ನಡುವಿನ ಗುಲಾಬಿಯಂತೆ, ಕಹಿಪತ್ರಗಳ ನಡುವೆ ಜೀವನದಲ್ಲಿ ಭರವಸೆಯನ್ನು ಮೂಡಿಸುವಂತಹ ಪತ್ರಗಳೂ ಅವರಿಗೆ ಬಂದಿದ್ದವು. ಒಂದು ಪತ್ರದ ಒಕ್ಕಣೆ ಹೀಗಿದೆ :

"ಈ ಪತ್ರವನ್ನು ತಮ್ಮ ವಾರಿಕದಲ್ಲಿ ಪ್ರಕಟಣೆಗೋಸುಗ ಬರೆದುದಲ್ಲ. ನನ್ನ ಮಾನಸಿಕ ತೃಪ್ತಿ ಸಮಾಧಾನಗಳನ್ನು ತಮ್ಮಲ್ಲಿ ಬಿನ್ನವಿಸಿಕೊಳ್ಳಲು ಈ ಪ್ರಯತ್ನ ಅಷ್ಟೆ. ಇಲ್ಲಸ್ಟ್ರೇಟೆಡ್ ವೀಕ್ಲಿ ಇದೀಗ ತಮ್ಮ ನಾಯಕತ್ವದಲ್ಲಿ ರೂಪಾಂತರಗೊಂಡಿದೆ ಮಾತ್ರವಲ್ಲ ನಮ್ಮೆಲ್ಲರ ನೆಚ್ಚಿನ ಪತ್ರಿಕೆಯೂ ಆಗಿದೆ. ಇನ್ನೂ ಕೆಲವು ದಶಕಗಳು ಇದೇ ಮಟ್ಟವನ್ನು ಕಾಯ್ದು ಯಶಸ್ಸು ಕಾಣುವಂತಾಗಲಿ ಎಂಬುದೇ ನಮ್ಮ ಹಾರೈಕೆ. ನಿಮಗೂ ಸಂಪಾದಕ ಮಂಡಳಿಗೂ ನಮ್ಮ ಶುಭ ಕಾಮನೆಗಳು."

ಎಂ.ವಿ. ಕಾಮತರು ಬರವಣಿಗೆಯ ಕ್ಷೇತ್ರದಲ್ಲಿ ಶತ್ರುಗಳನ್ನೂ, ಸ್ನೇಹಿತರನ್ನೂ ಹೊಂದಿದ್ದರು. ಇದರಲ್ಲಿ ಒಂದು ಕುತೂಹಲಕಾರಿ ವಿಚಾರವೆಂದರೆ ಇವರನ್ನು ತಿದ್ದಲು ಹೊರಟವರು ತಾವೇನೋ ಒಂದು ಸಮಾಜವನ್ನು ತಿದ್ದುತ್ತಿದ್ದೇವೆ ಎನ್ನುವ ಭರವಸೆ ಹೊಂದಿದವರು_ಒಂದು ವರ್ಗ. ಇವರನ್ನು ಮನಸ್ವೀ ಹೊಗಳಿ ಹಾಗೂ ತಮ್ಮ ಪತ್ರ ಪ್ರಕಟವಾಗಬಾರದೆಂದು ಬಯಸಿದವರು–ಇನ್ನೊಂದು ವರ್ಗ. ಇದು ಮಾನವ ಮನಸ್ಸುಗಳ ವಿಭಿನ್ನ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಂತೆ.

ಒಬ್ಬ ಪತ್ರಿಕೋದ್ಯಮಿ ಸ್ವತಃ ಇನ್ನೊಬ್ಬ ಪತ್ರಿಕಾಕರ್ತನನ್ನು ಹೊಗಳುವುದು ಅತೀವಿರಳ. ಅವರೆ ಗುಣಕ್ಕೆ ಮತ್ಸರವುಂಟೆ ? ಎಂ.ವಿ. ಕಾಮತರ ಬಗ್ಗೆ ಏನನ್ನಾದರೂ ಹೇಳದೆ ಇರುವುದು ಅಸಾಧ್ಯ. ಇದರ ಬಗ್ಗೆ ಹಿರಿಯ ವರದಿಗಾರರೊಬ್ಬರು ಹೀಗೆಂದು ಬರೆದಿದ್ದರು :

"ಒಬ್ಬ ವರದಿಗಾರ ಮತ್ತೊಬ್ಬ ಪತ್ರಿಕೋದ್ಯಮಿಯನ್ನು ಹೊಗಳುವುದು ಲೋಕರೂಢಿಯಲ್ಲಿಲ್ಲ. ಆದರೂ ನಿಮ್ಮ ಅರ್ಹತೆಗೆ ಮೆಚ್ಚುಗೆ ಸೂಚಿಸದೆ ಇರಲು ನನ್ನ ಅಭಿಮಾನ ಒಪ್ಪುವುದಿಲ್ಲ. ನಿಮ್ಮ ಪತ್ರಿಕೆಗೆ ಹಾಗೂ ನಿಮ್ಮ ನಿರ್ಭೀತ ಲೇಖನಕ್ಕೆ ನನ್ನ ವಿನಮ್ರ ಕಾಣಿಕೆ ಈ ಪತ್ರ.ರಾಜೀವಗಾಂಧಿಯವರ ಬಗ್ಗೆ ಬರೆದ ತಮ್ಮ ಲೇಖನ ಬರಿಯ ಲೇಖನವಲ್ಲ ಅದು ಪ್ರಪಂಚದ ಒಂದು ಅದ್ಭುತ. ವಿವಿಧ ಸ್ವಭಾವಗಳ ಓಟದ ಕುದುರೆಗಳನ್ನು ಒಂದೇ ಲಾಯದಲ್ಲಿ ಕಟ್ಟುವಂತಿದೆ ನಿಮ್ಮ ಚತುರತೆ."

ಡಾ॥ ಶಿವರಾಮ ಕಾರಂತರೆಂದರೆ ಎಂ. ವಿ. ಕಾಮತರಿಗೆ ಅಪಾರ ಅಭಿಮಾನ. ಜ್ಞಾನಪೀಠ ಪ್ರಶಸ್ತಿ ವಿಜೇತ ಕಾರಂತರನ್ನು ಕುರಿತ ಲೇಖನ ಒಂದನ್ನು ಬರೆದು ಎಂ. ವಿ. ಕಾಮತರು ಸ್ವತಃ ಇಲ್ಲಸ್ಟ್ರೇಟೆಡ್ ವೀಕ್ಲಿಯಲ್ಲಿ ಪ್ರಕಟಿಸಿದರು. ಈ ಲೇಖನಕ್ಕೆ ಓದುಗರ ಪ್ರತಿಕ್ರಿಯೆಯಾಗಿ ಸ್ವತಃ ಇಂದಿರಾಗಾಂಧಿಯೇ ಹೀಗೆಂದು ಬರೆದಿದ್ದರು–

"....ನಿಮ್ಮ ಕಾರಂತರ ಬಗೆಗಿನ ಲೇಖನವನ್ನು ಎಷ್ಟು ಜನ ನೋಡಿ ಮೆಚ್ಚಿ ಓದಿರುವರೆಂಬುದನ್ನು ನೀವು ಊಹಿಸಲಾರಿರಿ. 'ವೀಕ್ಲಿ'ಯ ಒಳಗೆ ಪ್ರವೇಶಿಸುವುದೆಂದರೆ ಅದನ್ನು ಓದುವುದೊಂದೇ ಉತ್ತಮ ಮಾರ್ಗ–ಇದು ನನ್ನ ಹಳೆಯ ಸಿದ್ಧಾಂತ...."

1980ರಲ್ಲಿ ಇಲ್ಲಸ್ಟ್ರೇಟೆಡ್ ವೀಕ್ಲಿಯ ಶತಾಬ್ದಿಯನ್ನು ಆಚರಿಸಲಾಯಿತು. ಇವರ ವೃತ್ತಿಜೀವನದಲ್ಲಿ ಬಂದೊದಗಿದ ಮತ್ತೊಂದು ಅನಿರೀಕ್ಷಿತ ಸುಸಂದರ್ಭವಿದು. 100 ವರುಷಗಳಿಂದ ಭಾರತದ ಪತ್ರಿಕಾ ಜೀವನದ ಅವಿಭಾಜ್ಯ ಅಂಗವಾಗಿ ಬಂದ ಇಲ್ಲಸ್ಟ್ರೇಟೆಡ್ ವೀಕ್ಲಿ ತನಗೆ ಪ್ರತಿಸ್ಪರ್ಧಿಯನ್ನೇ ಹುಟ್ಟಿಸಿರಲಿಲ್ಲ. ಮೂರು ವರುಷ ಅದರ ಸಂಪಾದಕರಾಗಿ ಅದರ ಕೀರ್ತಿಯನ್ನೇ ಉತ್ತುಂಗ ಶಿಖರಕ್ಕೇರಿಸಿ ಎಂ. ವಿ. ಕಾಮತರು ಸಂಪಾದಕತ್ವದಿಂದ ನಿವೃತ್ತಿಹೊಂದಿದರು. ಅನಾಮಧೇಯ ಆರಾಧಕ ಒಬ್ಬ ಇವರ ನಿವೃತ್ತಿ ವಾರ್ತೆ ಕೇಳಿ ಗ್ವಾಲಿಯರ್‌ನ ವಸ್ತುಸಂಗ್ರಹಾಲಯದ ಅತ್ಯಮೂಲ್ಯ ಕಲಾಕೃತಿಯ ಪ್ರತಿಕೃತಿಯನ್ನು ಕಳುಹಿಸಿಕೊಟ್ಟಿದ್ದ. ಈ ಉಡುಗೊರೆಗೆ ಅವರು ಈಗಲೂ ಅಭಿಮಾನ ಪಡುತ್ತಾರೆ.

ಎಂ. ವಿ. ಕಾಮತರು ಇಲ್ಲಸ್ಟ್ರೇಟೆಡ್ ವೀಕ್ಲಿಯ ಸಂಪಾದಕರಾಗಿದ್ದಾಗಲೇ ಒಮ್ಮೆ ಒಬ್ಬಾಕೆ ತನ್ನ ಒಂದು ಕಟ್ಟು ಕವನಗಳೊಂದಿಗೆ ಪತ್ರಿಕಾಲಯಕ್ಕೆಹಾಜರಾದಳು. ತನ್ನ ಹದಿನೈದರ ಹರಯದ ಮಗಳು ಕ್ಯಾನ್ಸರ್ ರೋಗಕ್ಕೆ ಬಲಿಯಾದವಳು ಈ ಕವನರಾಶಿಯನ್ನು ಬರೆದಿರಿಸಿದಳೆಂದೂ ಅವನ್ನು ಪತ್ರಿಕೆಯಲ್ಲಿ ಪ್ರಕಟಿಸಬೇಕೆಂದೂ ಕೇಳಿಕೊಂಡಳು. ಪ್ರೀತೀಶ್ ನಂದಿಯ ಅತ್ಯುತ್ಕೃಷ್ಟ ಕಿರುಪರಿಚಯದೊಂದಿಗೆ ಕವನಗಳು ಸಾಲಾಗಿ ಪ್ರಕಟಗೊಂಡವು. ಓದುಗರ ಪ್ರತಿಕ್ರಿಯೆ ಕಲ್ಪನೆಗೂ ಮೀರಿದ್ದು !

ಇದಾದ ಕೆಲವೇ ದಿನಗಳಲ್ಲಿ ಮಗಳನ್ನು ಕಳಕೊಂಡ ಆ ದುಃಖಿತ ಮಾತೆ ಕೃತಜ್ಞತೆಯಿಂದ ಕಾಮತರಿಗೆ ಒಂದು ಬೆಳ್ಳಿಯ ಪದಕವನ್ನು ಕಾಣಿಕೆಯಾಗಿ ನೀಡಿದ್ದಳು. ಆಕೆಯ ಮಗಳಿಗೆ ಸೇರಿದ ಆ ಬೆಳ್ಳಿಯ ಪದಕ ಕಾಮತರ ಮೌಲ್ಯಾತೀತ ಉಡುಗೊರೆಯಲ್ಲಿ ಒಂದಾಗಿ ಸೇರಿತು.

ಎಂ. ವಿ. ಕಾಮತರೊಬ್ಬರು ಮಾನವರೂಪದ ಗಣಕಯಂತ್ರ. ಸಿರಿಕ್ಷೆಗೂ ಮೀರಿದ ಇವರ ಸಂಯಮ. ನಡೆ ನುಡಿ, ಅಚ್ಚುಕಟ್ಟುತನ, ವಿಚಾರಶೀಲತೆಯನ್ನಂ ನೋಡಿದರೆ ಇವರು ಮತ್ತೊಬ್ಬ 'ಪುರುಷ ಸರಸ್ವತಿ' ದಿಟ ಅನ್ನಿಸುತ್ತದೆ. ಜೀವನದಲ್ಲಿ ಓರ್ವ ವ್ಯಕ್ತಿ ಏನೇನು ಸಾಧಿಸಬಹುದೋ ಅದೆಲ್ಲವನ್ನು ಪಡೆದರೂ 'ತಾನೇನೂ ಅಲ್ಲ' ಎಂದುಕೊಳ್ಳುವ ಇವರ ಹಿರಿತನ ಸಮಾಜಕ್ಕೊಂದು ಪಾಠ. 1958 ರಿಂದ 1978ರವರೆಗಿನ ಮುಖ್ಯ ಅಂತರರಾಷ್ಟ್ರೀಯ ಸಭೆ ಸಮಾರಂಭಗಳಿಗೆ ಕಾಮತರು ತಪ್ಪದೆ ಹಾಜರಾಗಿದ್ದಾರೆ.

ಎಂ.ಕೆ.ರುಸ್ತುಂಜಿ ಹಾಗೂ ಎಂ.ವಿ. ಕಾಮತರು ಬರೆದ 'ವಾಟ್ ಜರ್ನಲಿಸಂ ಈಸ್ ಆಲ್ ಎಬೌಟ್' ಕೃತಿಯ ಮುನ್ನುಡಿಯಲ್ಲಿ ಎಂ. ವಿ. ಕಾಮತರನ್ನು ಹೀಗೆಂದು ಬಣ್ಣಿಸಿದ್ದಾರೆ : "ಶ್ರೀ ಎಂ. ವಿ. ಕಾಮತರು ದೇಶದ ಪ್ರಮುಖ ಪತ್ರಕರ್ತರಲ್ಲಿ ಒಬ್ಬರು. ಇವರ ಅನುಭವ ಹಾಗೂ ಕಾರ್ಯದಕ್ಷತೆ ಇತರರಿಗೆ ಅಪರೂಪ. ಬೋನ್, ಪೇರಿಸ್, ವಾಶಿಂಗ್ಟನ್, ಅಮೇರಿಕ ಹೀಗೆ ಜಗತ್ತಿನಾದ್ಯಂತ ತಮ್ಮ ಕಾರ್ಯವ್ಯಾಪ್ತಿಯನ್ನು ಇವರು ವಿಸ್ತರಿಸಿದ್ದಾರೆ. ಪತ್ರಿಕಾಕರ್ತರಾಗಿ, ವರದಿಗಾರರಾಗಿ, ಅಂಕಣಕಾರರಾಗಿ, ಸಂಪಾದಕೀಯ ಬರಹಗಾರರಾಗಿ ಹಾಗೂ ವಿಶೇಷ ಬಾತ್ಮೀದಾರರಾಗಿ ಇವರು ಬೆಳಗಿದ್ದಾರೆ, ಪತ್ರಿಕಾರಂಗವನ್ನು ಬೆಳಗಿಸಿದ್ದಾರೆ...."

ಹೀಗೆ ಜೀವನದ ಎಲ್ಲಾ ಹಂತಗಳಲ್ಲೂ ಇವರು ಗೌರವಕ್ಕೆ ಪಾತ್ರರಾಗಿದ್ದಾರೆ. ತಮ್ಮ ದಿನನಿತ್ಯದ ಅನುಭವಗಳನ್ನು ಇವರು ಡೈರಿಯಲ್ಲಿ ಬರೆದಿಡುತ್ತಾರೆ. "ಒಬ್ಬ ಸುಪ್ರಸಿದ್ಧ ವ್ಯಕ್ತಿ ತನ್ನ ವೈಯಕ್ತಿಕ ಜೀವನದ ಮತ್ತೊಂದು ಮಜಲನ್ನು ಸಾರ್ವಜನಿಕರಿಂದ ಬಚ್ಚಿಡುತ್ತಾನೆ." ಎಂ.ವಿ. ಕಾಮತರು ತಮ್ಮ ಸಾಮಾಜಿಕ ಜೀವನದ ಬಗ್ಗೆ ಎಂದೂ ಧೃತಿಗೆಟ್ಟಿಲ್ಲ. ಒಬ್ಬ ಮನುಷ್ಯ ತನ್ನ ಜೀವಮಾನದಲ್ಲಿ ಓದುವಷ್ಟನ್ನು ಓದಿದ್ದಾರೆ, ಬರೆಯಲು ಅಸಾಧ್ಯವಾದುದಷ್ಟನ್ನು ಬರೆದಿದ್ದಾರೆ. ಆದರೂ ಮನಸ್ಸು ವೇದಾಂತಕ್ಕೆ ಬಲಿಯಾದಾಗ ತಾನೇನೂ ಅಲ್ಲ. ತಾನು ಸಾಧಿಸಿದ್ದು ಏನೇನೂ ಇಲ್ಲ ಅನ್ನುವ ಪರಿಕಲ್ಪನೆ. ಡಾಕ್ಟರಾಗಬೇಕು-ಇಲ್ಲವೇ ತತ್ವಜ್ಞಾನಿ ಆಗಬೇಕು ಇಲ್ಲವೇ ಸಾಹಿತಿಯಾಗಬೇಕು. ಈ ಮೂರು ಅಲ್ಲದೆ ತನ್ನ ಜೀವನ ಒಬ್ಬ ಪತ್ರಿಕೋದ್ಯಮಿಯದಾಯಿತು. ತಮ್ಮ ತಮ್ಮ ಭವಿಷ್ಯವನ್ನು ನಿರ್ಧರಿಸುವವರು ಬಹು ವಿರಳವಂದಿ.

ಪರಿಸ್ಥಿತಿಯ ಕೈಗೊಂಬೆಗಳು ನಾವು. ಅದೇ ನಮ್ಮನ್ನು ಆಳುತ್ತದೆ. ವಿಧಿಯ ಮುಂದೆ ನಾವೆಲ್ಲ ಅಸಹಾಯಕರು."

ಸಮಾಜ ಸೇವೆ ಇವರ ಗುರಿ. ಬರವಣಿಗೆಯ ಮೂಲಕ ಇವರು ಜನತೆಯನ್ನು ತಲುಪುತ್ತಾರೆ. ಬಿಡುವಿನ ಒಂದೊಂದು ಕ್ಷಣವನ್ನೂ ಇವರು ಬರವಣಿಗೆಗಾಗಿಯೇ ವಿನಿಯೋಗಿಸುತ್ತಾರೆ. ಬಿತ್ತಿದವರ ನಂಬಿಕೆಗೆ ಫಲ ಇದ್ದದ್ದೇ. ಅವರು ತಮಗಾಗಿ ಅಲ್ಲ, ಇತರರಿಗಾಗಿ ಬಿತ್ತುತ್ತಾರೆ. ಎಷ್ಟು ಜನರು ಸ್ವಾತಂತ್ರ್ಯದ ಗಿಡಕ್ಕೆ ತಮ್ಮ ರಕ್ತದ ನೀರುಣಿಸಲಿಲ್ಲ ! ಫಲ ಅವರಿಗೆ ಸಿಕ್ಕಿತೇ ? ಉಣ್ಣುವವರು ನಾವು. ಕೃತಜ್ಞತೆಯಿಂದ ಅವರನ್ನು ನೆನೆಯುತ್ತಾ ಉಣ್ಣಬೇಕು" ತಮ್ಮ ಆತ್ಮಕಥನ 'ಪುನರಪಿ ಜನನಂ' ನಲ್ಲಿ ಎಂ. ವಿ. ಕಾಮತರು ಹೀಗೆಂದಿದ್ದಾರೆ.

ಪ್ರಶಸ್ತಿಗಳು ಕಾಮತರನ್ನು ಅರಸಿ ಬಂದಿವೆ. ಜರ್ನಲಿಸ್ಟ್ ಆಫ್ ದಿ ಇಯರ್ ಎಂದು ರೋಟರಿ ಸಂಸ್ಥೆಯವರು ಸನ್ಮಾನಿಸಿದ್ದಾರೆ. 1985ರಲ್ಲಿ ಕರ್ನಾಟಕ ರಾಜ್ಯ ಸರ್ಕಾರದ ಶ್ರೇಷ್ಠ ಪತ್ರಿಕೋದ್ಯಮಿ ಪ್ರಶಸ್ತಿ ಪಡೆದಿದ್ದಾರೆ. 1982ರಲ್ಲಿ ತನ್ನ ಮಣ್ಣಿನ ಮಗನನ್ನು ಹುಟ್ಟೂರು ಉಡುಪಿಯ ಜನತೆ ಸನ್ಮಾನಿಸಿದ್ದಾರೆ. ಇದು ಅವರ ಅಂತಃಕರಣವನ್ನು ತಟ್ಟಿದೆ. "ಹುಟ್ಟೂರು ತನ್ನ ಮಣ್ಣಿನ ಮಗನನ್ನು ಕರೆದು ತನ್ನ ಮಣ್ಣಲ್ಲಿ ಸನ್ಮಾನಿಸಿ ತನ್ನನ್ನು ಧನ್ಯನನ್ನಾಗಿ ಮಾಡಿದೆ. ಇದಕ್ಕಿಂತ ಮಿಗಿಲಾದ ಗೌರವ ಒಬ್ಬ ವ್ಯಕ್ತಿಗೆ ಇನ್ನೇನು ಬೇಕು ? ಉಡುಪಿ ನನ್ನ ತವರು ಮಾತ್ರವಲ್ಲ ಹೃದಯ ಕೂಡಾ." ಕೃತಜ್ಞತೆಯ ನುಡಿಗಳಿವು.

ಪತ್ರಿಕೋದ್ಯಮದ ಬಗ್ಗೆ ಅವರ ಪರಿಣತಿ ಅದ್ಭುತ. "ಬರವಣಿಗೆಯಲ್ಲಿ ಅರ್ಹತೆ, ಪರಿಣತಿ, ಮನಮುಟ್ಟುವಂತೆ ಸೂಕ್ಷ್ಮಗ್ರಾಹ್ಯವಾಗಿ ಹೇಳುವ ಕೌಶಲ್ಯ" ಇದೇ ಪತ್ರಿಕೋದ್ಯಮ ಎಂದು ಇವರು ಪತ್ರಿಕೋದ್ಯಮವನ್ನು ನಿರ್ವಚಿಸುತ್ತಾರೆ.

ಜರ್ನಲಿಸಂ ಬಗ್ಗೆ ಇವರು ಕೆಲವು ಸೂಚನೆಗಳನ್ನು ಕೊಡುತ್ತಾರೆ : ಒಬ್ಬ ಜರ್ನಲಿಸ್ಟ್ ಶಾರ್ಟ್ ಹ್ಯಾಂಡ್ ಅವಶ್ಯವಾಗಿ ಕಲಿತಿರಬೇಕು. ಇದು ಆತನ ಅರ್ಹತೆಗಳಲ್ಲೊಂದು. ಹಾಗೂ ಆತನ ಮಾತೃಭಾಷೆಯಿಂದ ಭಿನ್ನವಾದ ಎರಡು ಅನ್ಯಭಾಷೆಗಳನ್ನು ಆತ ಅರಿತಿರಬೇಕು. ಎಂ.ವಿ. ಕಾಮತರು ಬುಲೆಟಿನ್‌ನ ಸಂಪಾದಕರಾಗಿದ್ದಾಗ ಇವರ ಸ್ನೇಹಿತ ಚಂದ್ರಚೂಡ (ಹಿಂದುಸ್ಥಾನ್ ಟೈಮ್ಸ್‌ನ ಮುಂಬೈ ಬಾತ್ಮೀದಾರ) ಹೇಳುತ್ತಿರುವ ಮಾತನ್ನು ಇವರು ಎಂದೆಂದೂ ಜ್ಞಾಪಿಸುತ್ತಾರೆ. "ಕನಿಷ್ಟ ಪಕ್ಷ ಮೂರು ಪತ್ರಿಕೆಗಳು ತನ್ನನ್ನು ಸ್ವೀಕರಿಸುವವರೆಗೂ ಒಬ್ಬ ಪತ್ರಿಕಾಕರ್ತ ತಾನು ಅತ್ಯುತ್ತಮನೆಂದುಕೊಳ್ಳಬಾರದು. ಏಳು ವರ್ಷಗಳಿಗೊಮ್ಮೆಯಾದರೂ ಆತ

ತನ್ನ ಕ್ಷೇತ್ರವನ್ನು ಬದಲಾಯಿಸುತ್ತಲಿರಬೇಕು. ಜರ್ನಲಿಸಂನ ಕ್ಷೇತ್ರದಲ್ಲಿ ಅವರು ತಮ್ಮನ್ನು ತಾವು ಸಾಧಿಸಿ ತೋರಿಸಬೇಕಾದ್ದು ಅವಶ್ಯ.

ವಿದೇಶೀ ಬಾತ್ಮೀದಾರ ಆಗುವುದರಲ್ಲಿ ಮಜಾ ಇದೆ ಏನೋ ನಿಜ್ಯವಂತಹ ಸ್ಥಾನ–ಮಾನ–ಗೌರವಗಳು !! ಆದರೆ ಆ ವೃತ್ತಿಯ ತಿರುಳನ್ನೂ ಆತ ಅರಿತಿರಬೇಕು. ಒಂದು ಸಿನೆಮಾ ನೋಡಲಿ, ಒಂದು ಪುಸ್ತಕ ಓದಲಿ ಅಥವಾ ಒಂದು ಸಂಗೀತ ಕಚೇರಿಗೆ ಹೋಗಲಿ ಅಲ್ಲಿ ಆತ ಕೇವಲ ಸಂತಸ ಅನುಭವಿಸಿ ಬರುವಂತಿಲ್ಲ. ಕಲೆಯ,ಸಾಹಿತ್ಯದ, ತಿರುಳನ್ನು ಬಗೆಯಬೇಕು. ಅದರಲ್ಲಿ ಹಾಸುಹೊಕ್ಕಾಗಿರುವ ಒಂದು ದೇಶದ ಜನರ ಸಂಸ್ಕಾರ, ಸಂಸ್ಕೃತಿ ಹಾಗೂ ಜೀವನ ವಿಧಾನವನ್ನು ತಿಳಿಯಬೇಕು. ಎಂತಹ ಕ್ಲಿಷ್ಟಕರ ಕೆಲಸ. ಆತ್ಮ ಬಗೆದು ಪರಮಾತ್ಮನನ್ನು ಆವಿಷ್ಕರಿಸುವ ಕಲೆ. ಇದೇ ಆತನ ವೃತ್ತಿಯ ಸಾರಸರ್ವಸ್ವ.

ಎಂ. ವಿ. ಕಾಮತರು ಈ ಎಲ್ಲಾ ಕ್ಷೇತ್ರಗಳಲ್ಲೂ ಸಾಕ್ಷಾತ್ ಬ್ರಹ್ಮ. ಅಣು ವಿಜ್ಞಾನದಿಂದ ಹಿಡಿದು ಅಮೇರಿಕದ ವರ್ಣವೈಷಮ್ಯ, ವಿದ್ಯಾರ್ಥಿ ಚಳವಳಿ, ಅಪರಾಧ, ಕೊಲೆ ಮತ್ತು ಭ್ರಷ್ಟಾಚಾರ–ಹೀಗೆ ವೃತ್ತಿ ಪ್ರಾವೀಣ್ಯತೆಯೇ ಇವರ ಅತಿ ಶ್ರೇಷ್ಠ ಗುಣ ವಿಶೇಷ.

ದಿನ ಒಂದಕ್ಕೆ ಇವರು ಸಾವಿರದ ಐನೂರರಿಂದ ಸಾವಿರದ ಎಂಟನೂರು ಶಬ್ದಗಳನ್ನು ಬರೆಯುತ್ತಾರೆ. ಮೂರುಸಾವಿರ ಶಬ್ದಗಳನ್ನು ಬರೆದದ್ದೂ ಇದೆ. ಎಂಟುನೂರಕ್ಕೂ ಮೀರಿದ ಲೇಖನಗಳು ಪ್ರತಿ ವರ್ಷ ಪತ್ರಿಕೆಗಳಲ್ಲಿ ಬರುತ್ತಲಿರುತ್ತವೆ.

ಇವರನ್ನು ಸಂದರ್ಶಿಸಿ 'ಸಮಾಜದ ಬಗ್ಗೆ, ಸಮಾಜಕ್ಕೆ ನಿಮ್ಮ ಸಂದೇಶ ವೇನು?' ಎಂದು ಕೇಳಲು ಅವರು ನೀಡಿದ ಉತ್ತರ ಅವರ ಇಡೀ ಬದುಕಿನ ಧ್ಯೇಯಕ್ಕೆ ಹಿಡಿದ ಕನ್ನಡಿ.

'ಸಂದೇಶವನ್ನು ಯಾವಾಗಲೂ ಮಠಾಧಿಪತಿಗಳು ಹಾಗೂ ರಾಜಕಾರಣಿ ಗಳು ಕೊಡುವಂತಹವು. ನಾನು ಮಠಾಧಿಪತಿಯೂ ಅಲ್ಲ ರಾಜಕಾರಣಿಯೂ ಅಲ್ಲ. ಸಮಾಜದ ಬೆಳವಣಿಗೆಗೆ ಸಂದೇಶದ ಅವಶ್ಯಕತೆಯಿಲ್ಲ. ಸಮಾಜ ಎಂದೂ ಸ್ವತಂತ್ರ ವಾಗಿ ಬೆಳೆಯುವಂತಹದು."

ಆದರೂ ಸಮಾಜಕ್ಕೆ ಇವರೊಬ್ಬ ಸಂವಾದಿ. ಜಗತ್ತಿನ ಆಗು ಹೋಗು ಗಳನ್ನು ತಮ್ಮ ಲೇಖನಿಯ ಮೂಲಕ ಬಿತ್ತುವವರು. ಜನರ ಭಾವನೆಗಳೊಂದಿಗೆ ಸಂವೇದಿಸುವವರು. ಹೊಸ ವಿಧದ ವಿಚಾರ ವಿಮರ್ಶೆ ನಡೆಸಿ ಸಾಮಾಜಿಕ ಬದಲಾ

ಮಣೆಗೆ ಅವಕಾಶ ಮಾಡುವವರು. ಮಾತಿನಲ್ಲಿ, ಕೃತಿಯಲ್ಲಿ, ಭಾಷಣದಲ್ಲಿ ಜನರನ್ನು ತಲುಪುವವರು. ದಿನ ನಿತ್ಯದ ಸಮಸ್ಯೆಗಳಿಗೆ ಪರಿಹಾರ ಹುಡುಕುವವರು. ಸಾಮಾಜಿಕ ಜೀವನಕ್ಕೆ ತಮ್ಮನ್ನು ತಾವು ಒಪ್ಪಿಸಿಕೊಂಡವರು. 'ಪ್ರತಿಯೊಬ್ಬನ ಜೀವನದಲ್ಲೂ ಒಂದು ಪ್ರಮುಖ ಘಟ್ಟ ಬರಲಿದೆ. ಅವರಿವರಿಂದ ಅಡಗಿಸಿಡಲು ಅವರಲ್ಲಿ ಇನ್ನೇನೂ ಉಳಿದಿರುವುದಿಲ್ಲ. ಬದುಕಿನ ಪಯಣದುದ್ದಕ್ಕೂ ಹಾದಿಯ ಏಳು ಬೀಳುಗಳಲ್ಲಿ, ತಗ್ಗು ದಿಣ್ಣೆಗಳಲ್ಲಿ, ತಿರುವುಗಳಲ್ಲಿ, ನದಿಯಂತೆ ಬದುಕು ಸ್ವಚ್ಛ ವಾಗಿರಲು ಸಾಧ್ಯವೇ ? ಹರಿಯುವ ನದಿ ಎಂದೂ ತನ್ನಲ್ಲಿ ಕಶ್ಮಲ ಕೊಳೆಗಳನ್ನೂ ಸೇರಿಸಿ ಒಯ್ಯುತ್ತದೆ, ಆದರೆ ಪಯಣ ನಿಲ್ಲಿಸಿದ ನದಿಯ ಕೊಳೆ ಕಶ್ಮಲಗಳು ತಳ ಸೇರುತ್ತವೆ. ನದಿ ಶುಭ್ರವಾಗುತ್ತದೆ. ನದಿಯ ಪಯಣವೂ ಕೊನೆಗೊಳ್ಳುತ್ತದೆ. ನಮ್ಮ ಜೀವನವೂ ಕೂಡಾ ಅದೇ ರೀತಿ." ಇದು ಎಂ. ವಿ. ಕಾಮತರು ತಮ್ಮನ್ನು ತಾವೇ ಕಂಡುಕೊಂಡ ಬಗೆ, ಆತ್ಮ ವಿಶ್ಲೇಷಣೆ.

ಗೌಡ ಸಾರಸ್ವತ ಸಮಾಜದ ಈ ಪುರುಷ ಸರಸ್ವತಿಗೆ ನಮ್ಮೆಲ್ಲರ ಕೃತ ಜ್ಞತೆಯ ನುಡಿಹಾರಗಳು ಸಲ್ಲಬೇಕು ತಾನೆ ?

**ಎಂ. ವಿ. ಕಾಮತರ ಜೀವನ ಹಾಗೂ ಸಾಧನೆಯ ಒಂದು ಪಕ್ಷಿನೋಟ :**

ಹುಟ್ಟು–1921ರ ಸೆಪ್ಟೆಂಬರ್ 7 ರಂದು, ಉಡುಪಿಯಲ್ಲಿ.

ಪ್ರಾಥಮಿಕ ವಿದ್ಯಾಭ್ಯಾಸ–ಬೋರ್ಡ್ ಶಾಲೆ, ಉಡುಪಿ.

ಪ್ರೌಢಶಾಲಾ ವಿದ್ಯಾಭ್ಯಾಸ–ಕ್ರಿಶ್ಚಿಯನ್ ಪ್ರೌಢಶಾಲೆ, ಉಡುಪಿ.

ಕಾಲೇಜು ವಿದ್ಯಾಭ್ಯಾಸ–ಸರಕಾರಿ ಕಾಲೇಜು, ಮಂಗಳೂರು. (1937–39)

ಕಾಲೇಜು ವಿದ್ಯಾಭ್ಯಾಸ–ಸಂತ ಕ್ಸೇವಿಯರ್ ಕಾಲೇಜು, ಮುಂಬಯಿ. (1939–41)

ಇ.ಡಿ.ಎಸ್.ಟಿ. ಆರ್ ಡೈ ವರ್ಕ್ಸ್–ರಸಾಯನ ಶಾಸ್ತ್ರಜ್ಞನಾಗಿ (1941–46)

ಫ್ರೀ ಪ್ರೆಸ್ ಗುಂಪಿನ ಪತ್ರಿಕೆಗಳೊಂದಿಗೆ–(1946–55)

ಪಿ.ಟಿ.ಐ. ಬಾತ್ಮೀದಾರರಾಗಿ, ನ್ಯೂಯಾರ್ಕ್–1955–58

ಯುನೈಟೆಡ್ ಏಷ್ಯಾ ಕಾಂಟ್ರಿಬ್ಯೂಟಿಂಗ್ ಸಂಪಾದಕರಾಗಿ–1958–59.

ಸಂಡೆ ಟೈಮ್ಸ್ ಆಫ್ ಇಂಡಿಯಾ–ಬಾತ್ಮೀದಾರರಾಗಿ(ಬೋನ್-ಪೇರಿಸ್) 1959–67

ಸಂಡೆ ಟೈಮ್ಸ್ ಆಫ್ ಇಂಡಿಯಾ–ಸಂಪಾದಕ 1967–69

ಸಂಡೆ ಟೈಮ್ಸ್ ಆಫ್ ಇಂಡಿಯಾ–ವಾಶಿಂಗ್ಟನ್ ಬಾತ್ಮೀದಾರರಾಗಿ 1969–78

ಇಲ್ಲಸ್ಟ್ರೇಟೆಡ್ ವೀಕ್ಲಿಯ–ಸಂಪಾದಕರಾಗಿ–1978–81

ಇಂದು ಶ್ರೀ ಎಂ. ವಿ. ಕಾಮತರು ತಮ್ಮ ನಿರ್ದಿಷ್ಟ ವೃತ್ತಿ ಜೀವನದಿಂದ ನಿವೃತ್ತಿ ಹೊಂದಿದ್ದಾರೆ, ಬರವಣಿಗೆಯಿಂದಲ್ಲ. ದೇಶದಾದ್ಯಂತ ದೈನಿಕ, ವಾರಿಕ, ಮಾಸಿಕ ಪತ್ರಿಕೆಗಳಿಗೆ ಲೇಖನ ಬರೆಯುತ್ತಲಿರುತ್ತಾರೆ. ಇವುಗಳಲ್ಲಿ ಕೆಲವು ಹೀಗಿವೆ :

ಟೆಲಿಗ್ರಾಫ್ ಪತ್ರಿಕೆ–ಕಲ್ಕತ್ತಾ

ಆರ್ಗನೈಸರ್–ಡೆಲ್ಲಿ

ನ್ಯೂಸ್ ಟೈಮ್–ಹೈದರಾಬಾದ್

ಉದಯಂ–ಹೈದರಾಬಾದ್

ಟೈಮ್ಸ್ ಆಫ್ ಇಂಡಿಯಾ–ಮುಂಬಯಿ

ಸಂಡೆ ಅಬ್ಸರ್ವರ್–ಮುಂಬಯಿ

ಪ್ರವಾಸಿ (ಗುಜರಾತಿ)–ಮುಂಬಯಿ

ನಿರ್ಭಯ್ ಪಥಿಕ್ (ಹಿಂದಿ)–ಮುಂಬಯಿ

ದಿ ವೀಕ್–ಕೊಚ್ಚಿನ್

ಇಂಪ್ರಿಂಟ್–ಮುಂಬಯಿ

ತರಂಗ (ಕನ್ನಡ)–ಮಣಿಪಾಲ

ಎಂ. ವಿ. ಕಾಮತ್‌ರವರು ಬರೆದ ಕೃತಿಗಳು ಭಾರತೀಯ ಸಾಹಿತ್ಯದ ಮೈಲಿಗಲ್ಲುಗಳು :

ಪಾರ್ಟೀಸ್ ಅಂಡ್ ಪೊಲಿಟಿಕ್ಸ್ ಇನ್ ಇಂಡಿಯಾ–1948

ಕರ್ನಾಟಕ ದರ್ಶನ–ಬ್ರೀಫ ಸಂಪಾದನ 1953

ಟು ದಿ ಕೇಪ್ಟನ್–ನೇವಲ್ ಕೇಡೆಟ್‌ಗಳಿಗೆ ಗ್ರಂಥಕರ್ತರ ಕೊಡುಗೆ –1968

ಪುನರಪಿ ಜನನಂ–1960

ದಿ ಯುನೈಟೆಡ್ ಸ್ಟೇಟ್ಸ್ ಅಂಡ್ ಇಂಡಿಯಾ (1776–1976)–1976

ದಿ ಫಿಲೋಸೊಫಿ ಆಫ್ ಡೆತ್ ಅಂಡ್ ಡೈಯಿಂಗ್–1978

ಪ್ರೊಫೆಶನಲ್ ಜರ್ನಲಿಸಂ–1979

ದಿ ಕಪ್ ಆಫ್ ಲವ್–1981

ದಿ ಪರ್ಸ್ಯೂಟ್ ಆಫ್ ಎಕ್ಸಲೆನ್ಸ್–1982

ದಿ ಇಸ್ಪೊಪೇಟಿವ್ ಜೇಂಕರ್–1983

ದಿ ಹಿಸ್ಟ್ರಿ ಆಫ್ ಇಂಡಿಯನ್ ಮರ್ಚೆಂಟ್ ಚೇಂಬರ್–1982

ದಿ ಪ್ರೊಫೆಶನಲ್ ಜರ್ನಲಿಸಂ–1980

ಎ ಜರ್ನಲಿಸ್ಟ್ ಹ್ಯಾಂಡ್ ಬುಕ್–1983

ಇಂಡಿಯಾ ಆಫ್ ಅವರ್ ಡ್ರೀಮ್ಸ್–1982

ರಿಡಿಸ್ಕವರಿಂಗ್ ಕರ್ನಾಟಕ–1985

ವಾಟ್ ಜರ್ನಲಿಸಂ ಈಸ್ ಆಲ್ ಎಬೌಟ್–1986

ಬಿಹೈಂಡ್ ದಿ ಬೈಲೈನ್–1985

ಇವರು ಸದಸ್ಯರೂ, ಸ್ಥಾಪಕರೂ ಆಗಿರುವ ಕೆಲವು ಪ್ರಮುಖ ಸಂಘ ಸಂಸ್ಥೆಗಳು ಇಂತಿವೆ :

ಫಾವರ್ನಾಸ್ಯೂಟಿಕಲ್ ಅಸೋಸಿಯೇಶನ್–ಸ್ಥಾಪಕರು

ಬಾಂಬೇ ಯೂನಿಯನ್ ಆಫ್ ಜರ್ನಲಿಸ್ಟ್ಸ್–1953 ಸಭಾಧ್ಯಕ್ಷ.

ಫಾರಿನ್ ಕರಸ್ಪಾಂಡೆಂಟ್ಸ್ ಅಸೋಸಿಯೇಶನ್–ವಾಶಿಂಗ್ಟನ್ ಡಿ.ಸಿ. 1978–ಸ್ಥಾಪಕ.

ಪೊಲಿಟಿಕಲ್ ಸಾಯನ್ಸ್ ಸಿಲೆಬಸ್ ಕಮಿಟಿ–80–81 ಮುಂಬಯಿ ವಿಶ್ವವಿದ್ಯಾಲಯ ಸದಸ್ಯರು

ಹಂಪೆ ಪುನರುಜ್ಜೀವನ ಸಮಿತಿ–ಹಿರಿಯ ಅಧಿಕಾರಿ.

ಬಳಕೆದಾರರ ವೇದಿಕೆಯ ಕೌನ್ಸಿಲ್–ಸದಸ್ಯ.

ಎಡಿಟರ್ಸ್ ಗಿಲ್ಡ್ ಆಫ್ ಇಂಡಿಯಾ–ಸವಸ್ಯ.

ಡಾ॥ ಟಿ. ಎಂ. ಎ. ಪೈ ಫೌಂಡೇಶನ್–ಟ್ರಸ್ಟಿ.

—೦—

# ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ

"ಮಂಜೇಶ್ವರ ಕಾಸರಗೋಡುಗಳು ಕರ್ನಾಟಕದ ಅವಿಭಾಜ್ಯ ಅಂಗಗಳು. ಕಾಸರಗೋಡನ್ನು ಕೇರಳದಲ್ಲಿ ಸೇರಿಸಿದವರು ಯಾವಾಗಲೂ ನನಗೆ ಶತ್ರುಗಳೇ. ನಾನು ಬದುಕಿರುವಾಗಲೇ ಇದನ್ನು ನೋಡಬೇಕಾಯಿತಲ್ಲಾ? ಸದ್ಯ, ನನ್ನ ಕಾಲನ್ನು ಹಿಡಿದೊಯ್ಯಬೇಡಿ. ನನ್ನ ಕಾಲು ನನಗೇ ಇರಲಿ." ಮಾತು ಗರ್ಜನೆ. ಅದರ ಹಿಂದೆ ನಿಶ್ಚಿತವಾದ ಪ್ರೇಮದ ಸರಳ ಹೃದಯ. ಇವುಗಳ ದ್ಯೋತಕವೇ ಈ ಮಾತು. ಕನ್ನಡ ನಾಡಿಗೆ ಕನ್ನಡ ಜನತೆಗಾದ ಅನ್ಯಾಯವನ್ನು ನೆನೆನೆನೆಯುತ್ತಲೇ ಕೊರಗಿ ಕಣ್ಮುಚ್ಚಿದ ಕನ್ನಡಮ್ಮನ ಕರುಣೆಯ ಕಂದ ಬೇರಾರೂ ಅಲ್ಲ, ಅವರೇ ಮಂಜೇಶ್ವರ ಗೋವಿಂದ ಪೈಗಳು. ಅವರ ಸರಳತೆ, ಕಂಡದ್ದನ್ನು ಕಂಡಂತೆ ಆಡುವ ಗುಣ, ಕಾವ್ಯ ಗಾಂಭೀರ್ಯ ಇವುಗಳನ್ನು ನೋಡಿಯೇ ಮದರಾಸು ಸರಕಾರ ಅವರನ್ನು 'ರಾಷ್ಟ್ರಕವಿ' ಎಂದು ಸನ್ಮಾನಿಸಿ ತಾನು ಧನ್ಯವಾಯಿತು.

ತಂದೆ ಮಂಗಳೂರಿನ ಸಾಹುಕಾರ ತಿಮ್ಮ ಪೈ. ಗೋವಿಂದ ಪೈಯವರೇ ಜೇಷ್ಠ ಪುತ್ರರು. ಮೂರು ಜನ ತಮ್ಮಂದಿರು, ಮೂವರು ಸಹೋದರಿಯರು. ಆಗರ್ಭ ಶ್ರೀಮಂತರು. ಅವರ ಶಿಕ್ಷಣ ಮಂಗಳೂರಿನಲ್ಲಿಯೇ ನಡೆಯಿತು. ಚಿಕ್ಕಂದಿನಿಂದಲೂ ತುಂಬು ಪ್ರತಿಭೆಯಿಂದ ಕೂಡಿದ ಇವರು ಸಕಲವನ್ನೂ ಅಭ್ಯಸಿಸುವ, ಅಭ್ಯಸಿಸಿದುದನ್ನು ಅರಗಿಸಿಕೊಳ್ಳುವ ಸಾಮರ್ಥ್ಯ ಪಡೆದವರಾಗಿದ್ದರು. ಆ ಕಾರಣ ಇವರಿಗೆ ವಿದ್ಯಾಭ್ಯಾಸ ಕಠಿಣವೆನಿಸಲಿಲ್ಲ. ಇವರಿಗೆ ತಕ್ಕ ಶ್ರೇಷ್ಠ ಗುರುಗಳೆಂದರೆ ಪಂಜೆ ಮಂಗೇಶರಾಯರು. ಪಂಜೆಯವರೆಂದರೆ ಸರಸ್ವತೀ ಪುತ್ರರು. ಇವರ ಚೇತನ ಸಾರಸ್ವತ ಚೇತನ. ಇಂತಹ ಶ್ರೇಷ್ಠ, ಪೂಜ್ಯ, ಗುರುಗಳ ಸಾನ್ನಿಧ್ಯದಲ್ಲಿ, ಖ್ಯಾತ ಪತ್ರಿಕೋದ್ಯಮಿ ಎಂ. ಎನ್. ಕಾಮತರಂತಹ ಸ್ನೇಹಿಗರ ಒಡನಾಟದಲ್ಲಿ ಇವರು ಬೆಳೆದರು. ತಮ್ಮ ಶಿಕ್ಷಣವನ್ನು ಮಂಗಳೂರಿನಲ್ಲಿ ಮುಗಿಸಿ ಸಾವಿರದ ಒಂಬೈನೂರ ಮೂರನೆಯ ಇಸವಿಯಲ್ಲಿ ಪದವಿ ಶಿಕ್ಷಣಕ್ಕಾಗಿ ಗೋವಿಂದ ಪೈಗಳು ಮದರಾಸಿಗೆ ಹೋದರು. ಮದರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿ ಇವರ ವ್ಯಾಸಂಗ ಮುಂದುವರಿಯಿತು. 1903 ರಿಂದ 1906ರ ವರೆಗೆ ಉಚ್ಚ ಶಿಕ್ಷಣವನ್ನು ವ್ಯವಸ್ಥಿತವಾಗಿ ಮುಂದುವರಿಸುತ್ತಿದ್ದರು. ಆದರೆ ಅಂತಿಮ ಬಿ. ಎ. ತರಗತಿಯಲ್ಲಿದ್ದಾಗ ಒಂದು ದುರ್ಘಟನೆ ಸಂಭವಿಸಿ, ಅವರ ಪೂಜ್ಯ ತಂದೆಯವರು ಹರಿಚರಣವನ್ನು ಸೇರಿದ್ದರಿಂದಾಗಿ ಶಿಕ್ಷಣ ಅಲ್ಲಿಗೇ ನಿಂತುಹೋಯಿತು. ತಂದೆಯ ಮರಣದ ಸುದ್ದಿ ತಿಳಿದ ಕೂಡಲೇ ಗೋವಿಂದ ಪೈಗಳು ಮಂಗಳೂರಿಗೆ ಬಂದರು. ತಾವು ಹಿರಿಯ ಮಗನಾದ್ದ

ರಿಂದ ತೆರವಾದ ತಂದೆಯ ಸ್ಥಾನದಲ್ಲಿ ತಾವು ನಿಂತು ಸಂಸಾರದ ಹೊರೆ ಹೊರಬೇಕಾಯಿತು. ಅಂದಿಗೇ ಅವರ ಕಾಲೇಜು ಶಿಕ್ಷಣ ಮುಗಿಯಿತು. ನಿಜ, ಆದರೆ ವ್ಯಾಸಂಗ ಮುಗಿಯಲಿಲ್ಲ. ನಿರಂತರವಾಗಿ ಹಲವು ಹತ್ತೆಂಟು ಶ್ರೇಷ್ಠ ಕೃತಿಗಳನ್ನು ಅಧ್ಯಯನ ಮಾಡಿ ತಮ್ಮ ಜ್ಞಾನವನ್ನು ವಿಕಾಸಗೊಳಿಸಿದರು. ಇವರು ದ್ವಿತೀಯ ಬಿ. ಎ. ತರಗತಿಯಲ್ಲಿ ಇಂಗ್ಲೀಷ್‌ನಲ್ಲಿ ಹೆಚ್ಚು ಅಂಕಗಳನ್ನು ಗಳಿಸಿದ್ದರಿಂದ ಒಂದು ಚಿನ್ನದ ಪದಕವೂ ಇವರಿಗೆ ಲಭ್ಯವಾಗಿತ್ತು. ಗೋವಿಂದ ಪೈ ಅವರು ಮನೆತನದ ಗೌರವಕ್ಕೆ ತಕ್ಕಂತೆ ಸಾಂಸಾರಿಕ, ಧಾರ್ಮಿಕ ಕಾರ್ಯಗಳೆಲ್ಲವನ್ನೂ ನಿಷ್ಠೆಯಿಂದ ನಿರ್ವಹಿಸಿದರು. ಅನಂತರ ಮತ್ತೊಂದು ಜವಾಬ್ದಾರಿ ಅವರ ಮೇಲೆ ಬಿದ್ದಿದ್ದರಿಂದ ತಮ್ಮ ತಾಯಿಯ ತವರಾದ ಮಂಜೇಶ್ವರಕ್ಕೆ ಹೋಗಿ ಅಲ್ಲಿಯೇ ನೆಲೆನಿಂತರು. ಅಂದರೆ ತಾಯಿಯ ಕಡೆಯಿಂದ ದತ್ತಕವಾದ ಮಂಜೇಶ್ವರದಲ್ಲಿದ್ದ ಸಮಸ್ತ ಆಸ್ತಿಗೂ ತಾವೇ ಒಡೆಯರಾಗಬೇಕಾಗಿ ಬಂತು. ಆದರಿಂದಾಗಿ ಅಲ್ಲಿಯೇ ನೆಲೆನಿಂತವರಾದ್ದರಿಂದ ಮಂಗಳೂರಿನ ಗೋವಿಂದ ಪೈಯವರು, ಮಂಜೇಶ್ವರ ಗೋವಿಂದ ಪೈ ಎನಿಸಿದರು.

ಶ್ರೀಮತಿ ಕೃಷ್ಣಾಬಾಯಿಯವರು ಗೋವಿಂದ ಪೈ ಅವರ ಧರ್ಮಪತ್ನಿ. ಸಾಧ್ವೀ ಶಿರೋಮಣಿ. ಅನಸೂಯೆ, ಅರುಂಧತಿಯವರ ಸಾಲಿಗೆ ಸಲ್ಲಬಲ್ಲಂಥವರು. ಆದರೆ ಅವರಿಗೆ ಆಸ್ತಮಾ ಜೀವಕ್ಕಂಟಿಕೊಂಡು ಬಂದ ಅಪರಿಹಾರ್ಯ ಕಾಯಿಲೆಯಾಗಿತ್ತು. ಅವರ ನರಳುವಿಕೆಯಲ್ಲಿ ಅವರಿಗೆ ನೆರಳಾಗಿ ನಿಂತವರು ಪತಿ ಪೈ. ನಿರಂತರ ಅವರ ಸೇವೆ ಮಾಡಿದರೂ ಪತ್ನಿಯನ್ನು ಬಹುಕಾಲ ಗೋವಿಂದ ಪೈಯವರು ಬದುಕಿಸಿಕೊಳ್ಳಲಾಗಲಿಲ್ಲ, ಕೃಷ್ಣಾಬಾಯಿಯವರು ತಮ್ಮ ನಾಲ್ವತ್ತೈದನೆಯ ವಯಸ್ಸಿನಲ್ಲಿಯೇ ಕಣ್ಣು ಮುಚ್ಚಿದರು. ಅವರ ದಾಂಪತ್ಯ ಜೀವನದ ನೆನಪಿಗಾಗಿ ಮೂವತ್ತೈದು ವೃತ್ತಗಳುಳ್ಳ ಪ್ರಾಸ ರಹಿತವಾದ ಗೊಮ್ಮಟ ಜಿನಸ್ತುತಿ ಎಂಬ ಕವನವನ್ನು ರಚಿಸಿದರು. ಇದನ್ನು ತಮ್ಮ ಧರ್ಮಪತ್ನಿಯವರಿಗೆ ಶ್ರದ್ಧಾಂಜಲಿ ಪೂರ್ವಕವಾಗಿ 1928 ರಲ್ಲಿ ಕಾಣಿಕೆಯಾಗಿ ಅರ್ಪಿಸಿದರು. ಮತ್ತೆ 'ನಂದಾದೀಪ'ವೆಂಬ 87 ಕವನಗಳ ಒಂದು ಸಂಕಲನವನ್ನೂ ಪ್ರಕಟಿಸಿ ಬಾಷ್ಪಾಂಜಲಿಯಾಗಿ ತಮ್ಮ ಧರ್ಮಪತ್ನಿಗೆ ಅರ್ಪಿಸಿದರು.

ಗೋವಿಂದ ಪೈ ಅವರ ಸಂಸಾರ ಜೀವನ ಅಷ್ಟೇನೂ ಸಿಹಿಯಾಗಿರಲಿಲ್ಲ. ರೋಗಗ್ರಸ್ಥ ಪತ್ನಿಯಿಂದ ಮಕ್ಕಳನ್ನೂ ಪಡೆಯಲಾಗಲಿಲ್ಲ. ಅಪುತ್ರವಂತರಾದರೂ ಬದುಕಿನಲ್ಲಿ ಅತೃಪ್ತಿ ಇರಲಿಲ್ಲ. ಅವರ ಬದುಕಿಗೆ ಆಲಂಬನವಾದವರು ಅವರ ತಮ್ಮ ಸುಬ್ರಾಯ ಪೈ. ತಮ್ಮ ಮಕ್ಕಳನ್ನೂ, ಮನೆಯ ಅಕ್ಕಪಕ್ಕದ ಮಕ್ಕಳನ್ನೂ ತಮ್ಮ ಮಕ್ಕಳೆಂದೇ ಪ್ರೀತಿಸಿ ತಾವೂ ಮಗುವಿನಂತೆ ಅವರೊಡನೆ ಆಡಿ ಹಾಡಿ ಕಾಲಕಳೆಯತೊಡಗಿದರು. ಸಂಸಾರದ ಸಂಪೂರ್ಣ ಹೊಣೆಗಾರಿಕೆಯನ್ನು ತಮ್ಮ ಸುಬ್ರಾಯ

ಪೈಯವರ ಹೆಗಲ ಮೇಲೆ ಇಟ್ಟರು. ಮಕ್ಕಳ ಜೊತೆಯಲ್ಲಿ ಆಟ ಪಾಠ, ಉಳಿದ ಕಾಲ ವ್ಯಾಸಂಗದಲ್ಲಿ. ಹೀಗೆ ಅವರ ದೈನಂದಿನ ಕಾಯಕ ಸಾರಸ್ವತ ತಪಸ್ಸಾಗಿ ಅಧ್ಯಯನದಲ್ಲಿ ಅದು ಬೇರೂರಿತು. ತಮ್ಮ ಅಧ್ಯಯನದ ಕೋಣೆಯಲ್ಲಿದ್ದ ಪತ್ನಿ ಕೃಷ್ಣಾಬಾಯಿಯವರ ಭಾವಚಿತ್ರ ಅವ್ಯಕ್ತರೀತಿಯಲ್ಲಿ ಅವರಿಗೆ ಸ್ಫೂರ್ತಿ ಪ್ರೇರಣೆಗಳನ್ನು ಕೊಡುತ್ತಿತ್ತು. ಪೈ ಅವರು ನಿತ್ಯವೂ ಸ್ನಾನ ಸಂಧ್ಯಾವಂದನೆಗಳನ್ನು ಮುಗಿಸಿ ಬಂದ ಕೂಡಲೇ ಒಂದು ಪುಷ್ಪವನ್ನು ತಂದು ತಮ್ಮ ಪತ್ನಿಯ ಭಾವಚಿತ್ರಕ್ಕೆ ಸಮರ್ಪಿಸಿ ಆನಂದಿಸುತ್ತಿದ್ದರು. ಬನ್ನಂಜೆ ಗೋವಿಂದಾಚಾರ್ಯರು ಪ್ರೀತಿಯಿಂದ ಕರೆದ "ಬೆಳ್ಳಿ ಮೀಸೆಯ ಮಗು" ಶ್ರೀ ಗೋವಿಂದ ಪೈ ಅವರು ರಾಷ್ಟ್ರಕವಿಗಳಾಗಿ ಶ್ರೇಷ್ಠ ಸಂಶೋಧಕರಾಗಿ, ಮಕ್ಕಳ ಮೆಚ್ಚಿನ ತಾತನಾಗಿ 6–9–1963ನೆಯ ಶುಕ್ರವಾರದಂದು ತಮ್ಮ 80ನೆಯ ವಯಸ್ಸಿನಲ್ಲಿ ನಿಧನರಾದರು.

**ಕಾವ್ಯ :**

ಗೋವಿಂದ ಪೈ ಎಂಬುದು ಸಂಶೋಧನೆಗೆ ಇರುವ ಬೇರೊಂದು ಹೆಸರು. ಕನ್ನಡ ಸಾಹಿತ್ಯ ಪೃಥ್ವಿಯನ್ನು ಹೊತ್ತ, ರಾ. ನರಸಿಂಹಾಚಾರ್ಯ, ಕಿಟ್ಟೆಲ್, ರೈಸ್, ಪಂಜೆ ಮಂಗೇಶರಾಯರು, ಮುದ್ದಣ್ಣ ಮೊದಲಾದ ಹಿರಿಯ ದಿಗ್ಗಜಗಳಲ್ಲಿ ಗೋವಿಂದ ಪೈ ಒಬ್ಬರು. ಇವರ ಸಾಹಿತ್ಯ ಕೃಷಿ ಚಿಕ್ಕಂದಿನಲ್ಲಿ ಆರಂಭವಾಯಿತು. ಮೊದ ಮೊದಲು ಕೆಲವು ನಾಟಕಗಳನ್ನು ಬರೆಯಲು ಪ್ರಾರಂಭಿಸಿದರು. ಅದರಲ್ಲಿ ತೃಪ್ತಿಕಾಣದೆ ಕವಿತೆಗೆ ಕೈ ಹಾಕಿದರು. ಒಂದು ರೀತಿಯಲ್ಲಿ ಅವರು ಪಕ್ಷಾಂತರ ಮಾಡಿದ್ದು ಒಳ್ಳೆಯದೇ ಆಯಿತು. 1900ರಲ್ಲಿ ಮಂಗಳೂರಿನಲ್ಲಿ ಪ್ರಕಟವಾಗುತ್ತಿದ್ದ 'ಸುವಾಸಿನಿ' ಪತ್ರಿಕೆಗೆ 'ಸುವಾಸಿನಿ' ಎಂಬ ಶೀರ್ಷಿಕೆಯಲ್ಲಿ ಮೂರು ಕಂದಪದ್ಯಗಳನ್ನು ಬರೆದು ಕಳುಹಿಸಿ ಅದಕ್ಕಿಟ್ಟಿದ್ದ ಮೂರು ರೂಪಾಯಿಯ ಬಹುಮಾನವನ್ನು ಗಿಟ್ಟಿಸಿಕೊಂಡರು. ಆ ಪದ್ಯ ರಚನೆಯನ್ನು ಮಾಡಿದ್ದು ಅವರು ಎಂಟನೆಯ ತರಗತಿಯಲ್ಲಿ ಓದುತ್ತಿದ್ದಾಗ. 'ಸುವಾಸಿನಿ' ಕೊಟ್ಟ ಈ ಪ್ರೋತ್ಸಾಹದಿಂದಾಗಿ ಮುಂದೆ ಕಾವ್ಯ ರಚನೆಯನ್ನೇ ಒಲಿದು ಅದರಲ್ಲೇ ಕೃಷಿ ಮಾಡತೊಡಗಿದರು. ಅದಕ್ಕೆ ಅವರ ಪೂಜ್ಯ ಗುರುಗಳಾದ ಪಂಜೆ ಮಂಗೇಶರಾಯರ ಮಾರ್ಗದರ್ಶನ, ಆಶೀರ್ವಾದಗಳೂ ಇದ್ದವು. ಆದರೆ ಕನ್ನಡ ಕಾವ್ಯಕ್ಕೆ ಅಂಟಿಕೊಂಡು ಬಂದಿದ್ದ ಒಂದು ಜಾಡ್ಯವೋ ಎನ್ನುವಂತಿದ್ದ ಪ್ರಾಸದ ತ್ರಾಸನ್ನು ನೀಗಬೇಕೆಂದು ಗೋವಿಂದ ಪೈ ಅವರ ಮನಸ್ಸು ಸದಾ ತುಡಿಯುತ್ತಿತ್ತು. ಹೇಗಾದರೂ ಮಾಡಿ ಕನ್ನಡ ಕಾವ್ಯಕ್ಕೆ ಪ್ರಾಸ ಬಂಧನದಿಂದ ಮುಕ್ತಿಯನ್ನು ದೊರಕೊಳಿಸಬೇಕು. ಆ ಮೂಲಕ ಕನ್ನಡ ಕಾವ್ಯಕ್ಕೆ ಕಾಯಕಲ್ಪವನ್ನು ಮಾಡಬೇಕೆಂಬ ಹಂಬಲ ಅವರದಾಗಿತ್ತು. ಈ ಪ್ರಾಸೋಲ್ಲಂಘನದ ಅಭಿಪ್ರಾಯವನ್ನು ತಮ್ಮ ಗುರುಗಳಾದ ಪಂಜೆಯವರ ಮುಂದಿರಿಸಿದರು. ಆದರೆ ಪಂಜೆಯವರ್ಯ

ಪ್ರಾಸದ ಅನಿವಾರ್ಯತೆ ಮತ್ತು ಅಂದ ಇವುಗಳನ್ನು ಒತ್ತಿ ಹೇಳಿ ಪ್ರಾಸ ಪಕ್ಷವನ್ನು ಎತ್ತಿ ಹಿಡಿದರು. ಗೋವಿಂದ ಪೈಯವರು ತಮ್ಮ ನಿರ್ಧಾರವನ್ನು ಕೈ ಬಿಡಲಿಲ್ಲ. 1911ರಲ್ಲಿ ಗುಜರಾತಿನ ಬರೋಡಾದಲ್ಲಿ ಇದ್ದಾಗ ಪ್ರಾಸೋಲ್ಲಂಘನೆಯ ಪ್ರತಿಜ್ಞೆಯನ್ನು ಸ್ವೀಕರಿಸಿದರು. "ಪ್ರಾಸವನೀಗಲೇ ತೊರೆದು ಬಿಡುವುದು ನಿಶ್ಚಯಂ" ಎಂಬ ಪ್ರತಿಜ್ಞೆಯನ್ನು ಕೈಗೊಂಡು ರವೀಂದ್ರನಾಥ ಠಾಗೋರರ ಎರಡು ಗೀತೆಗಳನ್ನೂ, ಮಹಮ್ಮದ್ ಇಕ್ಬಾಲರ ಒಂದು ಕವನವನ್ನೂ ಅನುವಾದಿಸಿದರು. ಅವು 'ಸ್ವದೇಶಾಭಿಮಾನಿ' ಎಂಬ ಪತ್ರಿಕೆಯಲ್ಲಿ ಪ್ರಕಟವಾದುವು. ಪ್ರಕಟವಾದ ಮಾರನೆಯ ದಿನವೇ ಪೈಯವರ ಪ್ರಾಸೋಲ್ಲಂಘನೆಯನ್ನು ಖಂಡಿಸಿ ಪ್ರತಿಭಟನೆಯ ಪತ್ರಗಳು ಬಂದವು. ಆದರೆ ಗಂಡೆದೆಯ ಪೈ ಸಮರ್ಥ ರೀತಿಯಲ್ಲಿ ಪ್ರತಿಭಟನಕಾರರಿಗೆ ಸಮಾಧಾನ ಹೇಳಿದರು. ಅಂದಿನಿಂದ ಮುಂದೆ ಪ್ರಾಸಕ್ಕಾಗಿ ಭಾವವನ್ನು ಬಲಿಗೊಡುವ ಪದ್ಧತಿಗೆ ತಿಲಾಂಜಲಿ ಕೊಟ್ಟು ಮುಂದಿನ ಕವಿಗಳ ಕೈ ಮತ್ತು ಮನಗಳನ್ನು ಮುಕ್ತಗೊಳಿಸಿದರು. ಈ ರೀತಿ ಕನ್ನಡದ ಒಂದು ಸಂಪ್ರದಾಯಕ್ಕೆ ಕೊಡಲಿ ಏಟು ಕೊಟ್ಟು ಪ್ರಗತಿಗೆ ಪೈ ಕಾರಣರಾದರು. ಪ್ರಾಸವನ್ನು ಬಿಟ್ಟರೂ ಅದರ ಅಂದ ಕೆಡದಂತೆ ಕಾವ್ಯವನ್ನು ರಚನೆ ಮಾಡಿದುದಕ್ಕೆ ಸಾಕ್ಷಿರೂಪವಾಗಿ 'ಗೊಲ್ಗೊಥಾ' ಖಂಡ ಕಾವ್ಯದ ಎರಡು ಸಾಲುಗಳನ್ನು ಹೇಳಬಹುದು.

'ಅಂದಿದೋ ವಸಂತ ಪೌರ್ಣಿಮೆಯು ನಡುಹಗಲ ಸಿರಿಹೊತ್ತು
ಭಾಸ್ಕರನ ಸುಳಿವಿಲ್ಲ ನೋಡೊಡನೆ ಬರಮೋಡ ಬಾನಗಲ ಚಾಚಿಹುದು
'ನೋಹ'ನ ಕಾಲದ ಪ್ರಳಯ ಮೇಘವನೆ ಮುತ್ತಿಹುದು....'

'ಗಿಳಿವಿಂಡು' ಗೋವಿಂದ ಪೈ ಅವರ ಮೊದಲ ಕವನ ಸಂಕಲನ. ಅದನ್ನು ಅವರ ಗುರುಗಳಾದ ಪಂಜೆಯವರು ತಮ್ಮ 'ಬಾಲಸಾಹಿತ್ಯ ಮಂಡಲ'ದ ಮೂಲಕ ಪ್ರಕಟಿಸಿದರು. 'ನಂದಾದೀಪ' ಅವರ ದ್ವಿತೀಯ ಕವನ ಸಂಕಲನ. ಆದರೆ ಅವರು ಬದುಕಿದ್ದಾಗ ಇದು ಪ್ರಕಟವಾಗಲಿಲ್ಲ. ಆದರೆ ಅನಂತರ ಇದು ಪ್ರಕಟಣೆಗೊಂಡಿತು. ಅವರ ಅಲ್ಲಿ ಇಲ್ಲಿ ಚದುರಿ ಚೆಲ್ಲಿ ಹೋಗಿದ್ದ ಕವನಗಳನ್ನು ಒಂದೆಡೆ ಕೂಡಿಸಿ 'ಹೃದಯ ರಂಗ' ಎಂಬ ಹೆಸರಿನಲ್ಲಿ 1969ರಲ್ಲಿ ಅವರ ಅಭಿಮಾನಿಗಳು ಪ್ರಕಟಿಸಿದರು. ಇದು ಪೈಯವರ ಮೂರನೆಯ ಕವನ ಸಂಕಲನ. ಕೂಡಲಿ ಚಿದಂಬರಂ ಅವರು ಪೈಯವರ ಮೂವತ್ತೈದು ಪದ್ಯಗಳನ್ನು ಆರಿಸಿ 'ವಿಟಂಕ' ಎಂಬ ನಾಲ್ಕನೆಯ ಕವನ ಸಂಕಲನವನ್ನು ಹೊರತಂದರು. ಅವರ ಕೆಲವು ಪ್ರಾಥಮಿಕ ಕವನಗಳು 'ಇಂಗಡಲು' ಎಂಬ ಶೀರ್ಷಿಕೆಯಲ್ಲಿ ಹೊರಬಂದವು.

ಪೈ ಅವರು ಸಂಶೋಧನ ಹಾಗೂ ಕಾವ್ಯ ಸೃಷ್ಟಿ ಇವೆರಡರಲ್ಲಿ ಸಮಾನ ಸಿದ್ಧಿಯನ್ನು ಪಡೆದಿದ್ದರು. ಇವರ 'ಗಿಳಿವಿಂಡು' ಸಂಕಲನವು. ಹೊಸ ಕಾವ್ಯ ಪದ್ಧತಿಗೆ

ಹೆದ್ದಾರಿ ಮಾಡಿಕೊಟ್ಟ ಕೆಲವೇ ಪುಸ್ತಕಗಳಲ್ಲಿ ಒಂದು. ಇವರು ತಮ್ಮ ಕವನಗಳಲ್ಲಿ ಹೊಸ ಭಾವ, ಹೊಸ ಛಂದಸ್ಸು, ಹೊಸ ಪದ ಪ್ರಯೋಗ, ಹೊಸ ಕಟ್ಟಡ, ಪ್ರಾಸವನ್ನು ಬಿಟ್ಟು ಪದ್ಯ ಬರೆವ ದಿಟ್ಟತನ-ಹೀಗೆ ತಮ್ಮ ಸ್ವಂತಿಕೆ ಮೆರೆದಿದ್ದಾರೆ. ಇಂಗ್ಲಿಷ್‌ನ 'ಸಾನೆಟ್'ನಂತೆ ಕನ್ನಡದಲ್ಲಿ ಹದಿನಾಲ್ಕು ಪಂಕ್ತಿಯ ವೃತ್ತದಲ್ಲಿ ಬರೆದ 'ಗಿಳಿವಿಂಡು' ನಲ್ಲಿ ನಾಲ್ವತ್ತೈದು ಕವಿತೆಗಳಿವೆ. ಪೈಯವರಿಗೆ ಪ್ರಿಯವಾದ ಒಂದು ವೃತ್ತರೂಪವಿದೆ. ಇದು ಇಂಗ್ಲಿಷ್‌ನ 'ಸಾನೆಟ್'ಗೆ ಸಂವಾದಿಯಾದ ಚತುರ್ದಶಪದಿ. 1916ರಲ್ಲಿ ರಚನೆಯಾದ ಇದು ಪೈಯವರ ಮೊದಲ ಚತುರ್ದಶಪದಿ. ಅಲ್ಲಿಂದೀಚೆಗೆ 'ಹಿರೋಶಿಮಾ' 'ಮೂವತ್ತೈದು ಲಕ್ಷ' 'ಭಾರತದ ಸ್ವಾತಂತ್ರ್ಯದ ಗಾಯತ್ರಿ' 'ಈ ಮಹಾಯುದ್ಧದ ವೀರರು' ಹೀಗೆ ಈ ಕವಿಯ ಮನಸ್ಸು ಹಳೇ ಕಾಲದಲ್ಲಿ ಬೇರೂರಿದ್ದರೂ ಹೊಸ ಕಾಲಕ್ಕೆ ಹೊಂದಿ ಹಬ್ಬಿ ಹರಡಿ ಜೀವಂತ ಚೇತನವಾಗಿದೆ.

ಆದರೆ ಗೋವಿಂದ ಪೈ ಅವರ ಅಪೂರ್ವ, ಅಮೋಘ ಅಮೂಲ್ಯ ಕಾವ್ಯ ಕಾಣಿಕೆಗಳೆಂದರೆ ಗೊಲ್ಗೊಥಾ ಮತ್ತು ವೈಶಾಖಿ ಎಂಬ ಅವಳಿ ಕವನಗಳು (Companian poems). ಇವು ಖಂಡ ಕಾವ್ಯಗಳು. ಹೊರನೋಟಕ್ಕೆ ಈ ಎರಡೂ ಕವನಗಳ ವಸ್ತು ಒಂದೆ. ವೈಶಾಖಿ, ಏಸುಕ್ರಿಸ್ತನ ಕೊನೆಯ ದಿನಗಳನ್ನು ಕುರಿತದ್ದಾಗಿದೆ. ತಥಾಗತನ ಅಂತಿಮ ದಿನದ ಕತೆ ಗೊಲ್ಗೊಥಾ. ಬೈಬಲನ ಕತೆ ತಿಳಿಯದೆ ಇವರ 'ಗೊಲ್ಗೊಥಾ'ವನ್ನಾಗಲೀ, ಬೌದ್ಧಮತ ಪ್ರಕ್ರಿಯೆ ಗೊತ್ತಿಲ್ಲದೆ ಇವರ 'ವೈಶಾಖಿ'ಯನ್ನಾಗಲೀ ಅರ್ಥಮಾಡಿಕೊಳ್ಳುವುದು ಸಾಧ್ಯವೇ ? ಅನ್ನಿಸುತ್ತದೆ.

ಗೋಲ್ಗೊಥಾದಲ್ಲಿ 377 ಸಾಲುಗಳಿದ್ದರೆ ವೈಶಾಖಿಯಲ್ಲಿ 732 ಸಾಲುಗಳಿವೆ. ಇವೆರಡೂ ವಿಭಿನ್ನ ಧಾರ್ಮಿಕ ಪುರುಷರ ಧರ್ಮಬೋಧೆಯನ್ನು ಕುರಿತದ್ದಾದ್ದರಿಂದ ಹೆಚ್ಚು ಎಚ್ಚರಿಕೆಯನ್ನೂ, ಭಕ್ತಿಯನ್ನೂ ತಮ್ಮಲ್ಲಿ ಮೈಗೂಡಿಸಿಕೊಂಡಿದ್ದಾರೆ ಗೋವಿಂದ ಪೈಯವರು. 'ಗೋಲ್ಗೊಥಾ' ರಚನೆಗೆ ಹೀಬ್ರೂ ಭಾಷೆಯ ಮೂಲವನ್ನೂ 'ವೈಶಾಖಿ'ಗೆ ಪಾಲಿ ಭಾಷೆಯ ಗ್ರಂಥಗಳನ್ನೂ ನಿಷ್ಠೆಯಿಂದ ಅಧ್ಯಯನ ಮಾಡಿದ್ದಾರೆ. ಇವೆರಡರಲ್ಲಿ ಗೋಲ್ಗೊಥಾ ಮೊದಲನೆಯದು. ಇದರಲ್ಲಿ ಜಗತ್ತಿನ ಜ್ಯೋತಿ ಸ್ವರೂಪನಾಗಿ ಬಂದ ಏಸುನಾಥನ ಅಂತಃಕರಣ ಮತ್ತು ಅಮರತ್ವಗಳನ್ನು ಸ್ಥಾಪಿಸಿದ್ದಾರೆ. ವೈಶಾಖಿ ಬುದ್ಧದೇವನ ಬದುಕಿಗೆ ಕೊಟ್ಟ ಒಂದು ಅರ್ಥಪೂರ್ಣ ಶೀರ್ಷಿಕೆ. ಏಕೆಂದರೆ ಸಿದ್ಧಾರ್ಥ ಹುಟ್ಟಿದ್ದು ವೈಶಾಖ ಶುಕ್ಲ ಪೌರ್ಣಮೆಯ ದಿವಸ. ಅವನು ಬುದ್ಧನಾದದ್ದು ವೈಶಾಖ ಶುಕ್ಲ ಪೌರ್ಣಮೆಯಂದೆ. ಮತ್ತೆ ನಿರ್ವಾಣ ಪಡೆದದ್ದೂ ವೈಶಾಖ ಶುಕ್ಲ ಪೌರ್ಣಮೆಯಂದೇ. ಮಹಾಪುರುಷರ ಭವ್ಯ ಜೀವನದ ಮೂರು ಪ್ರಮುಖ ಘಟ್ಟಗಳನ್ನೂ ಒಂದೇ ದಿನ ಪ್ರಕಟಿಸುವುದರಿಂದ

'ವೈಶಾಖಿ' ಎಂಬುದು ತುಂಬಾ ಸಾಂಕೇತಿಕವಾದ ಶೀರ್ಷಿಕೆ. ಗೋಲ್ಗೊಥಾ ಸ್ಥಳ ಪ್ರಧಾನವಾದದ್ದು.

ರಾಜರತ್ನ ಅವರ ದೃಷ್ಟಿಯಲ್ಲಿ 'ಗೋಲ್ಗೊಥಾ' ಕವಿ ಚಕ್ರವರ್ತಿ ರನ್ನನ ಗದಾಯುದ್ಧವಿದ್ದಂತೆ ; ವೈಶಾಖಿ ಅದೇ ಕವಿಯ ಅಜಿತ ತೀರ್ಥಂಕರ 'ಪುರಾಣ ತಿಲಕ' ವಿದ್ದಂತೆ. ಅದು ಕಾಪ್ಯಾಂಗ, ಇದು ಭವ್ಯಾಂಗ. ಅದೇ ರೀತಿ ವಿ.ಎಂ. ಇನಾಂದಾರರ ಅಭಿಮತದಂತೆ ಗೋಲ್ಗೊಥಾ ಧವಲಗಿರಿ, ವೈಶಾಖಿ ಕಾಂಚನಗಂಗಾ. ಈ ಎರಡು ಕೃತಿಗಳಲ್ಲೂ ಇಬ್ಬರು ಮಹಾಪುರುಷರ ಅಂತ್ಯದ ದಿನಗಳನ್ನು ಸೂಚಿಸಿದ್ದಾರೆ. ಈ ಇಬ್ಬರು ಧಾರ್ಮಿಕ ಮಹಾಪುರುಷರ ಸಾವಿನ ಬಗೆಗಳಲ್ಲಿ ತೀರಾ ಭಿನ್ನತೆ ಇದೆ. 'ಗೋಲ್ಗೊಥಾ'ದಲ್ಲಿ ಮುವತ್ತೆರಡು ವರ್ಷದ ಏಸುನಾಥ ಸಹಜವಲ್ಲದ, ಮೂರ್ಖರೂ, ದುಷ್ಟರೂ ಹೇರಿಸಿದ ಯಾತನೆಯ ಸಾವನ್ನು ಎದುರಿಸುತ್ತಾನೆ. ಚಮ್ಮಟಿಕೆಯಿಂದ ಹೊಡೆದು ಕೆಂಪು ಬಟ್ಟೆ ಹೊದಿಸಿ ಮುಳ್ಳಿನ ಕಿರೀಟವಿಟ್ಟು– 'ಯಹೂದ್ಯರರಸನೆ ಸ್ವಸ್ತಿ' ಎಂದು ಹಾಸ್ಯ ಮಾಡಿ ಮೆರವಣಿಗೆ ಮಾಡಿ ಇಬ್ಬರು ಕಳ್ಳರ ನಡುವೆ ಶಿಲುಬೆಗೇರಿಸಿ ಮೊಳೆ ಹೊಡೆಯುತ್ತಾರೆ. 'ವೈಶಾಖಿ'ಯಲ್ಲಿ ಬುದ್ಧನಿಗೆ ಎಂಬತ್ತು ವರ್ಷಗಳ ತುಂಬು ಆಯುಸ್ಸು ಬಾಳಿ ನಂತರ ಸಹಜವಾಗಿ ಬರುವ ಸಾವು. ಅವನಿಗೆ ಸಾವು ಬಂತೆಂದು ಸುತ್ತಮುತ್ತಲಿನವರೆಲ್ಲ ಕಣ್ಣೀರಿಡುತ್ತಾರೆ. ಅವನ ವಾಣಿಯನ್ನು ಭಕ್ತಿಯಿಂದ ಕೇಳುತ್ತಾರೆ. ಆದರೆ ಏಸುನಾಥ ತನ್ನ ಸಮುದಾಯದಿಂದ ತಿರಸ್ಕೃತನಾಗಿ, ಮೂದಲಿಕೆ ಅಪಮಾನಗಳ ನಡುವೆ ಅತ್ಯಂತ ಕ್ರೂರ ಸಾವಿಗೆ ಬಲಿಯಾಗುತ್ತಾನೆ. ಅಂದರೆ ಒಬ್ಬ ಮಹಾಪುರುಷ ಗಾಢಾಂಧಕಾರದಲ್ಲಿ ಅಬ್ಬರಿಸುವ ಬಿರುಗಾಳಿಯ ನಡುವೆಯೂ ಬೆಳಗುವ ದೀಪವಾಗುತ್ತಾನೆ, ಮತ್ತೊಬ್ಬ ಪ್ರಶಾಂತ ವಾತಾವರಣದಲ್ಲಿ ಬಹುದೂರ ಬೆಳಕು ಚೆಲ್ಲುವ ಜ್ಯೋತಿಯಾಗುತ್ತಾನೆ. ಎರಡು ಕವನಗಳಲ್ಲೂ ಕ್ರಿಯೆ, ಸಾವಿನ ನೆರಳಿನಲ್ಲೇ ಸಾಗಿ, ಬಾಳಿಗಿಂತ ಸಾವೇ ಪ್ರಧಾನವೋ ಎಂದು ಕಾಣುವಷ್ಟು ಪ್ರಮಾಣದಲ್ಲಿ ಕಾವ್ಯಗಳನ್ನು ಆಕ್ರಮಿಸಿದೆ. ಎರಡು ಕವನಗಳ ಸಮಾನ ವಸ್ತು ಆತ್ಮಸಾಕ್ಷಿ ಎನ್ನಬಹುದು.

ಗೌಡ ಸಾರಸ್ವತರಾದ ಗೋವಿಂದ ಪೈ ಅವರದು ವಿಶ್ವವಿಶಾಲವಾದ ಹೃದಯ. ಯಾವ ಕಡೆಯಿಂದಲೇ ಬೆಳಕು ಬರಲಿ ಅದನ್ನು ಸ್ವಾಗತಿಸಲು ಅವರ ಹೃದಯ ಕವಾಟ ಸದಾ ತೆರೆದಿರುತ್ತಿತ್ತು. ಅವರಿಗೆ ಕೃಷ್ಣ-ಕ್ರೈಸ್ತ–ಬುದ್ಧ–ಜಿನ ಎಲ್ಲರೂ ಸಮಾನರು. ಎಲ್ಲೆಲ್ಲಿ ವಿಭೂತಿತ್ವವಿರುತ್ತದೋ ಅಲ್ಲಲ್ಲಿ ಅವರ ಶಿರ ಭಕ್ತಿಯ ಭಾವದಿಂದ ಬಾಗಿದೆ. ಅದಕ್ಕೆ ಸಾಕ್ಷಿಯಾಗಿ ಗೊಲ್ಗೊಥಾ, ವೈಶಾಖಿ, ಶ್ರೀ ಗೊಮ್ಮಟ ಜಿನಸ್ತುತಿ, ಹಾಗೂ ಪಂಢರಾಪುರದ ವಿಠೋಬನನ್ನು ಕುರಿತ ಕೃತಿಗಳು ನಿಂತಿವೆ. 'ಪುರಂದರ ವಿಠಲ ನಿಂತಿರುವ ಇಟ್ಟಿಗೆ ಹಳೆಯದಾಗಿ ಹಳಸಿದೆ. ನನ್ನ ಎದೆಯನ್ನೇ

ಇಟ್ಟಿಗೆಯಾಗಿ ಸ್ವೀಕರಿಸು' ಎಂದು ಕೇಳಿಕೊಳ್ಳುವ ಭಾವಪೂರ್ಣ ಭಕ್ತಿಯಲ್ಲಿ ಎಂತಹ ಅನನ್ಯತೆ ಇದೆ ಎಂಬುದನ್ನು ಕಂಡರೆ 'ಕಾಯ್ಕೆ ಮಕ್ಕಳೊಳ್ ಆತ್ಮ ದೀಧಿತಿಯ ನೀ, ಶ್ರೀ ಗೊಮ್ಮಟೇಶ್ವರಾ' ಎಂಬಲ್ಲಿ ಜೈನಧರ್ಮದ ಬಗೆಗೆ ತಮ್ಮ ಪ್ರಾಂಜಲ ಭಾವವನ್ನು ವ್ಯಕ್ತಪಡಿಸುತ್ತದೆ.

ಇವರ ಕವಿತೆಗಳಲ್ಲಿ ವ್ಯಕ್ತವಾಗುವ, ಭಾವ ವೈವಿಧ್ಯ ಶೈಲಿ ವೈಶಿಷ್ಟ್ಯಗಳ ಬಗ್ಗೆ ವಿ.ಎಂ. ಇನಾಂದಾರರು ಹೀಗೆಂದು ಹೇಳಿದ್ದಾರೆ– "ಅವರ ಕಾವ್ಯಚೇತನವನ್ನು ನಿಲ್ಲಿಸಿ ನಡೆಸುವ ಕಲ್ಪನಾ ವಿಲಾಸ ಸತ್ವಯುತವಾದದ್ದು. ನಿಡುಗಣ್ಣ ನೋಟದಿಂದ ಬದುಕನ್ನು ನೋಡುವವನ, ಅನುಭವಿಸಿದವನ ಧೀರತೆಯುಳ್ಳದು ; ತಲಸ್ಪರ್ಶಿಯಾದ ವಿದ್ವತ್ತಿನಿಂದಾಗಿ ಈಡು, ಆಳ, ವಿಸ್ತಾರಗಳನ್ನು ಪಡೆದು, ಹಿರಿಯ ಸಾಹಿತ್ಯ ವ್ಯಾಸಂಗದಿಂದ ಶ್ರೀಮಂತವಾದದ್ದು, ಸಮತೂಕದ ದೃಷ್ಟಿಯಿಂದಾಗಿ ಅರ್ಥಪೂರ್ಣವಾದದ್ದು ; ಸಂವೇದನ ಶೀಲವಾದ ಮನಸ್ಸಿನಿಂದ ಮೊನೆಗೊಂಡದ್ದು."[57]

ಗೋವಿಂದ ಪೈ ಅವರಿಗೆ ಕಾವ್ಯ, ಒಲಿದ ಕಲೆ. ಇದಕ್ಕೆ ನಿದರ್ಶನವೋ ಎಂಬಂತೆ ಈ ಸಾಲುಗಳನ್ನು ನೋಡಬಹುದು.

"ಕವಿತೆ ಮತಿಜಲ ನಲಿನ, ವ್ಯಸನ ವನಧಿಯ ಪುಲಿನ,
ಕವಿತೆ ಗಾನದ ಸುಗ್ಗಿ, ಸೊಬಗ ತನಿಸೂಡಿ,
ಕವಿತೆ ನವರಸ ರಂಗವದು, ತ್ರಿವೇಣಿಯ ಸಂಗಮಿದೊ
ನೆನಸು, ಕನಸು, ಮನಸಿನ ತ್ರಿತಯಮೊಡಗೂಡಿ"

ಇದು ಕವಿತೆಯ ಕರ್ಮ, ಮರ್ಮವನ್ನು ವೈಭವೀಕರಿಸಿ ತೋರಿಸುತ್ತದೆ. ಕಾವ್ಯಕ್ಕೆ ಮರಣವಿಲ್ಲ, ಮುಪ್ಪಿಲ್ಲ ಎಂಬ ಅಥರ್ವವೇದೋಕ್ತಿ[58] ಯನ್ನು ತಮ್ಮ 'ಬರ್ದಿಲ' ಎಂಬ ಕವನದಲ್ಲಿ ಪ್ರತಿಪಾದಿಸಿದ್ದಾರೆ. ಅದೇ ರೀತಿ ಕವಿ ಶೆಲ್ಲಿ ಹೇಳುವಂತೆ– 'Our sweetest songs are those that tell of sadest thought' ಎಂಬ ಉಕ್ತಿಗೆ ನಿದರ್ಶನವಾಗಿ ನಿಂತ 'ಶೋಕವೇ ಶ್ಲೋಕವಾಗಿ ಪರಿಣಮಿಸಿತು' (ಶೋಕಂ ಶ್ಲೋಕವಮಾಗಚ್ಛತಿ) ಎಂಬ 'ರಾಮಾಯಣ' ಅವತಾರಕ್ಕೆ ಕಾರಣವಾದ ಪ್ರಸಂಗವನ್ನು ಪೈಯವರು ತಮ್ಮ 'ಕವಿತಾವತಾರ' ಎಂಬ ಕವನದಲ್ಲಿ ಅಭಿವ್ಯಕ್ತಿಸಿದ್ದಾರೆ. ಅಷ್ಟೇ ಅಲ್ಲ ಪರಬ್ರಹ್ಮನ ಸೃಷ್ಟಿ ಕಾಲಾಧೀನವಾದರೆ ಕವಿಬ್ರಹ್ಮನ ಸೃಷ್ಟಿ ಚಿರಂತನವಾದುದು. ಕಲೆಗೆ ಮುಪ್ಪಿಲ್ಲ. ಸಾವಿಲ್ಲ ಅದು ಚಿರಂತನ ಚೇತನ ಎಂಬುದನ್ನು ತಮ್ಮ ಅನೇಕ ಕವನಗಳಲ್ಲಿ ಮೂಡಿಸಿದ್ದಾರೆ.

ಗೋವಿಂದ ಪೈಯವರದು ಸಮಷ್ಟಿ ಚೇತನ. ವ್ಯಷ್ಟಿಪ್ರಜ್ಞೆಯಲ್ಲಿ ಸಮಷ್ಟಿ ಚಿತ್ತ ವಿಕಾಸಗೊಂಡಿರುವುದನ್ನು ಅವರ ಎಲ್ಲಾ ಕವಿತೆಗಳಲ್ಲೂ ಕಾಣಬಹುದು. ಅದು ದೈವಭಕ್ತಿ, ದೇಶಭಕ್ತಿ ಮೊದಲಾದುವುಗಳನ್ನು ಗರ್ಭೀಕರಿಸಿಕೊಂಡ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುವ ಸಹಜಾಭಿವ್ಯಕ್ತಿಯಾಗಿದೆ. ಅವರಿಗೆ ತುಳುನಾಡಿನ ಬಗೆಗೂ ಅಮಿತ ಪ್ರೇಮ. ಅದನ್ನು "ನಾನು ಎರಡು ತಾಯಂದಿರ ಕೂಸು. ಕೊಂಕಣಿ ನನ್ನ ಹೆತ್ತ ತಾಯಿ, ಕನ್ನಡ ಸಾಕು ತಾಯಿ,ನನ್ನನ್ನು ಸಾಕಿದ ತಾಯಿ....ಆದರೆ ತಾಯಿಯ ಮೊಲೆಯಲ್ಲಿ ಹಾಲಿಲ್ಲ : ಕೊಂಕಣಿಯಲ್ಲಿ ಸಾಹಿತ್ಯವಿಲ್ಲ. ಆಕೆ ಆ ಬಗ್ಗೆ ನನ್ನನ್ನು ಕನ್ನಡದ ಮೊರೆಯಲ್ಲಿ ಹಾಕಿದಳು. ಈ ತಾಯಿಯಾದರೆ ಪಯಸ್ವಿನಿ. ಎಷ್ಟು ಕಾಲದಿಂದ ಎಷ್ಟೋ ಕವಿಗಳನ್ನು ಊಡಿಸಿಯೂ ಮತ್ತೂ ಬತ್ತದ, ದೇವರ ದಯೆಯಿಂದ ಸರ್ವದಾ ಬತ್ತಬಾರದ ಸದಾಸ್ನುಹಿ. ತನ್ನ ಮೊಲೆಯನ್ನು ಆಕೆ ತಾಯಿಗೂ ಮಿಕ್ಕ ಅಕ್ಕರೆಯಿಂದ ನನಗೆ ಉಣಿಸಿದಳು. ಆಕೆಯ ಅಕ್ಕರೆಯ ಸಾಲವನ್ನು ಏಳೇಳು ಜನ್ಮಕ್ಕೂ ತೆತ್ತು ತೀರಿಸಲಾರೆ."[59] ಎಂದು ವ್ಯಕ್ತಪಡಿಸಿದ್ದಾರೆ.

ಅದೇ ರೀತಿ ತುಳುನಾಡ ದೇವಿಯನ್ನು ಮೂರ್ತೀಕರಿಸಿ ತೌಳವಮಾತೆಯನ್ನು

'ಜಯ ಜಯ ತೌಳವ ತಾಯೆ, ಮಣಿವೆ ತಂದೆ ತಾಯಂದಿರ ತಾಯೆ
ಭಾರ್ಗವನಂದು ಬಿಸುಡೆ ಕೊಡಲಿಯ ನೀ ಕಡಲೊಡೆದೆಡೆಯಿಂ ಮಾಡಿ
....ಮರಳಿ ಬಾರ ಕಂದಾ ನನ್ನುದರದಿ ಎಂದು ತಬ್ಬಿ ಹರಸೆನ್ನ'

ಎನ್ನುವ ಅವರ ಕವನದಲ್ಲಿ ತುಳುನಾಡ ದೇವಿಯನ್ನು ಮೂರ್ತೀಕರಿಸಿ ಅವಳ ದರ್ಶನ ಪಡೆದಿದ್ದಾರೆ.

'ತಾಯೆ ಬಾರ. ಮೊಗವ ತೋರ, ಕನ್ನಡಿಗರ ಮಾತೆಯೇ
ಹರಸು ತಾಯೆ ಸುತರ ಕಾಯೆ ನಮ್ಮ ಜನ್ಮದಾತೆಯೆ'

ಎಂದು ಮುಕ್ತಕಂಠದಿಂದ ಹಾಡಿ ಆನಂದಿಸಿದ್ದಾರೆ. ಅದೇ ರೀತಿ ಭರತಖಂಡ ದಾಸ್ಯ ಶೃಂಖಲೆಯಿಂದ ಎಂದು ಬಿಡುಗಡೆ ಪಡೆಯುತ್ತದೆಯೋ. ಆ ಸ್ವತಂತ್ರ ಭಾರತದ ಸ್ವಚ್ಛ ಸೌಂದರ್ಯವನ್ನು ಉಲ್ಲಾಸ ವೈಖರಿಗಳನ್ನು ನಾನೆಂದು ನೋಡುವೆನೋ ಎಂಬ ಹಂಬಲವನ್ನು–"ಮೂಡುವನೆಂದೀ ಭಾರತ ಭಾಗ್ಯ ಭಾಸ್ಕರಂ ? ಮರಳುವುದೆಂದೆಮಗಗಲಿದ ಸ್ವತಂತ್ರಮತಿ ಯಶಸ್ಕರಂ"– ಎಂಬ ಸಾಲುಗಳಲ್ಲಿ ತೋಡಿಕೊಂಡಿದ್ದಾರೆ.

'ಭಾರತ ಯಶೋಗಾನ, ಎನ್ನೆದೆಯ ತಾನ, ಭಾರತಾಂಬೆಯ ಭಕ್ತಿ ನನಗಾತ್ಮ ಶಕ್ತಿ' ಎಂದು ಭಾರತಾಂಬೆಯ ಬಗೆಗಿನ ತಮ್ಮ ಅಮಿತವಾದ ಭಕ್ತಿಯನ್ನು ವ್ಯಕ್ತಪಡಿಸಿದ್ದಾರೆ.

ಭಾರತ ಭಾಗ್ಯವಿಧಾತನಾದ ಬಾಪೂಜಿಯನ್ನು ನೆನೆದು–
"ಇನ್ನಿನಿಸು ಮಹಾತ್ಮ, ನೀ ಬದುಕಬೇಕಿತ್ತು
ಈಗ ಭಾರತಕ್ಕತ್ಯಗತ್ಯವಿದೆ ನಿನ್ನ"

ಎಂಬ ಸಾಲುಗಳಲ್ಲಿ ಹೃದಯಾಂತರಾಳದ ಅಳಲು ಅಡಗಿದೆ.

ಗೋವಿಂದ ಪೈ ಅವರ ಕವನಗಳು ಬಿಡಿ ಬಿಡಿ ಮುಕ್ತಕಗಳಾಗಿದ್ದರೂ ಭಾವ ಭಾವನೆಗಳಲ್ಲಿ ಒಂದು ವಿಧವಾದ ಸಾತತ್ಯ ಇರುವುದು ಕಂಡುಬರುತ್ತದೆ. ಅದನ್ನು ಗುರುತಿಸಿದ ವಿ.ಎಂ. ಇನಾಂದಾರರು "ಈ ಕವಿತೆಗಳನ್ನು ಆಗೀದಾಗ್ಗೆ ಬರೆದಿದ್ದರೂ ಅವಿಚ್ಛಿನ್ನವಾಗಿ ಮುಂಗುವರಿಯುವ ಭಾವನೆಯಿಂದಲೂ, ವಾಸ್ತವಿಕವಾಗಿ ಆ ಚಿಂತನೆ ಏಕಾಗ್ರವಾದ ದೈನಿಕ ಧ್ಯೇಯ ಮತ್ತು ಆಕಾಂಕ್ಷೆಗಳ ಸುತ್ತಲೂ ಬಳಸಿ ಬೆಳಗುವುದರಿಂದಲೂ ಇವುಗಳು ಅನ್ಯೋನ್ಯವಾಗಿ ಹೊಂದಿಕೊಂಡಿವೆ."[60] ಎಂದಿದ್ದಾರೆ.

ಮೂರು ಮಕ್ಕಳನ್ನು ಕಳೆದುಕೊಂಡ ಹೆಣ್ಣೊಬ್ಬಳ ದುಃಖವನ್ನು ಒಂದು ಕವನದಲ್ಲಿ ಅಭಿವ್ಯಕ್ತಿಸಿದ್ದರೆ. ಪಾತಂಗಿ ಎಂಬ ಕಥನಕವನದಲ್ಲಿ ವೇಶ್ಯೆಯ ಬದುಕಿನ ಬಗೆಗೆ ತಮ್ಮ ಕಳಕಳಿಯನ್ನು ವ್ಯಕ್ತಪಡಿಸಿದ್ದಾರೆ. ಅದೇ ರೀತಿ 'ಭಿಕ್ಷುವೂ ಪಕ್ಷಿಯೂ' ಎಂಬ ಕವನದಲ್ಲಿ ಭಿಕ್ಷುವಿನ ಸಹನೆಯನ್ನೂ; 'ಮಿಂಚುಳ್ಳಿ' ಎಂಬ ಗೀತೆಯಲ್ಲಿ ಪ್ರಕೃತಿ ಸೌಂದರ್ಯವನ್ನೂ, 'ಪ್ರಭಾಸ'ವೆಂಬ ನೀಳ್ಗವಿತೆಯಲ್ಲಿ ಅಲ್ಲೋಲ ಕಲ್ಲೋಲಗಳಿಂದ ಕುಣಿದು ಕುಪ್ಪಳಿಸುವ ಸಮುದ್ರದ ರುದ್ರ ರಮಣೀಯತೆಯನ್ನೂ ಅದರ ನಿರ್ಘೋಷವನ್ನೂ ಕೇಳಿಸಿದ್ದಾರೆ.

**ಸಂಶೋಧನೆ :**

ಪೈ ಅವರು ಸಂಶೋಧನೆ ಹಾಗೂ ಕಾವ್ಯಸೃಷ್ಟಿಯಲ್ಲಿ ಸಮಾನ ಸಿದ್ಧಿಯನ್ನು ಪಡೆದಿದ್ದರು. ಇವರ ಸಂಶೋಧನೆಯ ಬರವಣಿಗೆ 1926ರಲ್ಲಿ ಪ್ರಾರಂಭವಾಯಿತು. ಅಲ್ಲಿಂದ ವರ್ಷಕ್ಕೊಂದರಂತೆ, ಸುಮಾರು ಹಳೆಂಟು ಸಂಶೋಧನಾ ವಿಷಯಗಳನ್ನು ಆಯ್ದುಕೊಂಡು ಬರೆಯುತ್ತಾ ಹೋದರು. ಇವರು ತಮ್ಮ ಸಂಶೋಧನೆಯಲ್ಲಿ ಆರಿಸಿಕೊಳ್ಳದ ವಿಷಯಗಳೇ ಇಲ್ಲವೆನ್ನಬಹುದು.

ಮೊದಲನೆಯದಾಗಿ ಸಾರಸ್ವತರ ಪ್ರಾಚೀನತೆಯನ್ನು ಕುರಿತು ಸಂಶೋಧನೆ,

ದಕ್ಷಿಣ ಕನ್ನಡ ಜಿಲ್ಲೆ ಕುರಿತ ಪ್ರಥಮ ಲೇಖನ 'ಇತಿಹಾಸದ ಇರುಳಲ್ಲಿ ತುಳುನಾಡು' ಎಂಬ ತುಳುನಾಡಿನವರಿಗೆ ಇಲ್ಲದ ಕಲ್ಪನೆಯನ್ನು ಕಾಲಗರ್ಭದ ಕತ್ತಲೆಯಿಂದ ಹೊರತೆಗೆದು ಬೆಳಕಿಗೆ ತಂದರು ಮಂಜೇಶ್ವರ ಪೈಗಳು. ಇದರ ಮುಖ್ಯಾಂಶ ತುಳುನಾಡಿನ ವ್ಯುತ್ಪತ್ತಿ ನಿರೂಪಣೆ, ಅವರ ಪ್ರಾಚೀನತೆ, ರಾಜರ ಧಾರ್ಮಿಕ ಚರಿತ್ರೆ, ತುಳುನಾಡಿನ ಗ್ರೀಕ್ ಸಂಬಂಧ, ತುಳುನಾಡಿನ ಶಾಸನಗಳು, ಇಲ್ಲಿ ಜನಿಸಿದ ಹಲವು ಪ್ರಸಿದ್ಧ ವ್ಯಕ್ತಿಗಳಾಗ ಶ್ರೀ ಮಧ್ವಾಚಾರ್ಯ, ರತ್ನಾಕರ ವರ್ಣಿ, ಪಾರ್ತಿಸುಬ್ಬ, ಮುದ್ದಣ ಇವರ ಚರಿತ್ರೆಗೆ ಸಂಬಂಧಿಸಿದ ಹಲವಾರು ಸಂದಿಗ್ಧ ಅಂಶಗಳನ್ನು ಸಮಗೊಳಿಸಿ ಕಾಲದ ನಿರ್ಣಯ ಮಾಡಿದ್ದಾರೆ.

ಕರ್ನಾಟಕದ ಒಂದು ಅಂಗ ತುಳುನಾಡು. ಹಾಗೇ ಇತರ ಭಾಗಗಳಿಗೆ ಸಂಬಂಧಿಸಿದ ಸಂಶೋಧನ ಕಾರ್ಯಗಳೆಂದರೆ ಕರ್ನಾಟಕಕ್ಕೆ ಜೈನ ಮತದ ಆಗಮನ, ಗ್ರೀಸಿನ ಪ್ಟೋಲೆಮಿಯ ಪ್ರಾಚೀನ ಕರ್ನಾಟಕದ ಭೂಗೋಲದ ಬಗ್ಗೆ–ಅವನ ಕೃತಿಯಲ್ಲಿ ಬಂದಿರುವ ಗ್ರೀಕ್ ಭಾಷೆಯಲ್ಲಿ ಗುರುತು ಹತ್ತದಂತೆ ಬದಲಾದ ಕೆಲವು ಹೆಸರುಗಳನ್ನು ಗುರುತಿಸಿರುವರು. ಪ್ರಾಚೀನ ರಾಜಮನೆತನಗಳಾದ ಚಾಲುಕ್ಯ, ರಾಷ್ಟ್ರಕೂಟ, ವಿಜಯನಗರ ಸಾಮ್ರಾಜ್ಯಗಳ ಬಗ್ಗೆ ಲಭ್ಯವಿರುವ ನೂರಾರು ಶಾಸನಗಳ ಸಹಾಯದಿಂದ ರಾಜಮನೆತನಗಳ ಸಮಗ್ರ ಚರಿತ್ರೆ, ಕನ್ನಡೇತರ ಶಾಸನ, ಪುರಾಣ, ಐತಿಹ್ಯ ಇವನ್ನೆಲ್ಲಾ ಅರಸಿಕೊಂಡು ಹೋಗಿ ಸಾತವಾಹನ, ಪುನ್ನಾಟ, ಗಂಗ, ಕದಂಬರ ಇತಿಹಾಸವನ್ನು ಅಧಿಕೃತವಾಗಿ ಬರೆದಿದ್ದಾರೆ.

ಭಾರತೀಯ ಇತಿಹಾಸವಲ್ಲಿ ಕೂಡಾ ಅವರ ಸಂಶೋಧನೆ ಪ್ರಾಚೀನ ಕಾಲಕ್ಕೇನೇ ಹೆಚ್ಚು ಸಂಬಂಧಪಟ್ಟಿದೆ. ಹೊರಗಿನಿಂದ ಬಂದ ಶಕ ಮೊದಲಾದವರ ಬಗ್ಗೆ, ಯುಗ ಆರಂಭದ ಬಗ್ಗೆ, ವಾಕಾಟಕ ಹಾಗೂ ಪಲ್ಲವರ ಸಮಗ್ರ ಚರಿತ್ರೆ ರೂಪಿಸುವಲ್ಲಿ ಮೌಲಿಕವಾದ ಸಂಶೋಧನೆ ನಡೆಸಿದ್ದಾರೆ. ಭಾರತ–ಗ್ರೀಸ್ ಸಂಬಂಧದಲ್ಲಿ–ವಿಶಾಖದತ್ತನ 'ಮುದ್ರಾರಾಕ್ಷಸ' ಎಂಬ ಸಂಸ್ಕೃತ ನಾಟಕದಲ್ಲಿ, ಚಾಲುಕ್ಯ ಮತ್ತು ಚಂದ್ರಗುಪ್ತನನ್ನು 'ವೃಷಲ' ಎಂದು ಮೇಲಿಂದ ಮೇಲೆ ಕರೆದಿದ್ದಾರೆ. ಇನ್ನೊಂದು ಲೇಖನ 'ಬಿಸನಾಗರ' ಎಂಬಲ್ಲಿಯ ಗರುಡ ಕಂಬವನ್ನು ಕ್ರಿಸ್ತಶಕಾರಂಭದ ಒಳಹೊರಗೆ ಭಾರತಕ್ಕೆ ಆಗಮಿಸಿ ರಾಜ್ಯವಾಳಿದ ಇನ್ನೊಬ್ಬ ರಾಜವಂಶೀಯರೆಂದರೆ ಶಕರು. ಇವರಲ್ಲಿ ಮೊದಲಿಗ ಮಾಬಸ್ (ಕ್ರಿ.ಪೂ. 105–110) ದೊರೆಯಿಂದ ಆರಂಭಿಸಿ ಮುಂದಿನ ಕೆಲವು ಶಕರಾಜರ ಆಳ್ವಿಕೆ, ಯುದ್ಧ ಯಾತ್ರೆಗಳ ಕಾಲವನ್ನು ಗೋವಿಂದಪೈ ಅವರು ನಿರ್ಧರಿಸಿದ್ದಾರೆ.

ಕೆಲವು ಯುಗಗಳ ಆರಂಭ ಕಾಲವನ್ನು ಪರಿಶೋಧಿಸಿ ನಿಶ್ಚಿತ ದಿನಾಂಕವನ್ನು ವಿದ್ವಾಂಸರ ಮುಂದೆ ಇಟ್ಟಿದ್ದಾರೆ. ಪ್ರಾಚೀನ ಭಾರತದಲ್ಲಿ ರಾಜ್ಯವಾಳಿದ

ವಾಕಾಟಕರ, ಪಲ್ಲವರ, ರಾಜ ಮನೆತನಗಳ ಬಗ್ಗೆ ಪೈ ಅವರ ಸಂಶೋಧನಾ ಬರಹ ವಿಶೇಷ ಅಧ್ಯಯನದ ಫಲಗಳಾಗಿದೆ. ಇತಿಹಾಸದ ಕೆಲವು ಅಪರಿಚಿತ ಮುದ್ರೆಗಳ ನ್ನೆತ್ತಿಕೊಂಡು ಮೌಲಿಕವಾದ ಶೋಧವನ್ನು ವಿದ್ವಾಂಸರೆದುರು ಮಂಡಿಸಿದ್ದಾರೆ. ವಿಶೇಷತಃ ಕದಂಬರು, ಗಂಗರು. ವಾಕಾಟಕ ಹಾಗೂ ಪಲ್ಲವರ ಚರಿತ್ರೆಗಳ ಪುನರ್ರಚನೆ ಯಲ್ಲಿ ಪೈ ಅವರ ಸ್ವೋಪಜ್ಞತೆ ಸಂಶೋಧನಾ ಕ್ಷೇತ್ರದಲ್ಲೊಂದು ಮೌಲಿಕ ಕೊಡುಗೆ.

ಇನ್ನು ಧಾರ್ಮಿಕ ಸಂಶೋಧನೆಯ ಬಗ್ಗೆ ಹೇಳಬೇಕೆಂದರೆ ಅವರು ಯಾವುದೇ ಧರ್ಮದ ಪ್ರಕ್ರಿಯೆಗಳನ್ನು ವಿಮರ್ಶಿಸಿಲ್ಲ. ಜೈನ, ಬೌದ್ಧ, ವೀರಶೈವ, ಇವುಗಳಿಗೆ ಸಂಬಂಧಿಸಿದ ಐತಿಹಾಸಿಕ ಅಂಶಗಳನ್ನು ವ್ಯಕ್ತಿಗಳ ಜೀವನ ಕಾಲಗಳನ್ನು ಕುರಿತು ವಿವೇಚಿಸಿದ್ದಾರೆ. ಜೈನ ಪುರಾಣಗಳಲ್ಲಿ ಬಾಹುಬಲಿಯ ಕತೆ ಅತ್ಯಂತ ಪ್ರಸಿದ್ಧವಾದದ್ದು. ಭರತ ಮಹಾರಾಜ ತನ್ನ ತಮ್ಮನ ನೆನಪಿಗಾಗಿ ಪೌದನಪುರ ದಲ್ಲಿ ಮೂರ್ತಿಯನ್ನು ನಿಲ್ಲಿಸಿದನಂತೆ, ಅಂದಿನಿಂದ ಬಾಹುಬಲಿ ಪ್ರತಿಮೆಯ ಉಪಾಸನೆ ಮೊದಲಾಯಿತು. ಅತಿ ಎತ್ತರದ ಬಾಹುಬಲಿ ಮೂರ್ತಿ ಶ್ರವಣಬೆಳಗೊಳದಲ್ಲಿ ಮಾತ್ರವಲ್ಲದೆ ಕಾರ್ಕಳ ಮತ್ತು ವೇಣೂರುಗಳಲ್ಲಿಯೂ ಬೃಹದಾಕಾರವಾಗಿ ನಿಂತಿವೆ.

ಬೌದ್ಧಧರ್ಮದಲ್ಲಿಯೂ ಬುದ್ಧನ ಚರಿತ್ರೆ ಮತ್ತು ಅವರ ಬದುಕಿನ ಕೆಲ ಪ್ರಮುಖ ಘಟನೆಗಳ ಕಾಲ ನಿರ್ಣಯ ಜನ್ಮ ತಾಳಿದುದು ಮಾರ್ಚ್ ಮೂವತ್ತು ಕ್ರಿ.ಪೂ. 581, ಗೃಹತ್ಯಾಗ ಹದಿನೆಂಟು ಜೂನ್ 553, ಬುದ್ಧನಾದದ್ದು ಮೂರು ಏಪ್ರಿಲ್ 546 ಮತ್ತು ಪರಿನಿರ್ವಾಣ ಹದಿನೈದು ಏಪ್ರಿಲ್ 501, ಗೃಹತ್ಯಾಗದ ತೇದಿಯನ್ನು ಬಿಟ್ಟರೆ ಉಳಿದ ಮೂರು ತೇದಿಗಳು ವೈಶಾಖಪೌರ್ಣಮಿಗೆ ಸಮನಾಗಿವೆ. ಈ ಬಗೆಯ ವೈಚಿತ್ರ್ಯ ಮಹಮ್ಮದ್ ಪೈಗಂಬರ್; ಶೇಕ್ಸ್ಪಿಯರ್ ಇವರ ಬದುಕಿನಲ್ಲಿ ಕಂಡುಬರುತ್ತದೆ. ಬುದ್ಧನ ಭವ್ಯ ವ್ಯಕ್ತಿತ್ವವು ಪೈಯವರ ಕವಿ ಹೃದಯವನ್ನು ತಟ್ಟಿ ಅವನ ಕಡೆಯ ದಿನಗಳನ್ನು ಅರ್ಥಪೂರ್ಣವಾಗಿ ಕಂಡು ಅದನ್ನೇ ತಮ್ಮ 'ವೈಶಾಖಿ' ಖಂಡಕಾವ್ಯದಲ್ಲಿ ಸೊಗಸಾಗಿ ಚಿತ್ರಿಸಿದ್ದಾರೆ.

ಹಾಗೆಯೇ ಹಲವಾರು ವೀರಶೈವ ಮಹಾತ್ಮರ ಕಾಲನಿರ್ಣಯವನ್ನೂ ಇವರು ಮಾಡಿದ್ದಾರೆ. ಇಷ್ಟಲ್ಲದೆ ಕೆಲವು ತಾತ್ವಿಕ ಭಕ್ತಿಯೋಗದ ವಿವೇಚನೆಯನ್ನೂ ಮಾಡಿ ಲೇಖನಗಳನ್ನು ಬರೆದಿದ್ದಾರೆ.

ಪೈಯವರ ಸಂಶೋಧನ ಕಾರ್ಯದಲ್ಲಿ ಇತಿಹಾಸ ಕ್ಷೇತ್ರದಷ್ಟೇ ಮಹ ತ್ವದ ಸ್ಥಾನವು ಹಳಗನ್ನಡ ಕವಿ-ಕಾವ್ಯ ಸಂಶೋಧನೆಗೆ ಇದೆ. ಅನೇಕ ಕನ್ನಡ ವಿದ್ವಾಂಸರು ನಮ್ಮ ಪ್ರಾಚೀನ ಕವಿಗಳ ಕಾಲ, ದೇಶ, ಮತಗಳ ವಿವೇಚನೆಯಲ್ಲಿ ಕೃಷಿ ನಡೆಸಿದ್ದರು. ಆರ್. ನರಸಿಂಹಾಚಾರ್ಯರ ನಂತರ ಪೈಯವರ ಪರಿಶ್ರಮವೇ

ಗುಣ ಗಾತ್ರಗಳಲ್ಲಿ ಹಿರಿದೆಂದು ಹೇಳಬಹುದು. ನೃಪತುಂಗನ ಕವಿರಾಜಮಾರ್ಗದಲ್ಲಿ ತತ್ಪೂರ್ವದ ಸಾಹಿತ್ಯದ ಕುರುಹುಗಳೇನಿವೆಯೋ ಅವೆಲ್ಲವನ್ನೂ ಹಿಂಜಿ ತೋರಿಸಿ ನೃಪತುಂಗನಿಗಿಂತ ಇನ್ನೂರು ವರ್ಷದಷ್ಟು ಹಿಂದಿನ ಕನ್ನಡ ಸಾಹಿತ್ಯವಾಹಿನಿಯನ್ನು ಅರಸಿಕೊಂಡು ಹೋದವರು. ಐದರಿಂದ ಏಳನೇ ಶತಮಾನಗಳ ಸಂಸ್ಕೃತ ಭಾಷೆಯ ಶಾಸನಗಳನ್ನು ಪರಿಶೀಲಿಸಿ ಕನ್ನಡದಲ್ಲಿ ಪ್ರಧಾನವಾದ ವೃತ್ತಗಳ ಬಳಕೆಯ ಮಹತ್ವವನ್ನೂ ಹೇಳಿದ್ದಾರೆ. ನಾಲ್ಕು, ಆರನೆಯ ಶತಮಾನಗಳ ಕನ್ನಡ ಭಾಷೆಯ ಶಾಸನಗಳ ಪರಿಶೀಲನೆಯಿಂದ ಸಂಸ್ಕೃತ ಮಿಶ್ರ ಕನ್ನಡ ಪದ್ಯ ಸಾಹಿತ್ಯವು ಇತ್ತು ಎಂಬು ದನ್ನು ಹೊರಗೆಡಹಿದ್ದಾರೆ. ಇಷ್ಟೇ ಅಲ್ಲದೆ 'ಚೂಡಾಮಣಿ' ಮತ್ತು 'ಪ್ರೊಡ್ಡಾರಾ ದಣಂ' ಈ ಗದ್ಯ ಗ್ರಂಥಗಳು ಆ ಕಾಲದವೇ ಎಂಬ ನಿಲುವು ತಳೆದಿದ್ದಾರೆ. ಇದರಿಂದ ಕನ್ನಡ ಸಾಹಿತ್ಯದ ಆರಂಭಕಾಲ ಕ್ರಿ.ಶ. ಮೂರನೆಯ ಶತಮಾನದಷ್ಟು ಹಿಂದೆ ಸರಿ ಯಿತು ಮತ್ತೂ ಹಿಂದೆ ಹೋಗಿ 'ಗಾಥಾಸಪ್ತಶತಿ'ಯಲ್ಲಿಯೂ ಗ್ರೀಕ್ ಪ್ರಹಸನ ಒಂದರಲ್ಲಿಯೂ ಬಂದಿರುವ ಕನ್ನಡ ಶಬ್ದಗಳನ್ನು ಕಂಡುಹಿಡಿದು ಕನ್ನಡದ ಪ್ರಾಚೀ ನತೆಯನ್ನು ಕ್ರಿಸ್ತಶಕದ ಆರಂಭಕ್ಕೆ ತಂದು ನಿಲ್ಲಿಸಿ ನಮ್ಮ ಭಾಷೆ ಹಾಗೂ ಸಾಹಿತ್ಯಗಳ ಪ್ರಾಚೀನತೆಯನ್ನು ಸಾಧಿಸಿದ್ದಾರೆ. ಹಾಗೆಯೇ ಒಂಬತ್ತನೆಯ ಶತಮಾನದ ಕನ್ನ ಮಯ್ಯ ಎಂಬುವನು ಕನ್ನಡದ ಮೊದಲ ನಾಟಕಕಾರನೆಂದು 1956ರಲ್ಲಿ 'ಯುಗ ಪುರುಷ' ಎಂಬ ತಮ್ಮ ಲೇಖನದಲ್ಲಿ ತಿಳಿಸಿದ್ದಾರೆ.

ಹಳಗನ್ನಡ ಕವಿಗಳಾದ ಪಂಪ, ರನ್ನ, ನಾಗಚಂದ್ರ, ನಾಗವರ್ಮರ ಕೃತಿ ಗಳ ಕಾಲ ನಿರ್ಣಯಕ್ಕೆ ಆ ಗ್ರಂಥಗಳಲ್ಲಿಯ ಪ್ರಮಾಣಗಳಲ್ಲದೆ ಅನ್ಯ ಪ್ರಮಾಣಗಳನ್ನು ಆಧಾರವಾಗಿಟ್ಟುಕೊಂಡು ಮಹತ್ವಪೂರ್ಣ ಸಿದ್ಧಾಂತಗಳನ್ನು ಮಂಡಿಸಿ, ಕವಿಗಳ ಕಾಲಾನುಕ್ರಮದಲ್ಲಿ ಅವನ್ನು ಕ್ರೋಢೀಕರಿಸಿದ್ದಾರೆ.

ಅಷ್ಟೇ ಅಲ್ಲದೆ ದುರ್ಗಸಿಂಹ, ಬ್ರಹ್ಮದೇವ, ಹರಿಹರ, ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶ, ಶಿಶುಮಾಯಣ, ರತ್ನಾಕರವರ್ಣಿ, ಪಾರ್ತಿ ಸುಬ್ಬ, ಮುದ್ದಣ, ಹೀಗೆ ಅನೇಕ ಜನ, ಪ್ರಮುಖ ಕವಿಗಳ ಜೀವನ ಚರಿತ್ರೆಯನ್ನು ಕೊಟ್ಟು ಕಾಲ,ಕೃತಿ, ಮತಾದಿಗಳ ನಿರ್ಣಯ ಮಾಡಿದ್ದಾರೆ. ತನ್ಮೂಲಕ ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ವಿಶದಪಡಿಸಿದ್ದಾರೆ. ಅವರು ಮಂಡಿಸಿದ ನಿರ್ಣಯಗಳೆಲ್ಲವೂ ವಿದ್ವಾಂಸರಿಗೆ ಒಪ್ಪಿತವಾಗಿರದಿದ್ದರೂ ಆ ನಿರ್ಣಯಗಳನ್ನು ಅನ್ಯ ವಿದ್ವಾಂಸರು ಸಮರ್ಥ ರೀತಿಯಲ್ಲಿ ಖಂಡಿಸಿ, ಬೇರೆ ಕಾಲಾವಧಿಗಳನ್ನು ಸಾಧಾರವಾಗಿ ಮಂಡಿಸಿದ ಲೇಖನ ಅತಿ ವಿರಳ.

ಹೊಸಗನ್ನಡ ಕ್ಷೇತ್ರದಲ್ಲಿ ಪೈ ಅವರು ಕೆಲವು ಸಾಹಿತ್ಯ ಪ್ರಕಾರಗಳ ಆರಂಭದ ಕೃತಿಗಳನ್ನು ಹುಡುಕಿ, ಮೊತ್ತಮೊದಲಿನ ಸಣ್ಣ ಕತೆಗಳನ್ನು ಬರೆದವ

ಯಾರು ? ಮೊದಲ ಕಾದಂಬರಿಯ ಹೆಸರೇನು ? ಎಂಬ ಅಂಶಗಳಿಗೆ ವಿವರಗಳನ್ನು ಪೂರೈಸಿದ್ದಾರೆ. ಇವು ಇತ್ತೀಚಿನ ಸಂಗತಿಗಳೇ ಆದರೂ ಸಂಶೋಧನೆಯ ಅವಶ್ಯಕತೆ ಇತ್ತು.

| ಸಾಹಿತ್ಯ ಪ್ರಕಾರ | ಲೇಖಕ | ಕೃತಿ | ಕಾಲ |
|---|---|---|---|
| ಸಣ್ಣ ಕತೆ | ಪಂಜೆ ಮಂಗೇಶರಾಯರು | | 1900 |
| ಶಿಶು ಸಾಹಿತ್ಯ | ಪಂಜೆ ಮಂಗೇಶರಾಯರು | | 1900 |
| ಕಾದಂಬರಿ | ರೆಂಟ್ಲ ಸುಬ್ಬರಾವ್ | ಕೇಸರಿ ವಿಲಾಸ | 1895 |
| ಪ್ರಬಂಧ | ಮುದ್ದಣ್ಣ | ಜೋಗುಳ | 1900 |

ಹೊಸಗನ್ನಡದ ಮೊದಲ ತಲೆಮಾರಿನ ಕೆಲವು ಹಿರಿಯರು ಇನ್ನಿಲ್ಲವಾದಾಗ ಅವರ ಸ್ಮೃತಿ ಚಿತ್ರಗಳನ್ನೂ ಬರೆದಿದ್ದಾರೆ. ಗೋವಿಂದ ಪೈ ಅವರ ಗದ್ಯ ಬರವಣಿಗೆಯಲ್ಲಿ ಎರಡು ಪ್ರಬಂಧಗಳು ಮುಖ್ಯ. ಇವೆರಡೂ ಅವರ ಆತ್ಮಗತ ಪ್ರಬಂಧಗಳಾಗಿವೆ. ಒಂದು– ಮಿಂಚಿನ ಬಳ್ಳಿಯ 'ಕನ್ನಡ ಸಾಹಿತ್ಯಜ್ಞರ ಆತ್ಮಕಥನ'. ಇವರ ವಾಙ್ಮಯ ಸೃಷ್ಟಿಯ ಹಿನ್ನೆಲೆ ತಿಳಿಯಲು ಇದು ಕೈಗನ್ನಡಿ. ಪ್ರಾಸ ಬಿಟ್ಟು ಕವಿತೆ ಬರೆಯತೊಡಗಿದ್ದರ ಬಗ್ಗೆ, ಸಂಶೋಧನೆ ಮತ್ತು ಕಾವ್ಯರಚನೆ, ಈ ಎರಡು ಅತಿ ಭಿನ್ನ ಸ್ವರೂಪದ ಕ್ಷೇತ್ರಗಳಲ್ಲಿ ಸಮಾನವಾಗಿ ಕೃಷಿ ಮಾಡಿದುದರ ಹಿನ್ನೆಲೆ ತಿಳಿಯಬಹುದು. ಎರಡನೆಯದು– 'ಬರಹಗಾರನ ದಣಿಬರಹ' ಇದು ಏಕಮೇವ ಲಲಿತ ಪ್ರಬಂಧವಾಗಿದೆ. ಅವರಲ್ಲಿ ಉಕ್ತವಾದಂತಹ ಅನ್ಯ ಅನುಭವ, ಸರಸ ಹಾಸ್ಯವು ಅವರ ಪ್ರವೃತ್ತಿಗೆ ಸಹಜವಾದುದಾಗಿದೆ.

ಇದೇ ಅಲ್ಲದೆ ಮುನ್ನುಡಿ ಮತ್ತು ಪುಸ್ತಕ ವಿಮರ್ಶೆಗಳು–ಅದರಲ್ಲೂ ಇತಿಹಾಸಕ್ಕೆ ಸಂಬಂಧಪಟ್ಟ ಪುಸ್ತಕ ವಿಮರ್ಶೆ ಹೆಚ್ಚು. ಕೆಲವು ತರುಣ ಲೇಖಕರು ತಮ್ಮ ಕೃತಿಗಳಿಗೆ ಪೈ ಅವರ ಅಭಿಪ್ರಾಯ ಆಶೀರ್ವಾದಗಳನ್ನು ಕೋರಿದಾಗ ಪುಸ್ತಕ ಎಷ್ಟೇ ಸಾದಾ ಮತ್ತು ದೋಷಪೂರಿತವಾಗಿರಲಿ, ಅವರ ಬಗ್ಗೆ ಅಭಿಪ್ರಾಯ ಕೊಡುವಾಗ ಅವನ್ನು ಎಂದೂ ನಿಕೃಷ್ಟವೆಂದು ಭಾವಿಸುತ್ತಿರಲಿಲ್ಲ. ಕೃತಿಯ ಹಿಂದೆ ಲೇಖಕನ ಪ್ರೇರಣೆ, ಸದ್ಭಾವನೆಗಳನ್ನು ಇತರ ಒಳ್ಳೆಯ ಅಂಶಗಳನ್ನೂ ಸಹೃದಯತೆಯಿಂದ ಬಿಚ್ಚುಮಾತಿನಲ್ಲಿ ಎತ್ತಿ ತೋರಿಸುತ್ತಿದ್ದರು. ಕೃತಿಯಲ್ಲಿನ ಭಾಷಾದೋಷಗಳನ್ನು ತೋರಿಸಿಕೊಟ್ಟು ಭಾಷಾಶುದ್ಧಿಯತ್ತ ಆ ಲೇಖಕನ ಗಮನವನ್ನು ಸೆಳೆಯುತ್ತಿದ್ದರು. ಇದರಿಂದಲೂ ಇವರ ವಿಶಾಲ ಮನೋಭಾವನೆಯು ವೇದ್ಯವಾಗುತ್ತದೆ.

ಇವರ ಸಂಶೋಧನಾ ಕ್ರಮವೆಂದರೆ ಸಂಶೋಧಕನಲ್ಲಿರಬೇಕಾದ ವಿದ್ವತ್ತು, ಶೀಘ್ರ ಗ್ರಹಣ ಶಕ್ತಿ, ವಿವೇಚನಾ ಸಾಮರ್ಥ್ಯ, ಹರಿತವಾದ ತರ್ಕಸರಣಿ, ಮತ್ತು ಸ್ಮರಣಶಕ್ತಿ–ಇವೇ ಇವರ ಕಾರ್ಯದ ಪ್ರಥಮ ಸೋಪಾನವಾಗಿವೆ. ಇವರು ಪ್ರಥಮ ದರ್ಜೆಯ ವಿದ್ವಾಂಸರಾಗಿದ್ದಾರೆಂಬುದು ನಿಸ್ಸಂಶಯ. ಅವರ ಆಸಕ್ತಿಯ ವಿಷಯಗಳೆಂದರೆ ಕಾವ್ಯಗ್ರಂಥಗಳು, ವಿವಿಧ ಧರ್ಮಗಳ ತಾತ್ವಿಕ ಹಾಗೂ ಪುರಾಣ ಗ್ರಂಥಗಳು, ವ್ಯಾಕರಣ, ಜ್ಯೋತಿಷ್ಯ ಶಾಸ್ತ್ರಗಳು, ಅನೇಕ ನಾಡು ನುಡಿಗಳ ಚರಿತ್ರೆ. ಇವುಗಳಲ್ಲಿಯ ಯಾವುದೇ ಅಂಶವನ್ನು ಚೆನ್ನಾಗಿ ಮನನ ಮಾಡಿಕೊಂಡು ಬೇಕಾದ ಸಂದರ್ಭದಲ್ಲಿ ಅಸ್ಖಲಿತವಾಗಿ ವಿವರಿಸುವಷ್ಟು ಪರಿಣತಿಯನ್ನು ಪಡೆದಿದ್ದರು.

ಅವರ ಜ್ಞಾನ ಸಾಧನೆಯ ಸ್ಥೂಲ ಕಲ್ಪನೆ ಬೇಕೆಂದರೆ ಅವರ ಯಾವುದೇ ಲೇಖನದ ಅಡಿ ಟಿಪ್ಪಣಿ ರೂಪದ ಆಧಾರ ಗ್ರಂಥಗಳ ಸೂಚಿಯನ್ನು ಪರಿಶೀಲಿಸಬಹುದು. ಸುಮಾರು ಇಪ್ಪತ್ತು ಭಾಷೆಗಳಲ್ಲಿ ಇವರು ಪರಿಣತಿಯನ್ನು ಪಡೆದಿದ್ದರು. ತಮ್ಮ ಮಾತೃಭಾಷೆಯಾದ ಕೊಂಕಣಿ ಅಲ್ಲದೆ ಕನ್ನಡ, ತುಳು, ಇಂಗ್ಲಿಷ್ ಜೊತೆಗೇ ಮರಾಠಿ, ಮಲೆಯಾಳಿ, ಇವುಗಳನ್ನೂ ಪುರಾತನ ಕಾವ್ಯ ಶಾಸ್ತ್ರಗ್ರಂಥಗಳ ಅಭ್ಯಾಸಕ್ಕಾಗಿ ಸಂಸ್ಕೃತ, ಪ್ರಾಕೃತ, ಪಾಲಿ, ಅರ್ಧಮಾಗಧಿ– ಇವುಗಳನ್ನು ಕಲಿಯಲೇಬೇಕಾಯಿತು. ಪಾಲಿಭಾಷೆಯ ಪರಿಜ್ಞಾನದಿಂದ ಬೌದ್ಧ, ಜೈನ ಧರ್ಮ ವಿಚಾರದ ಸಂಶೋಧನೆ ಸುಗಮವಾಯಿತೆನ್ನಬಹುದು. ಹೀಗೆ ಬೇರೆ ಬೇರೆ ಸಂಶೋಧನ ಲೇಖನಗಳ ಪರಿಶೀಲನೆಯ ದೃಷ್ಟಿಯಿಂದ ಹಿಂದಿ, ಉರ್ದು, ತಮಿಳು, ಒರಿಯಾ, ಬಂಗಾಲಿಯನ್ನೂ 'ನೋ' ನಾಟಕಗಳಿಂದಾಗಿ ಜಪಾನಿಯನ್ನೂ ಕಲಿತರು. ವಿದೇಶೀಯರನ್ನು ಕುರಿತ ಸಂಶೋಧನೆ ಮಾಡುವಾಗ ಗ್ರೀಕ್, ಲ್ಯಾಟಿನ್, ಪರ್ಷಿಯನ್ ಭಾಷೆಯನ್ನೂ ಕಲಿಯಬೇಕಾಗಿ ಬಂದು ಅದನ್ನೂ ಕಲಿತರು.

ಇವರ ಕುಶಾಗ್ರವಾದ ಬುದ್ಧಿಮತ್ತೆಯಿಂದ, ಬಹುಭಾಷಾ ಗ್ರಂಥಗಳ ವಾಚನದಿಂದ ಗ್ರಹಣ ಮಾಡಿದ ಅಂಶಗಳನ್ನು ಬೇಕೆಂದಾಗ ಸಂಶೋಧನೆಯ ಕೆಲಸದಲ್ಲಿ ಬಳಸಿಕೊಳ್ಳುವ ಅವರ ವಿವೇಚನಾಶಕ್ತಿ ಅತ್ಯದ್ಭುತ.

ಸಂಶೋಧಕರಲ್ಲಿ ಇರಲೇಬೇಕಾದ ಇನ್ನೊಂದು ಗುಣ ಇತಿಹಾಸ ಪ್ರಜ್ಞೆ. ಅವರು ಕಂಡು ಹಿಡಿದ ವಿಚಾರವು ಅಂದಿನ ಕಾಲ ದೇಶಗಳಿಗೆ ಅಪೂರ್ಣ ಹಾಗೂ ಅಸ್ಪಷ್ಟವೆನಿಸುವ ವಿಷಯಗಳನ್ನು ಆಧಾರ ಸಾಮಗ್ರಿಗಳಿಂದ ಎತ್ತಿ ತೋರಿಸಿದ್ದು. ಗತಕಾಲದ ಸಂಗತಿ ಕಂಡುಹಿಡಿಯುವಲ್ಲಿ ಇತಿಹಾಸ ಪ್ರಜ್ಞೆ ಜಾಗೃತವಾಗಿರಬೇಕಾಗುತ್ತದೆ. ಪೈಯವರಲ್ಲಿ ಅದು ಜ್ವಲಂತವಾಗಿ ಇತ್ತೆನ್ನುವುದಕ್ಕೆ ಅವರ ಪ್ರತಿಯೊಂದು ಬರಹವೂ ನಿದರ್ಶನವಾಗಿದೆ. ನಮ್ಮ ನಾಡು, ನಮ್ಮ ಜನ, ನಮ್ಮ ಮತ, ನಮಗೆ ಅನ್ಯರು ಎಂಬ ಸ್ವಹಿತ ಅಂಶಗಳಿಂದ ವಸ್ತುನಿಷ್ಠತೆಯನ್ನು ಕಳೆದುಕೊಳ್ಳದೆ ಸತ್ಯದ

ಅನ್ವೇಷಣೆಗೆ ಕಣ್ಣೆರಿಸಿ, ಮಬ್ಬುಗತ್ತಲೆಯಲ್ಲಿ ಕಾಣುವ ವಸ್ತುಗಳ ಮೇಲೆ ಸಂಶೋಧನೆ ನಡೆಸಿದರು. ಇವರ ಬರಹದಲ್ಲಿ ತಾನು ಪರಿಶೀಲಿಸಿದ ಆಧಾರದ ಆಕರಗಳಿಂದ ಪ್ರಾಮಾಣಿಕವಾಗಿ ಕಂಡುಕೊಂಡ ಹೊಸ ಮಾತನ್ನು ಅನ್ಯರ ಒತ್ತಾಯಕ್ಕೆ ಬಲಿಯಾಗಿ ಬದಲಿಸದ ನಿಷ್ಠೆ ಗೋವಿಂದ ಪೈ ಅವರದ್ದು. ಆದರೆ ತಮ್ಮ ಅಭಿಪ್ರಾಯ ತಪ್ಪೆಂದು ಕಂಡುಬಂದಾಗ ಒಪ್ಪಿ ತಿದ್ದಿಕೊಳ್ಳುವ ವಿನಯವೂ ಇತ್ತು. ಹೀಗೆ ಪ್ರಾಮಾಣಿಕತೆ–ಧೈರ್ಯ, ವಿನಯ ಎಲ್ಲವನ್ನೂ ಅವರು ಮೈಗೂಡಿಸಿಕೊಂಡಿದ್ದರು.

**ನಾಟಕ ಸಾಹಿತ್ಯ**

ಇದಾದ ನಂತರ, ಗೋವಿಂದ ಪೈ ಸೃಜನಶೀಲತೆಯನ್ನು ಅವರ ದೃಶ್ಯ ಕಾವ್ಯದಲ್ಲಿ ಗುರುತಿಸೋಣ. ಇವರು ನಾಟಕದಲ್ಲಿ ತೊಡಗಿದುದು ತೀರಾ ಇತ್ತೀಚೆಗೆ ಎಂದರೆ 1947ರ ನಂತರ ಬರೆದದ್ದು ಕೆಲವೇ ನಾಟಕಗಳು. ಅವುಗಳಲ್ಲಿ ಏಕಲವ್ಯನ ಕುರಿತಾದ 'ಹೆಬ್ಬೆರಳು' ಎಂಬ ಏಕಾಂಕ ; 1942ರ ಕ್ವಿಟ್ ಇಂಡಿಯಾ ಚಳುವಳಿಯ ಒಂದು ಅಧ್ಯಾಯವನ್ನು ಚಿತ್ರಿಸುವ 'ಚಿತ್ರಭಾನು' ಎಂಬ ರುದ್ರನಾಟಕ ಮತ್ತು 'ತಾಯಿ' ಎಂಬ ಸಾಮಾಜಿಕ ಏಕಾಂಕ ; 'ಹೆಬ್ಬೆರಳು' ಮಹಾಭಾರತದ ಕಥಾ ವಸ್ತು. ಅಲ್ಲಿ ಅದು ಒಂದು ಸಣ್ಣ ಬಿಂದು ಮಾತ್ರ. ಇಲ್ಲಿ ಪೈಯವರ ಕೈಯಲ್ಲಿ ಒಂದು ಸಿಂಧು ಆಗಿ ಮಾರ್ಪಟ್ಟಿದೆ. ಅಂದರೆ ಕಲಾತ್ಮಕ ಅಭಿನಯ ಯೋಗ್ಯ ನಾಟಕ ವಾಗಿ ರೂಪಿತವಾಗಿದೆ. ಅರ್ಜುನನ ಈರ್ಷ್ಯೆಗೆ ಬಲಿಯಾದ ಏಕಲವ್ಯನ 'ಹೆಬ್ಬೆರಳು' ನಾಟಕದ ಮೂಲ ವಸ್ತು. ಇದನ್ನು ಕುರಿತು ಇಂಗ್ಲಿಷ್‌ನಲ್ಲಿ ಕೈಲಾಸಂ 'ಪರ್ಪಸ್' ಎಂಬ ನಾಟಕ ಬರೆದಿದ್ದಾರೆ. ಕುವೆಂಪುರವರ 'ಬೆರಳ್‌ಗೆ ಕೊರಳ್' ಸಹಾ ಇದೇ ವಸ್ತುವನ್ನು ಕುರಿತ ನಾಟಕಗಳು. ಹೆಬ್ಬೆರಳು ಆ ಸಾಲಿನಲ್ಲಿ ಬರುವ ಅತ್ಯುತ್ತಮ ಕಲಾ ಕೃತಿ. ಇದೊಂದು ರುದ್ರ ನಾಟಕ (Tragedy). ರುದ್ರವಸ್ತು ವಿನ್ಯಾಸ ಭಾರತಕ್ಕೆ ಗ್ರೀಸ್‌ನಿಂದ ಇಂಗ್ಲೆಂಡ್ ಮಾರ್ಗವಾಗಿ ಆಮದಾದ ಸರಕು. ನಾಟಕ, ಕಾವ್ಯ, ಕಥೆ ಮೊದಲಾದವುಗಳಲ್ಲಿ ರುದ್ರ ಛಾಯೆ (Tragic element)ಯನ್ನು ಭಾರತೀಯರು ಅಳವಡಿಸಲು ಹಾಗೂ ಪ್ರಾಚೀನ ಕೃತಿಗಳಲ್ಲಿ ಗುರುತಿಸಲು ತೊಡಗಿದ್ದುಂಟು. ಆ ಪ್ರಯತ್ನದ ಫಲವಾಗಿ ಆರಂಭದಲ್ಲಿ ರುದ್ರ ನಾಟಕಗಳು ಗ್ರೀಕ್ ಮಾದರಿಯಲ್ಲಿ ಇಲ್ಲವೇ ಶೇಕ್ಸ್‌ಪಿಯರ್ ಮಾದರಿಯಲ್ಲಿ ಕನ್ನಡಕ್ಕೂ ಬರತೊಡಗಿದವು. ಮೇಲೆ ಹೇಳಿದ ನಾಟಕ ತ್ರಯರ ಕೃತಿಗಳ ವಸ್ತು ಒಂದೇ ಆಗಿದೆ. ಅವುಗಳ ಮೂಲ ದ್ರವ್ಯವೂ ಒಂದೇ, ಅದೇ ಟ್ರ್ಯಾಜಿಡಿ.

ಗೋವಿಂದ ಪೈಯವರು ಗ್ರೀಕ್ ಮಾದರಿಯಲ್ಲಿ 'ಹೆಬ್ಬೆರಳು' ಮತ್ತು 'ಚಿತ್ರಭಾನು ಅಥವಾ 1942' ಎಂಬ ನಾಟಕಗಳನ್ನು ಕೊಟ್ಟಿದ್ದಾರೆ. ಹೆಬ್ಬೆರಳಿನ ವೈಶಿಷ್ಟ್ಯವೆಂದರೆ ಗ್ರೀಕ್ ಮಾದರಿಯ ಗೋದಲ ಅಥವಾ ಮೇಳ (Chorus) ತಂದಿ

ರುವುದು. ಹಳೆ ಗ್ರೀಕ್ ರುದ್ರನಾಟಕಗಳಲ್ಲಿ ಪಾತ್ರವಲ್ಲದ ಪಾತ್ರವಾಗಿ ನಾಟಕದ ಚಾಲನೆಗೆ ತುಂಬಾ ಸಹಕಾರಿ. ಅದೇ ತಂತ್ರ ಪೈ ಅವರ ಈ ಕೃತಿರತ್ನದಲ್ಲಿ ಯಶಸ್ವಿಯಾಗಿ ಪ್ರಯೋಗಗೊಂಡಿದೆ.

'ಹೆಬ್ಬೆರಳು' ನಾಲ್ಕು ನೋಟ (ದೃಶ್ಯ)ಗಳುಳ್ಳ ಒಂದು ಏಕಾಂಕ ನಾಟಕ. ಇದು ಸರಳ ರಗಳೆಯಲ್ಲಿರುವ ಗೀತನಾಟಕ. ಎಲ್ಲರಿಗೂ ಪರಿಚಯವಿರುವ ಏಕಲವ್ಯನ ಕತೆ ಇದಾದರೂ ಈ ಕತೆಯಲ್ಲಿ ಆರ್ಯ ಅನಾರ್ಯ ಭೇದದ ವಿಶೇಷ ಅರ್ಥವನ್ನು ಕಂಡಿದ್ದಾರೆ. ಏಕಲವ್ಯನು ಬೇರ್ಪಡಿಸಿಕೊಂಡ ತನ್ನ ಹೆಬ್ಬೆರಳೆಂದರೆ ಅವನ ಕುಲವೇ ಎಂಬ ಸಾಂಕೇತಿಕ ಅರ್ಥ ಕೊಟ್ಟಿರುವುದು ಒಂದು ಮೌಲಿಕ ಅಂಶವಾಗಿದೆ. ಉಳಿದ ನಾಲ್ಕು ಬೆರಳಿನ ಹೆಸರುಗಳು ಬೇರೆಯಾಗಿ ನಿಂತಿದ್ದರೂ ಕಾರ್ಯವೊಂದು ಕೈಗೂಡಬೇಕಾದರೆ ಅವರ ಸಹಕಾರದ ತುಚ್ಛೀಕರಣ, ಪ್ರೇಯಸಿಯ ಆಸೆ, ನಿರಾಶೆ ಇವುಗಳಲ್ಲಿಯ ಘರ್ಷಣೆ ಮಾರ್ಮಿಕವಾಗಿ ಮೂಡಿ ಸಂಭಾಷಣೆಯಲ್ಲಿ ಮೊನಚಿದ್ದು ನಾಟಕ ಅಭಿನಯ ಯೋಗ್ಯವಾಗಿದೆ.

'ಸಂಯುಕ್ತ ಕರ್ನಾಟಕ' ದಿನಪತ್ರಿಕೆಯಲ್ಲಿ ವರದಿಯೊಂದು ಪ್ರಕಟವಾಗಿತ್ತು. ಹುಬ್ಬಳ್ಳಿಯಲ್ಲಿ ವೀರೇಂದ್ರ ಎಂಬ ವಿದ್ಯಾರ್ಥಿಯು ಪೋಲೀಸರ ಗುಂಡಿಗೆ ಬಲಿಯಾದ ಎಂದು. ಈ ಕಹಿ ಸುದ್ದಿಯೇ ಗೋವಿಂದ ಪೈ ಅವರ 'ಚಿತ್ರಭಾನು ಅಥವಾ 1942' ಎಂಬ ನಾಟಕಕ್ಕೆ ಪ್ರೇರಣೆ. ಇದು ಪ್ರಕಟವಾದದ್ದು 1962ರಲ್ಲಿ. ಅದರ ವಸ್ತು 1942ರ 'ಕ್ವಿಟ್ ಇಂಡಿಯಾ' ಚಳವಳಿ. 1942ನೆಯ ವರ್ಷ ಭಾರತೀಯರ ಪ್ರಕಾರ 'ಚಿತ್ರಭಾನು' ಸಂವತ್ಸರ. ಅದ್ದರಿಂದಲೇ 'ಚಿತ್ರಭಾನು ಅಥವಾ 1942' ಎಂಬ ಅನ್ವರ್ಥ ಶೀರ್ಷಿಕೆಯನ್ನಿಟ್ಟಿದ್ದಾರೆ.

**ಕಥಾನಕ ಹೀಗಿದೆ :**

ವೇಣು ತಂದೆ ಇಲ್ಲದ, ಆದರೆ ತಾಯಿ ಯಶೋದೆಯ ವಾತ್ಸಲ್ಯದ ಪಕ್ಷದಲ್ಲಿ ಬೆಳೆದ 22-23 ವಯಸ್ಸಿನ ನವ ತರುಣ. ಗಾಂಧೀಜಿಯವರ ಕರೆಗೆ ಓಗೊಟ್ಟು ಸ್ವಾತಂತ್ರ್ಯದ ಕಿಚ್ಚಿನಲ್ಲಿ ಧುಮುಕ್ಕಿದ ತೇಜಸ್ವೀ ಯುವಕ. ಚಿಕ್ಕ ಮಗುವಿನಿಂದಲೂ ಇವನ ತಾಯಿ ಬೆಳೆಸಿದ್ದ 'ಜಾಹ್ನವಿ' ಎಂಬ ಅನಾಥ ಬಾಲಕಿಯನ್ನು ಮದುವೆಯಾಗಬೇಕೆಂದೂ ಇದ್ದವನು. ಆದರೆ ಸ್ವಾತಂತ್ರ್ಯದ ಕಿಚ್ಚು ಅವನ ಬಾಳನ್ನು ಸುಟ್ಟು ಬೂದಿ ಮಾಡಿತು. ಚಳವಳಿಗಾರರನ್ನು ಸೆರೆಹಿಡಿದು ಹಿಂಸಿಸುವ, ಕೊಲ್ಲುವ ಕಾರ್ಯದಲ್ಲಿ ನಿರತರಾದ ಭಾರತೀಯರೇ ಆದ ಗುಲಾಮ ಪೋಲೀಸರು ಈ ತೇಜಸ್ವೀ ತರುಣನನ್ನು ಬಲಿ ತೆಗೆದುಕೊಂಡರು. ಒಂದು ದಿನ ರಾತ್ರಿ ಬುರ್ಖಾ ಹಾಕಿಕೊಂಡು ಮಾರುವೇಷದಲ್ಲಿ ತನ್ನ ತಾಯಿಯನ್ನೂ, ಭಾವೀ ಪತ್ನಿಯನ್ನೂ ನೋಡಲು ಬಂದ ವೇಣುವನ್ನು ಕೊತ್ವಾಲನು ಮಾಣಿ ಜಲ್ಮವಾಡಿ ಸೆರೆ ಹಿಡಿದು ಗುಲಾಮ ಅಲ್ಲೇ

ಎಂಬ ಪೊಲೀಸ್ ಪೇದೆಯಿಂದ ಗುಂಡು ಹೊಡೆಸಿ ಕೊಲ್ಲಿಸುತ್ತಾನೆ. ಸುದ್ದಿ ತಿಳಿದ ಜಾಹ್ನವಿ ಬಾವಿಗೆ ಬಿದ್ದು ನಿರ್ಮಾಣವಾಗುತ್ತಾಳೆ. ಆದರೆ ಪಾಪಿ ಕೊತ್ವಾಲನು ಜೀಪ್‌ನಲ್ಲಿ ಹೋಗುವಾಗ ರಸ್ತೆಯಲ್ಲಿ ಆಕಸ್ಮಿಕ ಅಪಘಾತವೊಂದಕ್ಕೆ ತುತ್ತಾಗಿ ಮರಣಿಸುತ್ತಾನೆ. ವೇಣುವಿನ ತಾಯಿ ಯಶೋದೆ ಮಾತ್ರ ತನ್ನ ಮಗ ಹುತಾತ್ಮನಾದನೆಂದು ಹಿಗ್ಗಿ ರಾಷ್ಟ್ರಕ್ಕಾಗಿ ತನ್ನನ್ನೇ ಅರ್ಪಿಸಿಕೊಂಡ ಸತ್ಪುತ್ರನನ್ನು ಪಡೆದ ತಾನು ಭಾಗ್ಯವಂತಳೆಂದುಕೊಳ್ಳುತ್ತಾಳೆ.

ಶಿಲ್ಪದಲ್ಲಿ ಶೈಥಿಲ್ಯವಿದ್ದರೂ ನಿಜವಾದ ಕ್ವಿಟ್ ಇಂಡಿಯಾ ಚಳವಳಿಯ ಪ್ರಭಾವ, ಪರಿಣಾಮಗಳನ್ನು ಸಮರ್ಥ ರೀತಿಯಲ್ಲಿ ಅಭಿವ್ಯಕ್ತಿಸುವ ನಾಟಕ 'ಚಿತ್ರಭಾನು ಅಥವಾ 1942'.

**ಇತರ ಕೃತಿಗಳು :**

'ತಾಯಿ' ಪೈ ಅವರ ಅನುವಾದ ನಾಟಕ. ಅದರಲ್ಲಿ ಬರುವ ಪಾತ್ರಗಳು ಅಕ್ಕ, ತಂಗಿ ಮತ್ತು ತಂಗಿಯ ಗಂಡು ಮಗು. ಇದರಲ್ಲಿ ಮಗುವಿಗೆ ಜನ್ಮಕೊಟ್ಟ ಮಾತ್ರಕ್ಕೇ ಹೆಣ್ಣು ತಾಯಿಯಾಗಲಾರಳು ಎಂಬ ಅಂಶ ಧ್ವನಿತ. ತಂಗಿ, ಸಂಪಗೆಯ ಗಂಡನನ್ನು ಪ್ರೀತಿಸುತ್ತಾಳೆ. ಆದರೆ ಅದು ಯಾರ ಅರಿವಿಗೂ ಬಂದಿರಲಿಲ್ಲ. ತಂಗಿಯ ಗಂಡ ತೀರಿಕೊಂಡ ಮೇಲೆ ಅವನ ಮಗನಿಗೆ ತನ್ನ ಪ್ರೀತಿಯನ್ನು ಧಾರೆ ಎರೆಯುತ್ತಾಳೆ. ತಂಗಿಗೆ ಮಗುವಿನ ಮೇಲೆ ಅಷ್ಟು ಪ್ರೀತಿ ಇರುವುದಿಲ್ಲ. ವಿಷಮ ಜ್ವರದಿಂದ ನರಳುತ್ತಿರುವ ಮಗುವನ್ನು ಬಿಟ್ಟು ಆತುರಾತುರವಾಗಿ ಸಂತೆಗೆ ತೆರಳುತ್ತಾಳೆ. ಸಂತೆಯಿಂದ ಮಗುವಿಗೆ ಕೆಲವು ಆಟಿಕೆ ಸಾಮಾನುಗಳನ್ನು ತರುತ್ತಾಳೆ. ಆದರೆ ಮನೆಗೆ ತರುವಷ್ಟರಲ್ಲಿ ಮಗು ಕಣ್ಣು ಮುಚ್ಚಿಕೊಂಡಿರುತ್ತದೆ. ವಿಧಿಯ ವ್ಯಂಗ್ಯ ಚಿತ್ರಣ ಇಲ್ಲಿ ಚಿತ್ರಿತವಾಗಿದೆ. ಇದೂ ಒಂದು ಅರ್ಥದಲ್ಲಿ ರುದ್ರ ನಾಟಕವೇ.

ಗೋವಿಂದ ಪೈ ಅವರ ಅನುವಾದಿತ ನಾಟಕಗಳಲ್ಲಿ ಪ್ರಸಿದ್ಧಿ ಪಡೆದವುಗಳೆಂದರೆ ಜಪಾನ ಭಾಷೆಯ 'ನೊ' ನಾಟಕಗಳು. 'ಕೃಷ್ಣ ಚರಿತೆ' ಎಂಬುದು ನವೀನ ಚಂದ್ರಸೇನರ ಬಂಗಾಳಿ ಕಾವ್ಯದ ಗದ್ಯಾನುವಾದ. ಇವರ ಕವನ ಸಂಕಲನಗಳಲ್ಲಿ ಉಮರ ಖಯ್ಯಾಮನ ಐವತ್ತು ರುಬಾಯಿಗಳು ರೂಪಾಂತರಗೊಂಡಿವೆ. ಠಾಕೂರರ 'ಗೀತಾಂಜಲಿ' ಪೈಯವರ ಲೇಖನಿಯ ಮೂಲಕ ಅನುವಾದಗೊಂಡಿದೆ. 'ಕನ್ನಡದ ಮೊರೆ' ಎಂಬ ಕೃತಿಯಲ್ಲಿ ಆತ್ಮಕಥನ, ವ್ಯಕ್ತಿ ಚಿತ್ರ ಹಾಗೂ ಪೈಯವರು ಮಾಡಿದ ಭಾಷಣಗಳೂ ಸೇರಿವೆ. 'ಗೋವಿಂದ ಪೈ ಅವರ ಕೆಲವು ಪತ್ರಗಳು' ಎಂಬುದು ಅವರ ಪತ್ರ ಸಾಹಿತ್ಯವು. ಅವರ ವ್ಯಕ್ತಿತ್ವಕ್ಕೆ ಹಿಡಿದ ದರ್ಪಣವಾಗಿದೆ. ಹೀಗೆ ಅನೇಕ ಪೌರಾಣಿಕ ಕೃತಿಗಳನ್ನು ಗೋವಿಂದ ಪೈ ಅವರು ಕನ್ನಡಕ್ಕೆ ಕಾಣಿಕೆಯಾಗಿ ಕೊಟ್ಟಿದ್ದಾರೆ.

ಉದಾತ್ತ ವಿಚಾರಗಳನ್ನು ಒಳಗೊಂಡ ಸ್ವಂತದ ಕಾವ್ಯ ಸೃಷ್ಟಿಯಲ್ಲಿ ಇವರು ಅತ್ಯಂತ ಶಾಲೀನರಾಗಿದ್ದರು. ಅವರ ವಿಷಯದ ವೈವಿಧ್ಯ ವಿಸ್ತಾರಗಳು ಅಷ್ಟೇ ಗಮನಾರ್ಹ. ಪೈಯವರ ಕಾವ್ಯಸೃಷ್ಟಿಯ ಲಕ್ಷಣಗಳು ಹೀಗಿವೆ : ಒಂದು– ಆಳ ಮತ್ತು ವಿಸ್ತಾರ; ಎರಡು– ಅವರ ಸ್ವತಂತ್ರ ಚಿಂತನ ; ಮೂರು– ಬಂಧದ ಕ್ಲಿಷ್ಟತೆ ; ನಾಲ್ಕು–ದೇವರ ಅಸ್ತಿತ್ವದ ಬಗ್ಗೆ ನಂಬಿಕೆ. ಮಿಂಚುಹುಳದಿಂದ ಹಿಡಿದು ಮುಕ್ತಿಯ ವಿಚಾರದವರೆಗೂ ಅವರ ವಸ್ತುವಿನ್ಯಾಸ ಹರಡಿದೆ. ನಾಲ್ಕೇ ನಾಲ್ಕು ಸಾಲಿನ ಚಿಕ್ಕ ಗೀತದಿಂದ ಹಿಡಿದು ಸಾವಿರದ ನಾನೂರು ಸಾಲಿನ ಖಂಡಕಾವ್ಯದವರೆಗೆ ವ್ಯಾಪ್ತಿ ಇದೆ. ಕಾವ್ಯ ರಚನೆಯಲ್ಲಿ ಕಂದ, ಷಟ್ಪದಿ, ವೃತ್ತ, ರಗಳೆ, ಚೌಪದಿ, ಚತುರ್ದಶಪದಿ, ಹಾಡು. ಕೀರ್ತನೆ ಇವೆಲ್ಲವೂ ಗರ್ಭೀಕೃತವಾಗಿವೆ. ಒಮ್ಮೊಮ್ಮೆ ಬಂಗಾಲಿ ಗೀತದ ಧಾಟಿಯ ಗೀಳಿದ್ದರೂ, ಮಗದೊಮ್ಮೆ ಕರ್ನಾಟಕ ಸಂಗೀತದ ಒಲವಿದೆ. ತ್ಯಾಗರಾಜರ ರಾಗಗಳ ಸ್ಪಷ್ಟ ಜ್ಞಾನ ಇವರಿಗಿದೆ. ಭೂಪಾಲಿ, ಬೇಹಾಗ್ ಮೊದಲಾದ ಹಿಂದುಸ್ಥಾನಿ ರಾಗಗಳ ಧಾಟಿಯೂ ಅವರಿಗೆ ಒಗ್ಗಿದೆ. ಹೊಸಗನ್ನಡ ಕವಿತೆಯು ಇನ್ನೂ ತೊಟ್ಟಿಲ ಕೂಸಾಗಿದ್ದಾಗ ಅದನ್ನು ಕೈಗೆತ್ತಿಕೊಂಡು ಪೋಷಿಸಿ, ಲಾಲಿಸಿ, ರಕ್ಷಿಸಿ ಬೆಳೆಸಿದ ಕೀರ್ತಿ ಗೋವಿಂದ ಪೈ ಅವರಿಗೆ ಸಲ್ಲುತ್ತದೆ.

ಹೀಗೆ ಕನ್ನಡಮ್ಮನ ಸುಪುತ್ರರಾಗಿದ್ದು ನಾಡು. ನುಡಿಯ ಏಳಿಗೆಗಾಗಿ ದುಡಿದ ಕನ್ನಡಮ್ಮನ ಕೀರ್ತಿಯ ಕುಡಿಯು ದಾಂಗುಡಿಯಿಡಲು ಕಾರಣರಾದ ಗೋವಿಂದ ಪೈ ಅವರು ಮದರಾಸ್ ಸರಕಾರದಿಂದ 'ರಾಷ್ಟ್ರಕವಿ' ಎಂಬ ಪ್ರಶಸ್ತಿಯನ್ನು ಪಡೆದು ಕನ್ನಡದ ಕೀರ್ತಿಯನ್ನು ಹೆಚ್ಚಿಸಿದ್ದಾರೆ. ಅವರು ಮುಂಬಯಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದು ಮಾಡಿದ ಭಾಷಣ ಇಂದಿಗೂ ನಾಡಿನ ಮೂಲೆ ಮೂಲೆಯಲ್ಲಿಯೂ ಪ್ರತಿಧ್ವನಿಸುತ್ತಿದೆ. ಕನ್ನಡಮ್ಮನ ಮಡಿಲ ತುಂಬಿ ಮುಡಿಯ ಸಿಂಗರಿಸಿದ ಮಂಜೇಶ್ವರದ ಗೋವಿಂದ ಪೈ ಕನ್ನಡ ಸಾಹಿತ್ಯ ಕ್ಷೇತ್ರದ ಅವಿಸ್ಮರಣೀಯ ಗೊಮ್ಮಟ ಮೂರ್ತಿಯಾಗಿದ್ದಾರೆ.



## ಟಿ. ಎ. ಪೈ

ಗೌಡ ಸಾರಸ್ವತ ಸಮಾಜದ ಹೆಸರಿಸಬಹುದಾದ ಇನ್ನೋರ್ವ ಗಣ್ಯವ್ಯಕ್ತಿ ಡಾ. ಟಿ. ಎ. ಪೈ. (ತೋನ್ಸೆ ಅನಂತ ಪೈ). ಉಡುಪಿಯ ಸಾಂಸ್ಕೃತಿಕ ಹಾಗೂ ಸಾಮಾಜಿಕ ಜನಜೀವನದಲ್ಲಿ ಇವರ ಪಾತ್ರ ಹಿರಿದು. ಒಂದು ಸಮಾಜವನ್ನು ಪ್ರತಿನಿಧಿಸಬಲ್ಲ ಇವರು ಒಬ್ಬ ವ್ಯಕ್ತಿಯಲ್ಲ – ಅಂದೊಂದು ಶಕ್ತಿ – ಸಂಸ್ಥೆ ಎಂದು ಹೇಳಬಹುದು.

ಪ್ರಸಿದ್ಧಿ ಹಾಗೂ ಅಧಿಕಾರ ಇವೆರಡೂ ತನ್ನದಾಗಿದ್ದರೂ ಪೈಯವರದ್ದು ಎಂದೂ ಭೂಮಿತೂಕದ ಗುಣ 1922ರಲ್ಲಿ ಜನಿಸಿದ ಪೈ ಕುಟುಂಬದ ಮತ್ತೊಂದು ನಕ್ಷತ್ರ ಇವರು. ಇವರು ಉಪೇಂದ್ರ ಪೈ ಅವರ ಸುಪುತ್ರರೂ ದಿ. ಟಿ. ಎಂ. ಎ. ಪೈ ಅವರ ತಮ್ಮನ ಮಗನೂ ಆಗಿದ್ದಾರೆ. ಮುಂಬಯಿಯ ಸಿಡನ್ ಹ್ಯಾಂ ಕಾಲೇಜ್ ಆಫ್ ಕಾಮರ್ಸ್ ಅಂಡ್ ಎಕನಾಮಿಕ್ಸ್‌ನಲ್ಲಿ ಟಿ. ಎ. ಪೈ ಅವರು ಪದವೀಧರರಾದರು. ಇಪ್ಪತ್ತೊಂದರ ಪರಯದಲ್ಲಿಯೇ ಸಿಂಡಿಕೇಟ್ ಬ್ಯಾಂಕಿನ ಡೆಪ್ಯೂಟಿ ಜನರಲ್ ಮೇನೇಜರ್ ಹುದ್ದೆಯನ್ನು ಅಲಂಕರಿಸಿದರು. ಒಂದು ವರ್ಷದ ಬಳಿಕ ಜನರಲ್ ಮೇನೇಜರ್ ಹುದ್ದೆಗೆ ಬಡ್ತಿ ಹೊಂದಿದರು. 1964ರವರೆಗೆ ಅದೇ ಹುದ್ದೆಯಲ್ಲಿದ್ದರು. ಈ ಕಾಲಾವಧಿಯಲ್ಲಿಯೇ ಸಿಂಡಿಕೇಟ್ ಬ್ಯಾಂಕ್ ಇತರ ಎಲ್ಲಾ ಬ್ಯಾಂಕ್‌ಗಳಿಗಿಂತಲೂ ತನ್ನ ಬೆಳವಣಿಗೆಯ ಗತಿಯನ್ನು ಅತ್ಯಂತ ತೀವ್ರಗೊಳಿಸಿದ್ದು ಮಾತ್ರವಲ್ಲ ಅಗ್ರಗಾಮಿತ್ವದಲ್ಲಿ ಸಣ್ಣ ಉಳಿತಾಯ ಯೋಜನೆಯಲ್ಲಿ, ಕೃಷಿ ಕ್ಷೇತ್ರಗಳಲ್ಲಿ, ಶ್ರೀ ಸಾಮಾನ್ಯನಿಗೆ ಆರ್ಥಿಕ ಸಹಾಯ ಹಸ್ತ ನೀಡುವಲ್ಲಿ ಈ ಬ್ಯಾಂಕ್ ಇತರ ಬ್ಯಾಂಕ್‌ಗಳಿಗೆ ಹೊಸ ವ್ಯವಸ್ಥೆಯ ರೂಪುರೇಷೆಗಳನ್ನು ಹಾಕಿಕೊಟ್ಟಿತು.

ಡಾ. ಟಿ. ಎಂ. ಎ. ಪೈಯವರ ಆದರ್ಶವನ್ನು ಎತ್ತಿ ಹಿಡಿದವರು ಡಾ. ಟಿ. ಎ. ಪೈ. ಸಿಂಡಿಕೇಟ್ ಬ್ಯಾಂಕ್‌ನ ಬೆಳವಣಿಗೆಯಲ್ಲಿ ಇವರ ಪಾತ್ರ ಅಪಾರ. ಮಹಾನ್ ರಾಷ್ಟ್ರದಲ್ಲಿ ಈ ಬ್ಯಾಂಕ್ ಅನ್ನು ಏಳಸೆಯದನ್ನಾಗಿ ಮಾಡುವಲ್ಲಿ ಟಿ. ಎ. ಪೈ ಅವರ ಪ್ರಯತ್ನ ಅಸದಳ. ಟಿ. ಎ. ಪೈ ಅವರದ್ದು ಬಹುಮುಖ ಪ್ರತಿಭೆ. ರಾಜಕೀಯಕ್ಕೆ ಪ್ರವೇಶಿಸಿ ಕೇಂದ್ರದ ಮಂತ್ರಿಯಾಗುವುದಕ್ಕೂ ಮೊದಲೇ ಅವರು ತಮ್ಮ ಕಾರ್ಯಗಳಿಂದ ಜನಪ್ರಿಯರೂ, ಜನಾದರಣೀಯರೂ ಆಗಿದ್ದರು. ದಕ್ಷಿಣ ಭಾರತದ ಎಲ್ಲೆಡೆಯಲ್ಲೂ ಅವರು ಸ್ಥಾಪಿಸಿದ ವಿದ್ಯಾಸಂಸ್ಥೆ, ಹಾಗೂ ಬ್ಯಾಂಕ್‌ಗಳೇ ಇವಕ್ಕೆ ಜ್ವಲಂತ ಸಾಕ್ಷಿ. ಜೀವವಿಮಾ ನಿಗಮದಲ್ಲಿ ತಂದ ಸುಧಾರಣೆ ಸಾರ್ವಜನಿಕ ಕ್ಷೇತ್ರದ ಅವರ ದುಡಿಮೆಗೆ ಸಾಕ್ಷಿ.

"ಟಿ. ಎ. ಪೈ ಅವರು ದೇಶದ ಆರ್ಥಿಕ ಉನ್ನತಿಗಾಗಿ ಬಹಳಷ್ಟು ಕೆಲಸ ಮಾಡಿದ್ದಾರೆ. ಇವರು ಜೀವವಿಮಾ ನಿಗಮದೊಂದಿಗೆ ಸಂಪರ್ಕವಿರಿಸಿ ಅದನ್ನು ಉನ್ನತಿಯ ಶಿಖರಕ್ಕೇರಿಸಿದ್ದಾರೆ. ಇದು ಇಂದು ಭಾರತೀಯರು ಹೆಮ್ಮೆಪಡಬಹುದಾದ ಒಂದು ಸಂಸ್ಥೆಯಾಗಿದೆ. ಅವರು ಅಭಿವೃದ್ಧಿಯ ಕಾರ್ಯಗಳನ್ನು ಕರ್ನಾಟಕದಲ್ಲಿ ಮಾತ್ರ ಕೈಗೆತ್ತಿಕೊಂಡಿದ್ದರೂ ಅವರ ವ್ಯಕ್ತಿತ್ವ ಅಖಂಡ ಭಾರತಕ್ಕೆ ಸೇರಿದ್ದು. ದೇಶಕ್ಕೆ ಆರ್ಥಿಕ ಭದ್ರತೆಯನ್ನು ತಂದುಕೊಟ್ಟ ಕೀರ್ತಿ ಇವರಿಗೆ ನಿಸ್ಸಂಶಯವಾಗಿ ಸಲ್ಲಬೇಕು" ಎಂದು ಆಗಿನ ರಾಷ್ಟ್ರಪತಿ ವಿ. ವಿ. ಗಿರಿಯವರು ಇವರನ್ನು ಮುಕ್ತ ಕಂಠದಿಂದ ಹೊಗಳಿದ್ದಾರೆ.

ತಮ್ಮ ಮೂವತ್ತನೆಯ ವಯಸ್ಸಿನಲ್ಲೇ ಅವರು ಅವಿಭಕ್ತ ಮದ್ರಾಸ್ ರಾಜ್ಯದ ವಿಧಾನ ಸಭೆಗೆ ಆರಿಸಿ ಬಂದಿದ್ದರು. ಆಗವರು ವಿಧಾನಸಭೆಯ ಅತಿ ಕಿರಿಯ ಸದಸ್ಯರು. ರಾಜಕೀಯದಲ್ಲಿ ವಿಶೇಷ ಆಸಕ್ತಿ. ಜೀವನದ ಪ್ರಧಾನ ಕಾರ್ಯರಂಗವಾಗಿ ಬ್ಯಾಂಕಿಂಗ್ ಅನ್ನು ಸ್ವೀಕರಿಸಬೇಕೇ, ಇಲ್ಲವೇ ರಾಜಕೀಯವನ್ನು ಸ್ವೀಕರಿಸಬೇಕೇ ಎನ್ನುವ ಸಂದಿಗ್ಧವು ಪೈ ಅವರಿಗೆ ಒದಗಿತ್ತು. ಚುನಾವಣೆಗೆ ನಿಲ್ಲುವಲ್ಲಿ ಅವರಿಗೆ ಆಸಕ್ತಿ ಕಡಿಮೆ, ಭವಿಷ್ಯತ್ತಿಗೆ ಅನಿವಾರ್ಯವೆನಿಸುವಷ್ಟು ದೊಡ್ಡ ಮನುಷ್ಯರು ಯಾರೂ ಇಲ್ಲ. ನಮ್ಮ ಅಹಂಕಾರದಲ್ಲಿ ನಾವೇನೋ ಅತ್ಯವಶ್ಯ ವ್ಯಕ್ತಿಗಳೆಂದು ನಮ್ಮನ್ನು ನಾವೇ ಪ್ರಸಲಾಯಿಸಿಕೊಳ್ಳುತ್ತೇವೆ. ಆದರೆ ಉಡುಪಿಯ ಚರಿತ್ರೆಯನ್ನೇ ತೆಗೆದುಕೊಳ್ಳಿ. ಪ್ರತಿ ತಲೆಮಾರಿನಲ್ಲೂ ತಮ್ಮ ಪಾತ್ರ ಅಜರಾಮರ ಎಂದೆಣಿಸಿಕೊಂಡ ಅನೇಕ ದೊಡ್ಡ ಮನುಷ್ಯರು ಇಲ್ಲಿ ಬಾಳಿರಬೇಕು. ಆದರೆ ಕಡೆಗೆ ಈ ಎಂಟು ಶತಮಾನಗಳಲ್ಲಿ ಇಲ್ಲಿ ಉಳಿದ ಹೆಸರುಗಳು ಬರೀ ಎರಡು. ಒಂದು ಮಧ್ವಾಚಾರ್ಯರದ್ದು ಮತ್ತೊಂದು ವಾದಿರಾಜ ಸ್ವಾಮಿಗಳದ್ದು" ಎಂದು ಸ್ವತಃ ಪೈಗಳು ನುಡಿದಿದ್ದರು. ಹೌದು, ನಿಜ. ಬಾಳಿನಲ್ಲಿ ಸಾಗಿ ಬಂದ ಪಥದಲ್ಲಿ ಹೆಜ್ಜೆ ಗುರುತು ಮೂಡಿಸುವ ವ್ಯಕ್ತಿಗಳು ವಿರಳ. ಕೋಟಿಗೊಬ್ಬರು. ಪೈ ಅಂಥವರು.

ಟಿ. ಎ. ಪೈಗಳವರು. ಬಾಲಕರಾಗಿದ್ದಾಗಲೇ ಅವರ ಗುರುಗಳಾದ ರೋಕ್ ಫರ್ನಾಂಡಿಸ್ ಭವಿಷ್ಯ ನುಡಿದಿದ್ದರು : "ಈತ ಉಡುಪಿಯ ಸಾರ್ವಜನಿಕ ನಾಯಕತ್ವದಲ್ಲಿ ಹೊಸ ಪಥವನ್ನೇ ನಿರ್ಮಿಸುತ್ತಾನೆ. ಅದೃಷ್ಟದ ಅಚ್ಚಿಯ ಕೂಸಿದು" ಎಂದ ಭವಿಷ್ಯದಲ್ಲಿ ಇವರ ವ್ಯಕ್ತಿತ್ವ ವಿಕಾಸ ಗುರುವಿನ ಹರಕೆಯಂತೆಯೇ ಆಯಿತು.

ಟಿ ಎ. ಪೈಯವರೊಬ್ಬ ಮಾನವೀಯತೆಯ ನಾಯಕ ಎಂದು ಕು. ಶಿ. ಹರಿದಾಸ ಭಟ್ಟರು ಇವರನ್ನು ಕೊಂಡಾಡಿದ್ದಾರೆ. ಇವರ ಅನುಕಂಪ ಹಾಗೂ ಸಹಾನುಭೂತಿಯದ್ದು ದೊಡ್ಡ ಚರಿತ್ರೆಯೇ ಇದೆ. ಇವರ ಸಿಂಡಿಕೇಟ್ ಬ್ಯಾಂಕ್ ಅಧಿಕಾರಾವಧಿಯಲ್ಲಿ ಕೆಲಸವನ್ನರಸಿ ಬಂದು ಭೇಟಿಯಾಗುವ ಜನರಿಗೆ ಲೆಕ್ಕವೇ ಇಲ್ಲ.

ಪ್ರತಿಯೊಂದು ಕಣ್ಣಿನ ಕಣ್ಣೀರನ್ನು ಒರೆಸಬೇಕೆಂಬ ರಾಷ್ಟ್ರಪಿತ ಗಾಂಧೀಜಿಯ ಸಂದೇಶ ಅಕ್ಷರಶಃ ಕಾರ್ಯರೂಪಕ್ಕೆ ತಂದವರು ಇವರು. 'ಪಾಪವನ್ನು ದ್ವೇಷಿಸು, ಆದರೆ ಪಾಪಿಯನ್ನಲ್ಲ' ಎಂಬ ಗಾಂಧೀ ತತ್ವದ ದಿಟ್ಟ ಪರಿಪಾಲಕ ಇವರು. ಬಡವರಿಗೆ ಎಂದೂ ಉಪಕಾರಿ ಈ ದಯಾಪಾರಿ.

ಟಿ. ಎ. ಪೈ ಬಾಲ್ಯದಿಂದಲೂ ಒಬ್ಬ ವಿಚಾರವಾದಿ. ಅವರ ದಿನಚರಿಯಲ್ಲಿನ ಒಂದು ಬರಹ ಅದನ್ನು ಎತ್ತಿ ತೋರಿಸುತ್ತದೆ. "ನಾನು ನನ್ನ ಬಹುಮೂಲ್ಯ ಸಮಯವನ್ನು ವಿದ್ಯಾಭ್ಯಾಸಕ್ಕಾಗಿ ವಿನಿಯೋಗಿಸಬೇಕು. ನನ್ನಲ್ಲಿರುವ ಮಾನವ ಶಕ್ತಿಯನ್ನು ಇತರ ಸದುಪಯೋಗೀ ಕಾರ್ಯಕ್ಕೆ ಬಳಸಬೇಕು. ಆದ್ದರಿಂದ ಪರನಿಂದನೆ ಹಾಗೂ ನಿರುಪಯೋಗಿ ಮಾತುಕತೆಗಳನ್ನು ಆಡಲಾಗದು. ನನ್ನ ಶಕ್ತಿ ವ್ಯಯವಾಗಲು ಬಿಡಲಾಗದು. ಅದರ ಒಂದೊಂದು ಕ್ಷಣವನ್ನೂ ನಾನು ಆರೋಗ್ಯಕರ ರೀತಿಯಲ್ಲಿ ಬಳಸಬೇಕು."

ಉಡುಪಿಯ ಮಹಾತ್ಮಾ ಗಾಂಧಿ ಸ್ಮಾರಕ ಕಾಲೇಜಿಗೆ ಇವರು ಹದಿನಾಲ್ಕು ವರ್ಷಗಳ ಸೇವೆಯನ್ನು ಸಲ್ಲಿಸಿದ್ದಾರೆ. ವೈಯುಕ್ತಿಕ ಜಾಮೀನಲ್ಲದೆ ಬೇರಾವುದೇ ಹೊರಗಿನ ಭದ್ರತೆ ಇಲ್ಲದೆ ಪ್ರತಿಯೊಬ್ಬ ವಿದ್ಯಾರ್ಥಿಗೆ ಐದು ಸಾವಿರ ರೂಪಾಯಿಗಳ ಉಚ್ಚ ಶಿಕ್ಷಣಕ್ಕೆ ಸಾಲ ನೀಡುವ ಉಪಕ್ರಮವನ್ನು ಇವರು ಆರಂಭಿಸಿದರು. ಇವರಲ್ಲಿ ಕೆಲಸ ಹುಡುಕಿ ಬರುತ್ತಿದ್ದ ಒಬ್ಬೊಬ್ಬ ವ್ಯಕ್ತಿಯನ್ನೂ ಇವರು ನೆನಪಿನಲ್ಲಿಟ್ಟುಕೊಂಡು ಅವರಿಗೆ ಸ್ವತಃ ತಾವೇ ಜೀವನೋಪಾಯವನ್ನು ಕಲ್ಪಿಸಿಕೊಡುತ್ತಿದ್ದರು. ಇದನ್ನರಿತ ಪೈಯವರ ಸ್ನೇಹಿತರೊಬ್ಬರು ಅವರನ್ನು ಗೇಲಿ ಮಾಡುವುದೂ ಇತ್ತು–ಟಿ. ಎ. ಪೈ ಎಂದರೆ ಏಕವ್ಯಕ್ತಿ ಉದ್ಯೋಗ ವಿನಿಮಯ ಕೇಂದ್ರ. (one man employment bureau)

ಜೋತಿಷ್ಯ ಶಾಸ್ತ್ರದ ಪ್ರಕಾರ ಮಕರ ರಾಶಿಯಲ್ಲಿ ಹುಟ್ಟಿದವರ ಪ್ರಮುಖ ಗುಣ ವಿಶೇಷಗಳು ಹೀಗಿವೆ : ಆತ ಬದುಕಿನುದ್ದಕ್ಕೂ ಪರೋಪಕಾರಿಯಾಗಿ, ತನ್ನ ಸುತ್ತಮುತ್ತಲಿನ ಜನರ ಜೀವನದಲ್ಲಿ ಸುಖ ಸಂತಸವನ್ನೇ ಸ್ವಭಾವತಃ ನೋಡುವ ವಾಂಛೆ ಉಳ್ಳವನಾಗಿರುತ್ತಾನೆ. ಇದು ಟಿ. ಎಂ. ಪೈ ಅವರ ಬಗ್ಗೆ ಎರಡಿಲ್ಲದ ಮಾತು. ಪ್ರವೃತ್ತಿಯಿಂದ ಮುಖಂಡರಾದರೂ ಟಿ. ಎ. ಪೈಯವರು ಒಬ್ಬ ಹುಟ್ಟಾ ತತ್ವಜ್ಞಾನಿ. ಐವತ್ತನಾಲ್ಕು ವರ್ಷಗಳ ಮೊಟಕು ಆಯುಷ್ಯವನ್ನು ಸಫಲ ರೀತಿಯಲ್ಲಿ ಮಾನವೋನ್ನತಿಗೆ ಮೀಸಲಾಗಿಟ್ಟವರು ಇವರು. ಕೆ. ಎ. ಚೆರಿಯನ್– ಮಲಯಾಳಿ ಮನೋರಮಾದ ಮುಖ್ಯ ಸಂಪಾದಕರು–"ಉಡುಪಿ ಹಾಗೂ ಅಲ್ಲಿನ ಪೈ ಕುಟುಂಬವೆಂದರೆ ಪ್ರತಿಭಾವಂತರ, ಆರ್ಥಿಕ ತಜ್ಞರ, ಹಾಗೂ ರಾಜನೀತಿ ನಿಪುಣರ ಒಂದು ಹೂದೋಟ" ಎಂದು ಮನಸ್ವೀ ಹೊಗಳಿದ್ದಾರೆ.

"ಇವರೊಬ್ಬ ಉತ್ತಮ ವಾಕ್ಪಟು ಮಾತ್ರವಲ್ಲ, ಪ್ರತಿಭಾವಂತ ಓದುಗ, ಒಬ್ಬ ಪ್ರಾಮಾಣಿಕ, ವ್ಯವಹಾರ ಜ್ಞಾನವುಳ್ಳ ವ್ಯಕ್ತಿ" ಎಂದು ಡಾ. ಎನ್. ಕೆ. ತಂಗಳಾಯ ಇವರನ್ನು ಮೆಚ್ಚಿಕೊಂಡಿದ್ದಾರೆ.

ಟಿ. ಎ. ಪೈ ಅವರನ್ನು ಖ್ಯಾತ ಪತ್ರಕರ್ತ ಎಂ. ವಿ. ಕಾಮತ್ ಅವರು ಒಪ್ಪಿಕೊಂಡ ರೀತಿಯೇ ಬೇರೆ. "ಅನಂತ ಒಬ್ಬ ಪ್ರಸಿದ್ಧ ಬ್ಯಾಂಕರ್, ನಿಸ್ವಾರ್ಥ ಸಮಾಜ ಸೇವಕ, ರಾಜಕೀಯ ಧುರೀಣ, ವಿಚಾರವಾದಿ ಹೀಗೆ ಎಲ್ಲರೂ ಅರಿತಿರುವಂತೆ ಬಹುಮುಖ ವ್ಯಕ್ತಿತ್ವ ಹೊಂದಿದ್ದಾರೆ........ಎಲ್ಲಾ ಮಟ್ಟದಲ್ಲಿರುವ ಮಿತ್ರರು ಹಾಗೂ ಕಾರ್ಯಕರ್ತರ ಬಗ್ಗೆ ಅವರಲ್ಲಿರುವ ಕಳಕಳಿ, ಕಾತುರತೆ ಪೈಯವರ ಮತ್ತೊಂದು ವೈಶಿಷ್ಟ್ಯ. ಈ ಸದ್ಗುಣಗಳೇ ಈ ವ್ಯಕ್ತಿಯನ್ನು ಘನವಾಗಿಸಬಲ್ಲುದು. ಈ ಗುಣಗಳೇ ಬಂಗಾರ; ಈ ವ್ಯಕ್ತಿತ್ವವೇ ಬಂಗಾರ. ಬಾಕಿ ಎಲ್ಲವೂ ನಗಣ್ಯ."

**ಬ್ಯಾಂಕಿಂಗ್ ಉದ್ದಿಮೆ :**

1943 ರಿಂದ 1970ರ ವರೆಗೆ ತಮ್ಮ ನವನವೀನ ಯೋಜನೆಗಳ ಕಾರ್ಯರಂಗವಾಗಿ ಸಿಂಡಿಕೇಟ್ ಬ್ಯಾಂಕ್ ಅನ್ನು ಟಿ. ಎ. ಪೈ ಸ್ವೀಕರಿಸಿದರು. 1968 ರಲ್ಲಿ ಇವರು ಬ್ಯಾಂಕಿನ ಚೇರ್ಮನ್ ಹುದ್ದೆಯನ್ನು ಅಲಂಕರಿಸಿದರು. ಡಾ. ಟಿ.ಎಂ. ಎ. ಪೈಯವರು ಬ್ಯಾಂಕ್ ವ್ಯವಹಾರದಿಂದ ನಿವೃತ್ತಿ ಹೊಂದಿದಾಗ ಅದನ್ನು ಸಮರ್ಥವಾಗಿ ಹೆಗಲ ಮೇಲೆ ಹೊತ್ತ ಕೀರ್ತಿ ಇವರದ್ದು.

"Every man's Bank for every Banking need" ಇದು ಪೈಯವರ ಧ್ಯೇಯ ವಾಕ್ಯ.

ಉಪ ರಾಜ್ಯಪಾಲರೊಬ್ಬರು ಟಿ. ಎ. ಪೈಗಳಲ್ಲಿ ಹೀಗೆ ಕೇಳಿದರು : "ಪೈಯವರೇ, ನಿಮ್ಮ ಬ್ಯಾಂಕ್ ಇಂದು ಶ್ರೇಯಸ್ಕರವಾಗಿ ಬೆಳೆದು ಉನ್ನತಿಯತ್ತ ಸಾಗಿದ್ದರೂ, ಇನ್ನೂ ಇಪ್ಪತ್ತೈದು, ಐವತ್ತು ರೂಪಾಯಿಗಳ ಕಿರಿಯ ಮೊತ್ತಗಳನ್ನು ಕೊಡುವ ವ್ಯವಸ್ಥೆಯನ್ನು ಅದೇಕೆ ಹಮ್ಮಿಕೊಂಡಿದ್ದೀರಿ ?"

ವಿನೀತರಾಗಿ ಪೈ ನುಡಿದರು "ನಮ್ಮ ಇಂದಿನ ಬೆಳವಣಿಗೆಗೆ ಈ ಇಪ್ಪತ್ತೈದು ಹಾಗೂ ಐವತ್ತು ರೂಪಾಯಿಗಳ ಸಾಲದ ವ್ಯವಸ್ಥೆಯೇ ಕಾರಣ. ಇದರಿಂದಾಗಿಯೇ ನಾವು ಇಂದಿಗೂ ಈ ವ್ಯವಸ್ಥೆಯನ್ನು ಉಳಿಸಿಕೊಂಡಿದ್ದೇವೆ." ಪೈಯವರ ಸಹೃದಯತೆಗೆ ಇದೊಂದು ನಿದರ್ಶನ ಅಷ್ಟೆ. ಮೇಲೆ ಹತ್ತಿದ್ದೇವೆ ಎಂದ ಮಾತ್ರಕ್ಕೆ ಏಣಿಯನ್ನು ಕಾಲಿನಿಂದ ತಳ್ಳಬಹುದೇ ? ಪೈಯವರ ಪ್ರಾಮಾಣಿಕ ಅನಿಸಿಕೆ ಕೂಡಾ ಇದೇ.

1969ರಲ್ಲಿ ಆಗಿನ ಪ್ರಧಾನಿ ಶ್ರೀಮತಿ ಗಾಂಧಿಯವರು ದೇಶದ ಪ್ರಮುಖ ಹದಿನಾಲ್ಕು ಬ್ಯಾಂಕ್‌ಗಳನ್ನು ರಾಷ್ಟ್ರೀಕೃತಗೊಳಿಸಿದರು. ಇದನ್ನು ಎರಡು

ಪರ್ವಗಳ ಹಿಂದೆಯೇ ಪೈಗಳು ಊಹಿಸಿದ್ದರು. ಹಾಗಾಗಿ ಸಿಂಡಿಕೇಟ್ ಬ್ಯಾಂಕನ್ನು ರಾಷ್ಟ್ರೀಕರಣಕ್ಕೆ ಮೊದಲೇ ಸಜ್ಜುಗೊಳಿಸಿ ಇಟ್ಟಿದ್ದರು. ಸರಕಾರದ ಅಪೇಕ್ಷೆಯ ಮೇರೆಗೆ ಟಿ. ಎ. ಪೈ ಅವರು ಬ್ಯಾಂಕಿನ ಕಸ್ಟೋಡಿಯನ್ ಆದರು. ರಾಷ್ಟ್ರೀಕರಣ ಗೊಂಡ ಬಳಿಕ ಬ್ಯಾಂಕ್‌ನ ಉದ್ಯೋಗಿಗಳಿಗೆ ಅವರು ನೀಡಿದ ಸಂದೇಶವಿದು : "ಜನತೆಗೆ ನಮ್ಮ ಮೇಲಿನ ವಿಶ್ವಾಸವನ್ನು ನಾವು ಉಳಿಸಿಕೊಳ್ಳಬೇಕು. ಬ್ಯಾಂಕಿಂಗ್ ವ್ಯವಸ್ಥೆ ಯನ್ನು ದೃಢಗೊಳಿಸಬೇಕು. ಅದರಿಂದಲೇ ದೇಶದ ಆರ್ಥಿಕ ಪ್ರಗತಿ ಸಾಧ್ಯ. ನಮ್ಮ ದೇಶದ ಭವಿಷ್ಯವೂ ಇದರ ಮೇಲೆ ಅವಲಂಬಿತವಾಗಿದೆ ಹಾಗೆಯೇ ನಮ್ಮ ಭವಿಷ್ಯವೂ ಕೂಡಾ." ಈ ವಿಶ್ವಾಸ ಎಂದೂ ಹುಸಿಯಾಗಲಿಲ್ಲ. ಬ್ಯಾಂಕ್ ತನ್ನ ಪ್ರಗತಿಯನ್ನು ಸಾಧಿಸಿಯೇ ಸಾಧಿಸಿತು. ಕೆ. ಕೆ. ಪೈಯವರು ಬ್ಯಾಂಕಿನ ಬೆಳವಣಿಗೆಯನ್ನು ಈ ರೀತಿ ಯಾಗಿ ವರ್ಣಿಸುತ್ತಿದ್ದರು "ಒಂದು ಸಂಸ್ಥೆಯ ಯಶಸ್ಸಿನ ಗುಟ್ಟು ಆ ಸಂಸ್ಥೆಯ ಗುರಿಗಳ ಮೇಲಿವೆ. ಶ್ರೀಸಾಮಾನ್ಯನ ಸೇವೆಯಿಂದ ಒಂದು ಸಂಸ್ಥೆಯ ಆತ್ಮೋದ್ಧಾರ ಸಾಧ್ಯವಿದೆ. ಈ ಅಚಲ ವಿಶ್ವಾಸವನ್ನು ರೂಢಿಸಿಕೊಂಡಲ್ಲಿ ಯಾವುದೇ ಒಂದು ಸಂಸ್ಥೆಯ ಧ್ಯೇಯವೂ ಪೂರ್ತಿಯಾಗುವುದು."

ಪೈಯವರ ಅಧಿಕಾರಾವಧಿಯಲ್ಲೇ ಮಹಿಳೆಯರಿಗೆ ಅಧಿಕ ಪ್ರಮಾಣದಲ್ಲಿ ಬ್ಯಾಂಕ್ ಉದ್ಯೋಗಕ್ಕೆ ಅವಕಾಶವಾದದ್ದು. ಭಾರತದಲ್ಲಿ ಮಹಿಳೆಯರು ಅಧಿಕ ಪ್ರಮಾಣದಲ್ಲಿ ಅಧಿಕಾರಿಗಳಾಗಿರುವುದು ಸಿಂಡಿಕೇಟ್ ಬ್ಯಾಂಕ್‌ನಲ್ಲೇ ಎಂಬುದು ಗಮನಾರ್ಹ ವಿಷಯ.

"A man with full of ideas, and his ideas are flowing before he talk. They are very practical one" ಎಂದು ಹೇಳುತ್ತಾರೆ. ಮಣಿಪಾಲದ ಖ್ಯಾತ ವೈದ್ಯ ಡಾ. ಪದ್ಮಾರಾವ್, ಡಾ. ರಾವ್ 'ಕ್ಯಾನ್ಸರ್ ಸೊಸೈಟಿ'ಯ ಕಾರ್ಯದರ್ಶಿಯಾಗಿದ್ದಾಗ ಒಮ್ಮೆ ನಿಧಿ ಸಂಗ್ರಹಣಾ ಕಾರ್ಯಕ್ಕೆ ಕೈ ಹಾಕಿದರು. ಜನರಿಂದ ದೊರಕಿದ ಪ್ರತಿಕ್ರಿಯೆ ಅಷ್ಟೇನೂ ಪ್ರೋತ್ಸಾಹ ದಾಯಕವಾಗಿರಲಿಲ್ಲ. ಈ ಸಮಯದಲ್ಲಿ ಪೈಯವರು 'ಆಹಾರ ನಿಗಮ'ದ ಅಧ್ಯಕ್ಷ ರಾಗಿದ್ದರು. ಪೈಯವರನ್ನು ಭೇಟಿಯಾಗಲು ಬಂದ ಡಾ. ರಾವ್ ತಮ್ಮ ಮಗಳಲ್ಲಿ ಚಿಕ್ಕ ಚೀಟಿಯೊಂದನ್ನು ಬರೆದು ಅವರಿಗೆ ಕಳುಹಿಸಿಕೊಟ್ಟರು. ಧನಸಹಾಯದ ಬಗ್ಗೆ ಕೇಳಿಕೆ ಅದು. ಒಡನೆಯೇ ಪೈಯವರು ತಮ್ಮ ಜೇಬಿನಿಂದ ಎರಡು ಸಾವಿರ ರೂಪಾಯಿ ಗಳನ್ನು ನೀಡಿದ್ದು ಮಾತ್ರವಲ್ಲ ತಾವಾಗಿಯೇ ಕ್ಯಾನ್ಸರ್ ಸೊಸೈಟಿಯ ಪೋಷಕರೂ ಆಗಿಬಿಟ್ಟರು. ಪ್ರಲೋಭನೆ ಇಲ್ಲದೆಯೇ, ತಮ್ಮ ಕೆಲಸಕ್ಕೆ ಏನನ್ನೂ ಪ್ರತಿಯಾಗಿ ಅಪೇಕ್ಷಿಸದೆ ಇರುವುದು ಪೈಯವರ ಶ್ರೀಗುಣ. ಯಾವುದೇ ಒಂದು ವಿಷಯವನ್ನು ರಸವತ್ತಾಗಿ ವರ್ಣಿಸುವುದು ಪೈಯ ವರಿಗೆ ಅಂಗೈನೆಲ್ಲಿ.

ಶ್ರೀ ರಾಜಗೋಪಾಲಾಚಾರಿಯವರು ಪೈಯವರ ಬಗ್ಗೆ ಅಭಿಮಾನ ಸೂಚಿಸುತ್ತಾ ಹೀಗೆಂದಿದ್ದಾರೆ: "ರಾಷ್ಟ್ರೀಕೃತಗೊಂಡ ಸಿಂಡಿಕೇಟ್ ಹಾಗೂ ಕೆನರಾ ಬ್ಯಾಂಕ್‌ಗಳು ಇತರ ಬ್ಯಾಂಕುಗಳಿಗೆ ಮಾದರಿಯಾಗಿವೆ. ಇನ್ನಿತರ ಯಾವುದೇ ಬ್ಯಾಂಕುಗಳು ಈ ಮಟ್ಟವನ್ನು ಕಾಯ್ದುಕೊಂಡು ಬರುವುದು ಅಸಾಧ್ಯ. ಸಮಾಜ ವನ್ನು ಹಾಗೂ ದೇಶವನ್ನು ಕಟ್ಟುವ ಕೆಲಸ ಬ್ಯಾಂಕುಗಳು ಹೇಗೆ ಮಾಡಬಲ್ಲವು ಎಂಬುದಕ್ಕೆ ಸ್ಪಷ್ಟ ನಿದರ್ಶನ ಇವು."

1970 ರಲ್ಲಿ ಪೈಯವರು ತಮ್ಮ ಬ್ಯಾಂಕಿಂಗ್ ಸೇವೆಗೆ ಇತಿಶ್ರೀ ಹಾಡಿದರು, ಇಪ್ಪತ್ತೈದು ವರುಷಗಳ ಸತತ ಸೇವೆ. ಬಾಲ್ಯದಿಂದ ಪ್ರಾಪ್ತ ವಯಸ್ಕನನ್ನಾಗಿ ಮಾಡಿದ ತಮ್ಮದೇ ಕೈಗೂಸಿನ ಅಭಿವೃದ್ಧಿ ಪೈಯವರಿಗೆ ತೃಪ್ತಿ ತಂದುಕೊಟ್ಟಿತ್ತು. ರೋಕ್ ಫರ್ನಾಂಡೀಸರು ಪೈಯವರ ಯಶಸ್ಸನ್ನು ಪ್ರತ್ಯಕ್ಷ ಕಂಡವರು. ಅವರು ಇದನ್ನು ತಮ್ಮ ಭಾಷಣದಲ್ಲಿ ಅಳವಡಿಸಿ ಮನಸ್ಸಿನ ಹೊಗಳಿದ್ದಾರೆ. "ನಾನು ಜನತೆಯೊಂದಿಗೆ ಈ ಹಿಂದೆಯೆ ಹೇಳಿದ್ದಿದೆ. ಪೈ ಸಹೋದರರು ವ್ಯವಹಾರಗಳಲ್ಲಿ ಎಂದೂ ಭಾವುಕರು. ಈ ಮಾತಿನ ಭಾವ ತಾತ್ಪರ್ಯ ನೀವೆಲ್ಲ ಪ್ರತ್ಯಕ್ಷ ಅನುಭವಿಸಿದ್ದೀರಿ. ಭಾವನಾಜೀವಿಗಳು ವ್ಯಾಪಾರ, ವಹಿವಾಟುಗಳಿಗೆ ಖಂಡಿತಾ ಅನರ್ಹರು ; ಇಂಥವರನ್ನು ಕಟ್ಟಿಕೊಂಡಲ್ಲಿ ವ್ಯಾಪಾರ ಎಂದೂ ವೃದ್ಧಿ ದಾಯಕವಾಗಲು ಸಾಧ್ಯವಿಲ್ಲ. ಆದರೆ ಇಲ್ಲಿ ನಡೆದಿರುವುದು ವೈಪರೀತ್ಯ ! ಪೈ ಸಹೋದರರ ಹೃದಯವಂತಿಕೆ, ಸಹಾನುಭೂತಿ, ಮಾನವತೆ ಇತರರಿಗೆ ಮಾರ್ಗ ದರ್ಶಕ. ಅವರಲ್ಲಿನ ಈ ಶ್ರೀಗುಣವೇ ಅವರ ಶ್ರೇಯಸ್ಸಿಗೆ ಕಾರಣ...... ............ ರೋಮನ್ ಮಾತೆಯರು ಜುನೋ ದೇವತೆಯನ್ನು 'ಹೊರೋಶಿಯಸ್' ನಂತಹ ಮಗನನ್ನು ದಯಪಾಲಿಸುವಂತೆ ಬೇಡಿಕೊಳ್ಳುತ್ತಾರೆ. ಅದೇ ರೀತಿ ನಮ್ಮ ಭಾರತೀಯ ಮಾತೆಯರು ಇದೇ ಪೈ ಸಹೋದರರಂತಹ ಸುಪುತ್ರರು ತಮ್ಮ ಉದರ ದಲ್ಲಿ ಜನಿಸುವಂತೆ ಬೇಡಿಕೊಳ್ಳಲಿ." ಸಾರ್ವಜನಿಕ ಸಭೆಯಲ್ಲಿ ಭಾವುಕರಾಗಿ ನುಡಿದ ಟಿ. ಎ. ಪೈ ಅವರ ಗುರು ರಾಕ್ ಫರ್ನಾಂಡಿಸರ ಈ ಮಾತುಗಳು ಗುರುಗಳಿಂದ ಸಂದ ಗೌರವ–ಶಿಷ್ಯನಿಗೆ.

1956 ರಿಂದ 1966 ಈ ಹತ್ತು ವರುಷಗಳ ಬ್ಯಾಂಕಿನ ಬೆಳವಣಿಗೆ ಅವರ ಠೇವಣಿ ಐವತ್ತು ಕೋಟಿಗೇರುವಂತೆ ಮಾಡಿತ್ತು. ಇದೊಂದು ಅದ್ಭುತ ವಿಕ್ರಮ ಮಾತ್ರವಲ್ಲ. ಠೇವಣಿ ಐವತ್ತು ಕೋಟಿ ತಲುಪಿದ್ದೇ ಸರಕಾರ ಈ ಬ್ಯಾಂಕನ್ನು ರಾಷ್ಟ್ರೀಕೃತಗೊಳಿಸಲು ಮಾನ್ಯಮಾಡಿತು.

**ಆಹಾರ ನಿಗಮ :**

ಸುಮಾರು 1935 ರಿಂದೀಚೆಗೆ ಭಾರತಕ್ಕೆ ತಗಲಿದ ಗ್ರಹಣ ಆಹಾರ ಸಮಸ್ಯೆ. ಕೃಷಿಯೇ ಬೆನ್ನೆಲುಬಾಗಿರುವ ಭಾರತದ ಈ ಸಮಸ್ಯೆ–ಹಾಗೂ ಅದರ

ಪರಿಹಾರ ಪೈ ಅವರಿಗೆ ಒಂದು ಸವಾಲಾಗಿತ್ತು. ಇದರ ವಿರುದ್ಧ ಹೋರಾಡಲು 1965 ರಲ್ಲಿ ಹುಟ್ಟಿದ ಸಂಸ್ಥೆಯೇ ಆಹಾರ ನಿಗಮ (ಫುಡ್ ಕಾರ್ಪೊರೇಷನ್). ಅನಾವಶ್ಯಕ ಪೋಲಾಗುತ್ತಿರುವ ಆಹಾರ ಧಾನ್ಯಗಳ ಬಳಕೆಯ ಬಗ್ಗೆ ಸಮರ ಸಾರಲು ಪೈಯವರು ಜನತೆಗೆ ಕರೆ ನೀಡಿದರು. ಈ 'ಭಾರತೀಯ ಆಹಾರ ನಿಗಮ' ಸಂಸ್ಥೆಯ ಅಧ್ಯಕ್ಷರಾಗಿದ್ದ ಪೈಯವರು ಹೋಟೆಲು ಉದ್ಯಮಿಗಳಿಗೆ, ಗೃಹಿಣಿಯರಿಗೆ ತಮ್ಮ ಕಳಕಳಿಯ ನಿವೇದನೆಯನ್ನಿತ್ತರು. 'ಆಹಾರ ಧಾನ್ಯಗಳನ್ನು ಪೋಲು ಮಾಡದಿರುವುದು ಅವುಗಳನ್ನು ಉತ್ಪಾದಿಸುವುದಕ್ಕಿಂತ ಲಾಭಕರ (Conservation of grains is as important as Production). ನಮ್ಮ ಆಹಾರ ಧಾನ್ಯಗಳ ಬಹುದೊಡ್ಡ ಭಾಗ ಇಲಿಗಳಿಂದ ನಾಶವಾಗುವುದು; ಹಾಗೂ ನಮ್ಮ ಗಿರಣಿಗಳ ಪುರಾತನ ರೀತಿಯ ಉಪಕರಣಗಳು ಆಹಾರ ಸಮಸ್ಯೆಯನ್ನು ಮತ್ತಷ್ಟು ಬಿಗಡಾಯಿಸುವುದೆಂದು ಪೈಯವರು ಅರಿತಿದ್ದರು. ಈ ದಿಶೆಯಲ್ಲಿ ಅವರ ಸುಧಾರಣಾ ಪ್ರಯತ್ನ ಮುನ್ನಡೆದಿತ್ತು.

ಭಾರತ ಸರಕಾರ ಟಿ. ಎ. ಪೈ ಅವರ ಸೇವೆಗೆ ಗೌರವವನ್ನು ಸೂಚಿಸಿ ತನ್ನ ಗೆಝೆಟ್ಟಿನಲ್ಲಿ ಹೀಗೆ ಬರೆಯಿತು[61]:

ಆಹಾರ ನಿಗಮ ಸ್ಥಾಪಿಸಿದ ಬಳಿಕ ಉಂಟಾದ ಸುಧಾರಣೆ ಪೈಯವರ ಮುಂದಿನ ಯೋಜನೆಗಳಿಗೆ ಸಂಜೀವಿನಿಯಾಯಿತು. ರೈತ ಬಂಧುಗಳಿಗೆ ಆರ್ಥಿಕ ಸೌಲಭ್ಯಗಳನ್ನು ನೀಡುವಲ್ಲಿ ಬ್ಯಾಂಕುಗಳು ಮುಂದಕ್ಕೆ ಬರುವಂತೆ ಪೈಗಳು ಕರೆ ನೀಡಿದರು. ಪೈಯವರ ದೃಷ್ಟಿಯಲ್ಲಿ ರೈತನು ಎಂದೂ ಒಬ್ಬ ದಿವಾಳಿಯಾದ ಸಾಲಗಾರನಲ್ಲ. ಬದಲಾಗಿ ವಿಶ್ವಾಸಾರ್ಹ ಅಸಹಾಯಕ ಉದ್ದಿಮೆಗಾರ ಹಾಗೂ ಆರ್ಥಿಕ ಸಂಸ್ಥೆಗಳ ಸಹಾಯಗಳಿಗೆ ಅರ್ಹನಾದ ವ್ಯಕ್ತಿ. ಕೃಷಿಯ ವಿಷಯದಲ್ಲಿ ಹೆಚ್ಚಿನ ತಿಳುವಳಿಕೆಯನ್ನು ನೀಡಲು ಸಿಂಡಿಕೇಟ್ ಅಗ್ರಿಕಲ್ಚರಲ್ ಫೌಂಡೇಶನ್ ಒಂದು ಸಂಶೋಧನಾ ಸಂಸ್ಥೆಯಾಗಿ ಹುಟ್ಟಿಕೊಂಡಿತು. ಇದು ರೈತರಿಗೆ ಬೆಳೆಗಳ ಬಗ್ಗೆ, ವಿವಿಧ ಆಧುನಿಕ ಉಪಕರಣಗಳ ಬಗ್ಗೆ ವಿಶೇಷ ಮಾಹಿತಿ ನೀಡಿತು.

1962 ರಲ್ಲಿ ಪೈಯವರು 'ಸೌತ್ ಕೆನರಾ ಡಿಸ್ಟ್ರಿಕ್ಟ್ ಕೊ–ಆಪರೇಟಿವ್ ಅಗ್ರಿಕಲ್ಚರಲ್ ಡೆವಲಪ್‌ಮೆಂಟ್ ಸೊಸೈಟಿ ಲಿಮಿಟೆಡ್' ಸ್ಥಾಪಿಸಿದರು. ಇದು ಕೃಷಿಕರಿಗೆ, ಭೂಮಾಲೀಕರಿಗೆ ಪಂಪುಸೆಟ್ಟು, ಪವರ್ ಟಿಲ್ಲರು ಮೊದಲಾದ ಯಂತ್ರೋಪಕರಣಗಳನ್ನು ತರಿಸಿಕೊಟ್ಟಿತು. ಮೊದಲ ಎರಡು ವರ್ಷಗಳಲ್ಲೇ ಈ ಸಂಸ್ಥೆ 1117 ಪಂಪುಸೆಟ್ಟುಗಳನ್ನೂ, 209 ಪವರ್ ಟಿಲ್ಲರ್‌ಗಳನ್ನೂ, 3563 ಆಯಿಲ್ ಎಂಜಿನ್‌ಗಳನ್ನೂ, 2070 ಇಲೆಕ್ಟ್ರಿಕಲ್ ಪಂಪುಗಳನ್ನೂ ರೈತರಿಗೆ ನೀಡಿ ದಾಖಲೆ ಸ್ಥಾಪಿಸಿತು. ಇದೊಂದು ಯಶಸ್ವೀ ಪ್ರಯೋಗವಾಯಿತು.

ಇದರಿಂದ ಸ್ಫೂರ್ತಿಗೊಂಡ ಪೈಯವರು ಗ್ರಾಮೀಣ ಅಭಿವೃದ್ಧಿಗಾಗಿ ಇನ್ನೂ ಮೂರು ಕೊ–ಆಪರೇಟಿವ್ ಸೊಸೈಟಿಗಳನ್ನು ಪ್ರಾರಂಭಿಸಿದರು. ಕೃಷಿ ಪ್ರಗತಿಗಾಗಿ ಅಗ್ರಿಕಲ್ಚರಲ್ ಡೆವಲಪ್‌ಮೆಂಟ್ ಸೊಸೈಟಿ ; ಮತ್ಸ್ಯ ಉದ್ಯಮದ ಪ್ರಗತಿಗಾಗಿ ಫಿಶ್ಶಿಂಗ್ ಇಂಡಸ್ಟ್ರಿ ಹಾಗೂ ಗುಡಿಕೈಗಾರಿಕಾ ಪ್ರಗತಿಗಾಗಿ ವಿಲೇಜ್ ಇಂಡಸ್ಟ್ರಿಯನ್ನು ಜನತೆಯ ಹಿತದೃಷ್ಟಿಯಿಂದ ತೆರೆದರು. ಸಾಗರ ಸಂಪತ್ತು ವಿಪುಲ ವಾಗಿ ದೊರೆಯುವ ಉಡುಪಿಯ ಮಲ್ಪೆ ಬಂದರಿನ ಮೀನುಗಾರರ ಆರ್ಥಿಕ ದೀನಾವಸ್ಥೆಯಿಂದ ನೊಂದ ಪೈಯವರು 1959 ರಲ್ಲಿ 'ಫಿಶ್ಶರೀಸ್ ಅಂಡ್ ಫಿಶ್ ಪ್ರಾಡಕ್ಟ್ಸ್ ಮ್ಯಾನುಫ್ಯಾಕ್ಚರಿಂಗ್ ಕೊ–ಆಪರೇಟಿವ್ ಸೊಸೈಟಿ'ಯನ್ನು ಉದ್ಯಾವರ ದಲ್ಲಿ ಸ್ಥಾಪಿಸಿದರು. ಇದು ಕರ್ನಾಟಕದ ಮೊತ್ತಮೊದಲ 'ಇಂಡಸ್ಟ್ರಿಯಲ್ ಕೊ–ಆಪರೇಟಿವ್ ಸೊಸೈಟಿ' ಆಗಿದೆ. ಇಷ್ಟು ಮಾತ್ರವಲ್ಲದೆ 50 ಟನ್ ತೂಕ ಯೋಗ್ಯವುಳ್ಳ ಒಂದು ಬೃಹತ್ ಶೀತಲ ಕೇಂದ್ರ (Cold Storage) ವನ್ನೂ ತೊಡಗಿಸಿದ್ದಾರೆ. ಇದು ಮತ್ಸ್ಯ ಉದ್ಯಮಿಗಳಿಗೆ ಒಂದು ವರದಾನವೇ ಸರಿ.

ಆರ್ಥಿಕ ಮಟ್ಟ ತೀರಾ ಕುಸಿದಿರುವ ಕುಟುಂಬಗಳ ಹೆಣ್ಣು ಮಕ್ಕಳು ಧನಸಂಪಾದನೆಗೆ ಕೆಲಸಗಳಿಗೆ ಸೇರಬೇಕಾಗುವುದು ಅನಿವಾರ್ಯ. ಕರಾವಳಿ ಪ್ರದೇಶ ಗಳಲ್ಲಿ ಕಲ್ಪವೃಕ್ಷಗಳು ಧಾರಾಳ. ತೆಂಗಿನ ನಾರಿನ ಗುಡಿ ಕೈಗಾರಿಕಾ ಗೃಹಗಳು ಅಲ್ಲಿ ಇಲ್ಲಿ ಚದುರಿಹೋಗಿದ್ದುವು. ಸರಿಯಾದ ಪ್ರೋತ್ಸಾಹ, ಮಾರಾಟ ವ್ಯವಸ್ಥೆ ಗಳಿಲ್ಲದಿರುವ ಕಾರಣ ಹುಟ್ಟಿನಲ್ಲೇ ಮುರುಟಿಕೊಳ್ಳುವ ಇಂತಹ ಉದ್ಯಮಗಳಿಗೆ ಕಾಯಕಲ್ಪ ನೀಡಲು' ಕೋ–ಆಪರೇಟಿವ್ ಕಾಯರ್ ಸೊಸೈಟಿ'ಯನ್ನು 1955 ರಲ್ಲಿ ಪೈಯವರು ಸ್ಥಾಪಿಸಿದರು. ಆರು ವರ್ಷಗಳಷ್ಟು ಕಾಲ ಇದರ ಅಧ್ಯಕ್ಷ ಸ್ಥಾನದಲ್ಲಿದ್ದ ಪೈಯವರು ಸಾಕಷ್ಟು ಅಭಿವೃದ್ಧಿ ಯೋಜನೆಗಳನ್ನು ರೂಪಿಸಿದರು. ಸ್ಥಳೀಯ ಹೆಣ್ಣು ಮಕ್ಕಳಿಗೆ ಆರ್ಥಿಕ ಸ್ವತಂತ್ರತೆಯನ್ನೂ ಜೀವನ ಭದ್ರತೆಯನ್ನೂ ತನ್ಮೂಲಕ ನೀಡಿದರು.

ಇವರ ಕೋ–ಆಪರೇಟಿವ್ 'ಅಗ್ರಿಕಲ್ಚರರ್ ಡೆವಲಪ್‌ಮೆಂಟ್ ಸೊಸೈಟಿ' ಯ ಯೋಜನೆಗಳು ಜನಪ್ರಿಯವಾದದ್ದೇ ತಡ ಇದರ ಬೆಳವಣಿಗೆ ತ್ವರಿತಗತಿಯಲ್ಲಿ ಏರಿತು. ಕಂತಿನ ಯೋಜನೆಯ ಮೇಲೆ ರೈತರಿಗೆ ಪಂಪುಸೆಟ್ಟು ಹಾಗೂ ಇನ್ನಿತರ ಉಪಕರಣಗಳನ್ನು ನೀಡುವಲ್ಲಿ ಈ ಸಂಸ್ಥೆ ಮುಂದೆ ಬಂದಿತು. ಸಕಾಲದಲ್ಲಿ ತನ್ನ ನೆರವನ್ನು ನೀಡಿತು.

ಪೈಯವರ ಈ ಯೋಜನೆ ಇನ್ನಿತರ ಜಿಲ್ಲೆಗಳಿಗೂ ಮಾದರಿಯಾಗಿ ಇದನ್ನೇ ಅನುಕರಿಸುವಂತೆ ಪ್ರೇರೇಪಿಸಿತು. ಕೋ–ಆಪರೇಟಿವ್ ಆಂದೋಲನ

ಹಾಗೂ ವ್ಯವಸಾಯ ಅಭಿವೃದ್ಧಿ ಈ ಎರಡೂ ಕ್ಷೇತ್ರಗಳಲ್ಲೂ ಪೈಯವರ ಕೊಡುಗೆ ಅಪಾರ. ಭಾರತದ ಆರ್ಥಿಕ ಸಮಸ್ಯೆ ಹಾಗೂ ಅದರ ಉದ್ಧಾರ ಈ ಬಗ್ಗೆ ಗಾಢ ವಾಗಿ ಅಭ್ಯಸಿಸಿದವರು ಪೈಯವರು. ದೇಶದ ಔದ್ಯಮಿಕ ಅಭಿವೃದ್ಧಿಗೆ ಇವರು ಶಾಶ್ವತವಾದ ಕೊಡುಗೆಯನ್ನು ನೀಡಿದ್ದಾರೆ.

**ಜೀವವಿಮಾ ನಿಗಮ (L.I.C.) :**

ಪೈಯವರಿಗೆ ತಮ್ಮ ಸಾಮರ್ಥ್ಯ ತೋರಿಸಲು ಅವಕಾಶ ಒದಗಿಸಿಕೊಟ್ಟ ಇನ್ನೊಂದು ಕಾರ್ಯರಂಗ ಭಾರತೀಯ ಜೀವ ವಿಮಾ ಸಂಸ್ಥೆ. ಆದರೆ ಈ ಕ್ಷೇತ್ರ ಪೈಯವರಿಗೇನೂ ಹೊಸತಲ್ಲ. 1935 ರಲಿ ಉಡುಪಿಯಲ್ಲಿ ಪ್ರಾರಂಭಿಸಿದ 'ಕೆನರಾ ಮ್ಯೂಚುವಲ್ ಎಶುರೆನ್ಸ್ ಕಂಪನಿ ಲಿಮಿಟೆಡ್' ಇವರಿಗೆ ಆರ್ಥಿಕ ಕ್ಷೇತ್ರದಲ್ಲಿ ಅನುಭವ ದೊರಕಿಸಿಕೊಟ್ಟಿತ್ತು. 1956ರಲ್ಲಿ ಈ ಸಂಸ್ಥೆ ಜೀವ ವಿಮಾ ನಿಗಮ ದೊಂದಿಗೆ ಲೀನವಾಗಿಬಿಟ್ಟಿತು. ಆಗಿನ ಅಧ್ಯಕ್ಷರಾಗಿದ್ದ ಶ್ರೀ ಎಂ. ಆರ್. ಭಿಡೆಯವ ರಿಂದ ಆ ಪದವಿ ತೆರವಾದಾಗ ಆ ಸ್ಥಾನ ತುಂಬಲು ಓರ್ವ ಅನುಭವಿಯ ಅವಶ್ಯಕತೆ ಇದ್ದಿತು. ಪೈಯವರು ಆ ಸ್ಥಾನಕ್ಕೆ ಅರ್ಹರಾಗಿ ಭರ್ತಿಯಾದರು. 1970 ರಲ್ಲಿ ಅಧ್ಯಕ್ಷ ಪದವಿಯನ್ನು ಸ್ವೀಕರಿಸಿದರು.

1969 ರಲ್ಲೇ ಕನಿಷ್ಟಪಕ್ಷ ಎರಡು ವರ್ಷಗಳಾದರೂ ಜೀವ ವಿಮಾ ಸಂಸ್ಥೆಯ ಮುಖ್ಯಸ್ಥನಾಗಬೇಕೆಂದು ಆಗಿನ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿಯವರು ಕೇಳಿಕೊಂಡಾಗ ಪೈಯವರು ಸಂತಸದಿಂದ ಒಪ್ಪಿಕೊಂಡರು. ಸ್ವತಂತ್ರ ಮನೋ ವೃತ್ತಿಯ ಪೈಯವರಿಗೆ ಈ ಹುದ್ದೆ ಪಂಥಾಹ್ವಾನದಂತಿತ್ತು. ಮಾತ್ರವಲ್ಲ ಸಮಸ್ಯೆ ಗಳನ್ನು ಪರಿಹರಿಸಬಲ್ಲ ಸಂಪೂರ್ಣ ಸ್ವಾತಂತ್ರ್ಯವೂ ಅವರಿಗಿತ್ತು. ಮುಂದೇ ಇದೇ ಕಂಪೆನಿಯಲ್ಲಿ ಕಾರ್ಮಿಕ ಸಮಸ್ಯೆಗಳು ತಲೆದೋರಿದಾಗ ಆಡಳಿತ ವರ್ಗದವರಿಗೂ, ಕಾರ್ಮಿಕರಿಗೂ, ಏಜೆಂಟರಿಗೂ ತೃಪ್ತಿಕರ ರೀತಿಯಲ್ಲಿ ಸಂಧಾನನಡೆಸಿ, ಲೀಲಾಜಾಲ ವಾಗಿ ಸಮಸ್ಯೆಗೊಂದು ಮುಕ್ತಿ ಹಾಡಿದ್ದು ಪೈಯವರ ಅದ್ಭುತ ಸಾಧನೆ.

'ಜೀವ ವಿಮಾ ನಿಗಮದ ಏಕಮೇವಾದ್ವಿತೀಯ ಉದ್ದೇಶ ಒಂದೇ. ಪಾಲಿಸಿದಾರರಿಗೆ ಆದಷ್ಟು ಸೌಲಭ್ಯ, ಸೌಕರ್ಯಗಳನ್ನು ಒದಗಿಸುವುದು. ತನ್ಮೂಲಕ ಯಾವುದೇ ಸಮಸ್ಯೆ ಒಗಗದಂತೆ ನೋಡಿಕೊಳ್ಳುವುದು. ಮಾತ್ರವಲ್ಲ ಸಂಸ್ಥೆಯನ್ನೂ ಪಾಲಿಸಿದಾರರನ್ನೂ ಸಮಾನ ಸ್ತರದಲ್ಲಿ ಮೈತ್ರಿಯ ದ್ಯೋತಕವಾಗಿ ತಂದು ನಿಲ್ಲಿಸಬೇಕು.' ಇದು ಪೈಯವರ ಆಕಾಂಕ್ಷೆ.

1971 ರಲ್ಲಿ ರೈತರಿಗೆ ನೆರವಾಗುವ ಸೆಂಟಿನರಿ ಪಾಲಿಸಿಯನ್ನು ಭಾರತೀಯ ಜೀವ ವಿಮಾ ನಿಗಮದಲ್ಲೂ ಪ್ರಾರಂಭಿಸಲಾಯಿತು. ನಿರ್ದಿಷ್ಟ

ಪರವಾನವಿಲ್ಲದ ಪಾಲಿಸಿದಾರ ರೈತರು ಕಟ್ಟಬೇಕಾಗಿದ್ದ ಕಂತನ್ನು ಕಟ್ಟಲು ತಡ ಪಾದಲ್ಲಿ ಅವರಿಗೆ ಮೂರು ವರ್ಷಗಳ ಅವಧಿ ನೀಡಲಾಗುವುದು. ಈ ನವೀನ ನೀತಿಯಿಂದಾಗಿ ರೈತರಿಗೆ ಬಹಳಷ್ಟು ಲಾಭದಾಯಕವಾಯಿತು.

1969–70 ರಲ್ಲಿ ಎಂಟು ಬಿಲಿಯನ್ ಇದ್ದ ಜೀವ ವಿಮಾ ನಿಗಮದ ಪಾಲಿಸಿ ಕೇವಲ ಎರಡು ವರ್ಷಗಳ ಅವಧಿಯಲ್ಲಿ ಇಪ್ಪತ್ತು ಬಿಲಿಯನ್‌ಗೆ ಏರಿತು. (1971–72) ಮಾತ್ರವಲ್ಲ ಜನಸಾಮಾನ್ಯರಿಗೆ ಭದ್ರ ಭವಿಷ್ಯಕ್ಕೆ ಇದು ಭವ್ಯ ಸೋಪಾನ ಎಂಬುದನ್ನು ಮನವರಿಕೆ ಮಾಡಿಕೊಟ್ಟಿತು. ಅತಿವೃಷ್ಟಿ, ಅನಾವೃಷ್ಟಿಗಳಲ್ಲಿ ರೈತರಿಗೆ ನೆರವನ್ನು ನೀಡುವ 'ಸಾಮೂಹಿಕ ವಿಮಾ ಯೋಜನೆ' (Group Insurance Schemes) ಯಲ್ಲೂ ವಿಶೇಷ ರಿಯಾಯಿತಿಗಳು ಲಭ್ಯವಾದವು. ಇದು ಪೈ ಸಾಧನೆಯ ಮತ್ತೊಂದು ದೇಣಿಗೆ. ದೇಶದ ಅಭಿವೃದ್ಧಿಯಲ್ಲಿ ಹಾಗೂ ಸಾರ್ವಜನಿಕರ ವ್ಯಾಪಾರ ವಹಿವಾಟಿನ ಮೇಲೆ ನೇರ ಪ್ರಭಾವ ಬೀರುವಲ್ಲಿ ಜೀವ ವಿಮಾ ನಿಗಮ ಕಾರಣೀಭೂತವಾಯಿತು.

ಭಾರತೀಯ ಜೀವ ವಿಮಾ ನಿಗಮದಿಂದ ದೊರಕುವ ದೇಣಿಗೆಗಳೆಲ್ಲ ವನ್ನೂ ಭಾರತದ ಪಂಚವಾರ್ಷಿಕ ಯೋಜನೆಗಳಿಗೆ ಬಳಸಲಾಗುತ್ತಿತ್ತು. ಗ್ರಾಮಾಂತರ ನೀರು ಸರಬರಾಜು ಹಾಗೂ ಹೌಸಿಂಗ್ ಸ್ಕೀಮುಗಳಿಗೆ ಈ ದೇಣಿಗೆಯಿಂದ ಸಹಾಯವಾಗುತ್ತಿತ್ತು. ನವ ನವೀನ ಯೋಜನೆಗಳು ಇಲ್ಲಿ ಹುಟ್ಟುತ್ತಿದ್ದುವು. ಚರ್ಚಿಸಲ್ಪಡುತ್ತಿದ್ದುವು. ಅವುಗಳನ್ನು ಅನುಷ್ಠಾನಕ್ಕೆ ತರಬಹುದು ಎಂದಾದಲ್ಲಿ ಆ ಕೂಡಲೇ ಕಾರ್ಯರೂಪಕ್ಕೆ ತರಲಾಗುತ್ತಿತ್ತು. ಆದರ್ಶವಾದಿತ್ವವನ್ನು ವ್ಯಾವಹಾರಿಕ ದೃಷ್ಟಿಯೊಂದಿಗೆ ತುಲನಾತ್ಮಕವಾಗಿ, ಸಮ್ಮಿಳಿತಗೊಳಿಸಿ ಫಲಿತಾಂಶ ಗಳನ್ನು ತಿಳಿಯುತ್ತಿದ್ದರು.

ಪೈಯವರ ನಾಯಕತ್ವದಲ್ಲೇ ಭಾರತೀಯ ಜೀವ ವಿಮಾ ಸಂಸ್ಥೆ ಒಂದು ಹೊಸ ಸ್ವರೂಪವನ್ನೇ ಪಡೆಯಿತು. ಆದ್ದರಿಂದಲೇ ಪೈಯವರು ಅವನ್ನು 'ಸಮಾಜದ ಹಿತಚಿಂತಕ' ಎಂದು ಕೊಂಡಾಡಿದ್ದಾರೆ.

ಜೀವ ವಿಮಾ ನಿಗಮದ ಶತಮಾನೋತ್ಸವ ಸಮಾರಂಭದಲ್ಲಿ ಪೈ ಯವರು ಹೀಗೆಂದಿದ್ದಾರೆ— ಭಾರತೀಯ ಜೀವ ವಿಮಾ ನಿಗಮದಲ್ಲಿರಿಸಿದ ಹಣಕ್ಕೆ ಸಂಪೂರ್ಣ ಸಂರಕ್ಷತೆ ಇದೆ ಎಂಬ ಭಾವನೆ ಈಗ ಜನಮನದಲ್ಲಿ ಬೇರೂರಿದೆ. ಈ ಸಂಸ್ಥೆ ತನ್ನ ವಿಮಾದಾರರ ಧನಕ್ಕೆ ಟ್ರಸ್ಟಿ ರೂಪದಲ್ಲಿ ಸೇವೆ ಸಲ್ಲಿಸುತ್ತಿದೆ. ಜೀವ ವಿಮಾ ನಿಗಮದಲ್ಲಿ ಖಾತೆ ತೆರೆದ ವ್ಯಕ್ತಿ ತಾನು ನಿರ್ಶ್ಚಿಂತನಾಗಿರಬಹುದು. ತನ್ನ ಸಂಸಾರಕ್ಕೆ ತನ್ನ ನಂತರವೂ ಒಬ್ಬ ಟ್ರಸ್ಟಿ (trustee)ಯನ್ನು ನೇಮಿಸಿದ

ತೃಪ್ತಿ ಆತನಿಗಿರಬಹುದು. ಆತನ ಮರಣಾನಂತರವೂ ಅದು ಆತನ ಕುಟುಂಬದ ಸ್ನೇಹಿತನಂತೆ ಇರಲು ಸಾಧ್ಯವಿದೆ." ಇದರ ಬೆಳವಣಿಗೆಯ ಬಗ್ಗೆ ಪೈಯವರು ಅಭಿಮಾನಪಡುತ್ತಾ "ಯಾವುದೇ ಅದಕ್ಷತೆಗೆ ಎಡೆ ಇಲ್ಲದಂತೆ ಈ ಜೀವ ವಿಮಾ ಸಂಸ್ಥೆಯನ್ನು ನಡೆಸುವುದು ಭಾರತೀಯರಾದ ನಮಗೆ ಅದೊಂದು ಸವಾಲೇ ಸರಿ. ಅವರ ಬೆಳವಣಿಗೆಯ ತೀವ್ರಗತಿಯನ್ನು ನೋಡಿದರೆ ಯಾರಿಗಾದರೂ ಆನಂದವಾಗದಿರದು. ದೂರುಗಳಿಗವಕಾಶವಿಲ್ಲದಂತಹ ಆಡಳಿತ ವ್ಯವಸ್ಥೆಯ ಈ ಸಂಸ್ಥೆ ನಮಗೊಂದು ಆಶ್ರಯ ಹಾಗೂ ಆದರ್ಶಪ್ರಾಯ" ಎಂದು ಹೃದಯ ತುಂಬಿ ನುಡಿದಿದ್ದಾರೆ.

ಟಿ. ಎ. ಪೈ ಅವರು ಜೀವ ವಿಮಾ ನಿಗಮದ ಅಧ್ಯಕ್ಷರಾಗಿದ್ದಾಗ ಮಾಡಿದ ಜನತಾ ಸುಧಾರಣೆಗಳು ಹಲವು[೬೨]. ಈ ಯೋಜನೆಗಳೆಲ್ಲ ಯಶಸ್ವಿಯಾಗಿ ಜನಸೇವಾಕಾರ್ಯ ನಿರ್ವಹಿಸುತ್ತಿವೆ. ದೇಶದ ಆರ್ಥಿಕ ಸಮಸ್ಯೆಯ ನಿರ್ಮೂಲನಕ್ಕೆ ಜೀವ ವಿಮಾ ನಿಗಮದ ಕೊಡುಗೆ ಅಪಾರ. ಜನಸಾಮಾನ್ಯರಿಗೂ ಬದುಕಿನ ಹಕ್ಕನ್ನು ನೀಡಿದ ಸಂಸ್ಥೆ ಇದು. ಪೈಯವರು ಇವರ ಏಳಿಗೆಗಾಗಿ ಅಹರ್ನಿಶಿ ದುಡಿದವರು.

ಭಾರತೀಯ ಜೀವ ವಿಮಾ ಸಂಸ್ಥೆಯ ಅದ್ಭುತ ಪ್ರಗತಿಗೆ ಕಾರಣರಾದ ಟಿ. ಎ. ಪೈ ಅವರನ್ನು 1972ರಲ್ಲಿ 'ಪದ್ಮಭೂಷಣ' ಪ್ರಶಸ್ತಿ ನೀಡಿ ಭಾರತ ಸರಕಾರ ಗೌರವಿಸಿತು. ಮುಂದೆ ಒಂದೇ ವರುಷದಲ್ಲಿ ಅಂದರೆ 1973 ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಡಿ. ಲಿಟ್. ಗೌರವ ಪದವಿಯನ್ನೂ 1975 ರಲ್ಲಿ ಆಂಧ್ರ ವಿಶ್ವವಿದ್ಯಾಲಯ ಮತ್ತೊಂದು ಡಿ. ಲಿಟ್. ಗೌರವ ಪದವಿಯನ್ನೂ ನೀಡಿ ತಾನು ಧನ್ಯವಾಯಿತು.

**ರಾಜಕೀಯದಲ್ಲಿ ;**

ಬ್ಯಾಂಕಿಂಗ್ , ಜೀವ ವಿಮಾ ಯೋಜನೆಗಳಿಂದ ಭಿನ್ನ ಜಗತ್ತು ರಾಜಕೀಯ. ಈ ಚತುರ ಮುತ್ಸದ್ದಿ ಟಿ. ಎ. ಪೈ ಅವರಿಗೆ ರಾಜಕೀಯದಲ್ಲೂ ಅವಕಾಶ ಕಾದಿತ್ತು. ರಾಜ್ಯಸಭಾ ಸದಸ್ಯರಾಗಿ 1972ರಲ್ಲಿ ಟಿ. ಎ. ಪೈ ಆರಿಸಿ ಬಂದರು. ಮುಂದೆ ಕೆಲವೇ ವರುಷಗಳಲ್ಲಿ ಇವರನ್ನು ಕ್ಯಾಬಿನೆಟ್ ಮಂತ್ರಿಗಳಾಗಿ ಆಯ್ಕೆ ಮಾಡಲಾಯಿತು. 1973 ರಲ್ಲಿ ರೈಲ್ವೆ ಮಂತ್ರಿಯಿಂದ ಕೈಗಾರಿಕಾ ಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದರು. "ಭಾರತದ ನವೀನ ಕೈಗಾರಿಕಾ ನೀತಿ ಇದು. ಇದರಲ್ಲಿ ಮಧ್ಯಮ ಹಾಗೂ ಕೆಳ ಮಧ್ಯಮ ವರ್ಗದ ಜನರಿಗೆ ಅವಕಾಶ ಮಾಡಿಕೊಡಬೇಕು. ಈ ನೀತಿಯನ್ನು ಉಳಿಸಲೋಸುಗ ನಾವು ಮಧ್ಯಮ ಹಾಗೂ

ಸಣ್ಣ ಕೈಗಾರಿಕೆಗಳಿಗೆ ಪ್ರೋತ್ಸಾಹ ಕೊಡುತ್ತಿದ್ದೇವೆ. ಇದರ ಬೆಳವಣಿಗೆಗೆ ಅಡ್ಡಿಯಾಗುವ ಅಡೆತಡೆಗಳನ್ನು ನಿವಾರಿಸುವ ಯತ್ನ ಮಾಡಲಿದ್ದೇವೆ.[63]"

ಇಡೀ ಜಗತ್ತೇ ಭಾರತೀಯ ಉತ್ಪಾದನಾ ವಸ್ತುಗಳಿಗೆ ಮಾರುಕಟ್ಟೆಯಾಗಬೇಕು. ಇದು ಪೈಯವರ ಕನಸು. ಸತತ ಯತ್ನವ ಮಾಡಬೇಕು, ಸಮೃದ್ಧಿ ಹೊಂದಬೇಕು. ಅವರ ಜೀವನ ಸೂತ್ರವೇ ಇದು. ವ್ಯಕ್ತಿ ಹಿತಕ್ಕಿಂತ ಸಮಾಜ ಕಲ್ಯಾಣದತ್ತ ಪೈಯವರ ದೃಷ್ಟಿ. ವ್ಯಷ್ಟಿಗಿಂತ ಸಮಷ್ಟಿಯಲ್ಲೇ ಅರ್ಥವನ್ನು ಕಾಣುವ ಮನೋವೃತ್ತಿ. ಇದಕ್ಕೊಂದು ಅದ್ಭುತ ಉದಾಹರಣೆ ಉಡುಪಿಯ ಹತ್ತಿರ ಪಾಂಗಾಳ ಎಂಬ ಸ್ಥಳವಿದೆ. ಅಲ್ಲಿ ಹರಿಯುವ ನದಿಗೆ ಅಣೆಕಟ್ಟೊಂದರ ಅವಶ್ಯಕತೆ ಇದ್ದಿತು. ಸಂಬಂಧಪಟ್ಟ ಅಧಿಕಾರಿಗಳು ಈ ಬಗ್ಗೆ ಕಾರ್ಯಪ್ರವೃತ್ತರಾದರು. ಆದರೆ ಈ ಅಣೆಕಟ್ಟಿನ ನಿರ್ಮಾಣದಿಂದ ತಮ್ಮ ಆಸ್ತಿ ಪಾಸ್ತಿಗಳಿಗೆ ಹಾನಿಯುಂಟಾಗಬಹುದೆಂದು ಕೆಲವರು ಸಾರ್ವಜನಿಕರು ಪೈಯವರಲ್ಲಿ ಮನವಿ ಮಾಡಿಕೊಂಡರು. ಕೂಡಲೇ ಪೈಯವರು ಸ್ಥಳಪರಿಶೀಲನೆಗೆ ಹೊರಟರು, ಅಲ್ಲಿನ ಅಧಿಕಾರಿಗಳು ತಮ್ಮ ನಿಲುವನ್ನು ಸಮರ್ಥಿಸಿದ್ದನ್ನು ಪೈಯವರು ಒಪ್ಪಿಕೊಳ್ಳುವಂತಿತ್ತು. ತೃಪ್ತಿಗೊಂಡ ಪೈಯವರು ಸಾರ್ವಜನಿಕರನ್ನು ಒಪ್ಪಿಸುವ ಕಾರ್ಯಭಾರ ತಮ್ಮ ಹೆಗಲ ಮೇಲೇ ಹೊತ್ತುಕೊಂಡು ಅಣೆಕಟ್ಟಿನ ಕಾರ್ಯಕ್ಕೆ ತಮ್ಮ ಸಮ್ಮತಿ ಸೂಚಿಸಿದರು. ಈಗ ಉಳಿದದ್ದು ಜನರನ್ನು ಒಲಿಸಿ ಒಪ್ಪುವಂತೆ ಮಾಡುವುದು ಮಾತ್ರ! ಯಾವುದೇ ಕಠಿಣ ಹಾಗೂ ಸಂಕೀರ್ಣ ಸಮಸ್ಯೆಗಳಿಗೆ ಪೈಯವರ ಬಳಿ ಎಂದೂ ಪರಿಹಾರ ಇದ್ದದ್ದೇ. ಅಂತಹ ಚೈತನ್ಯಶೀಲ ವ್ಯಕ್ತಿತ್ವ ಅವರದು. ಸರಿ, ಪೈಯವರು ಅಣೆಕಟ್ಟಿನ ನಿರ್ಮಾಣದ ವಿರುದ್ಧ ಅರ್ಜಿ ಹಾಕಿದ ವ್ಯಕ್ತಿಗಳನ್ನು ಬರಮಾಡಿಕೊಂಡರು. ವ್ಯಕ್ತಿಹಿತ–ಸಮಷ್ಟಿ ಹಿತದತ್ತ ಅವರ ಗಮನ ಸೆಳೆದರು. ಅವರಿಗೆ ನಷ್ಟವಾಗದಂತೆ ತಮ್ಮ ಕಾರ್ಯವನ್ನು ಸಾಧಿಸಿಯೇ ಬಿಟ್ಟರು. ತಮ್ಮ ಹುಟ್ಟೂರಿನ ಸರ್ವತೋಮುಖ ಅಭಿವೃದ್ಧಿಯೇ ತಮ್ಮ ಗುರಿ ಎನ್ನುವುದನ್ನು ಸಾಬೀತುಗೊಳಿಸಿದರು.[64]

ತಮ್ಮನ್ನು ಚುನಾವಣೆಯಲ್ಲಿ ಆರಿಸಿ ಕಳುಹಿಸಿದ ಜನತೆಗೆ ಪೈಯವರದ್ದು ತುಂಬು ಹೃದಯದ ಕೃತಜ್ಞತೆ.[65]

"ಈ ರಾಷ್ಟ್ರದಲ್ಲಿ ದೇದೀಪ್ಯಮಾನವಾಗಿ ಬೆಳಗುತ್ತಿರುವ ನಕ್ಷತ್ರಗಳಲ್ಲಿ ಟಿ. ಎ. ಪೈ ಅವರು ಜ್ವಲದುಜ್ವಲವಾದ ನಕ್ಷತ್ರ. ಇದು ನಕ್ಷತ್ರ ಮಾತ್ರವಲ್ಲ ನಕ್ಷತ್ರಪುಂಜ" ಎಂದು ಡಾ॥ ಹರ್ಡೀಕರರು ಮನತುಂಬಿ ನುಡಿದಿದ್ದಾರೆ. ಈ ಕನ್ನಡ ಕುವರನ ಕೀರ್ತಿ ವಿಶಾಲವಾದದ್ದು.

ರಾಜಕೀಯ ಸಮಸ್ಯೆಗಳ ಪರಿಹಾರ ಕಂಡುಹಿಡಿಯಲು ಉಡುಪಿ ಮತ್ತು ಮಣಿಪಾಲ ಅವರಿಗೊಂದು ಪ್ರಯೋಗ ಶಾಲೆ. ಓರ್ವ ಸಾಧಕ ತನ್ನ ತುಂಬು ಜೀವನದಲ್ಲಿ ಏನೇನು ಸಾಧಿಸಬಲ್ಲನೋ ಅದನ್ನು 54ರ ಮೊಟಕು ಆಯುಷ್ಯದಲ್ಲೇ ಇವರು ತೀರಿಸಿದ್ದು ನೋಡಿದರೆ ಭವಿಷ್ಯ ಕಂಡವರೇನೋ ಅನ್ನಿಸುತ್ತದೆ. ಸಜ್ಜನಿಕೆ–ಸಭ್ಯತೆ–ಸೇವಾಗುಣಗಳಿಗೆ ಹೆಸರಾದ ಸುಸಂಸ್ಕೃತರಿವರು.

ಟಿ. ಎ. ಪೈ ಅವರ ಸಾಧನೆಯ ಬಗ್ಗೆ ಡಾ॥ ಆರ್ ಸಿ. ಕೂಪರ್ ಅವರು ಹೀಗೆಂದು ಉದ್ಗರಿಸಿದರು : "ಅಸಾಧಾರಣ, ಅತ್ಯದ್ಭುತ, ಊಹಿಸಲಸಗಳವಾದುದನ್ನು ಇಂದು ನಾವು ಮಣಿಪಾಲದಲ್ಲಿ ಕಾಣುತ್ತಿದ್ದೇವೆ. ಮಣಿಪಾಲಕ್ಕೆ ಭೇಟಿ ಕೊಡುವ ಮುನ್ನ ಅಲ್ಲಿನ ಬಗ್ಗೆ ಕೇಳಿದ್ದೆವು. ಇದೀಗ ಪ್ರತ್ಯಕ್ಷವಾಗಿ ನೋಡಿದ ಬಳಿಕ ಮಾನವಶಕ್ತಿಯ ಮೇಲೆ ನಂಬಿಕೆ ಇಡುವಂತಾಗಿದೆ. ಇಲ್ಲಿನ ಬ್ಯಾಂಕ್ ಹಾಗೂ ವಿದ್ಯಾಭ್ಯಾಸ ಕೇಂದ್ರಗಳು ಈ ಪೈ ಕುಟುಂಬದ ಅಹರ್ನಿಶಿಯತ್ನದ ಫಲ ಎಂಬುದು. ಸರ್ವವಿದಿತ. ನೈಸರ್ಗಿಕ ಸಂಪತ್ತಿನ ಸಂಪೂರ್ಣ ಬಳಕೆಯೊಂದಿಗೆ ಆರ್ಥಿಕ ಹಾಗೂ ಕಲಾ ಶ್ರೀಮಂತಿಕೆ ನಮಗೆ ಇಲ್ಲಿ ಮೆಚ್ಚುಗೆಯಾದ ಅಂಶಗಳಾಗಿವೆ."

ಭಾರತೀಯ ಕೈಗಾರಿಕೋದ್ಯಮದ ಬೆಳವಣಿಗೆಯ ಬಗ್ಗೆ ಪೈ ಯವರಿಗೆ ಅಸಮಾಧಾನವಿದೆ. ವಿದ್ಯುಚ್ಛಕ್ತಿಯ ಅಭಾವ, ಶಕ್ತಿಯ ಬಿಕ್ಕಟ್ಟು, ವಿದೇಶೀವಿನಿಮಯ ಅಡಚಣೆ ಅಥವಾ ಪ್ರಾಕೃತಿಕ ಕಾರಣಗಳಾದ ಅತಿವೃಷ್ಟಿ, ಅನಾವೃಷ್ಟಿ, ಬರ, ಹಣದುಬ್ಬರ, ಯುದ್ಧಾನಂತರದ ಕಾಲಸ್ಥಿತಿ ಇವೂ ಕೈಗಾರಿಕೆಯ ಕುಂಠಿತ ಬೆಳವಣಿಗೆಗ ಪೂರಕ ಅಂಶಗಳು.

1972 ರಲ್ಲಿ ಸುಮಾರು ಇನ್ನೂರ ಅರವತ್ತು ಕೋಟಿ ರೂಪಾಯಿಯ ಉತ್ಪಾದನಾ ಸಾಮರ್ಥ್ಯದ ಹದಿನಾಲ್ಕು ಪಬ್ಲಿಕ್ ಸೆಕ್ಟರ್ ಕೈಗಾರಿಕೆಗಳು ಹತ್ತೊಂಬತ್ತುಕೋಟಿ ರೂಪಾಯಿಗಳ ನಷ್ಟದಲ್ಲಿದ್ದವು. ಅದೇ ಕಂಪನಿಗಳ ಆಡಳಿತವನ್ನು ಪೈಯವರು ತಮ್ಮ ಕೈಗೆತ್ತಿಕೊಂಡು 1976–77 ರಲ್ಲಿ ಎಂಟುನೂರ ಮೂವತ್ತು ಕೋಟಿ ರೂಪಾಯಿ ಉತ್ಪಾದನಾ ಸಾಮರ್ಥ್ಯದಿಂದ ಅರವತ್ತೈದು ಕೋಟಿ ರೂಪಾಯಿಯ ನಿವ್ವಳ ಲಾಭದತ್ತ ತಿರುಗಿಸಿದರು. ಈ ಒಂದು ಉದಾಹರಣೆಯೇ ಅವರೊಬ್ಬ ಸಫಲ ಕೈಗಾರಿಕಾ ಮಂತ್ರಿ ಎಂಬುದನ್ನು ತೋರಿಸುತ್ತದೆ. ಕೊಂಕಣ ರೈಲ್ವೆಗೆ ಟಿ. ಎ. ಪೈ ಮತ್ತೊಂದು ಹೆಸರು. ಅದವರ ಕನಸು ಕೈಗಾರಿಕೋದ್ಯಮದ ಅಭಿವೃದ್ಧಿಗಾಗಿ ಇವರು ಕೈಗೊಂಡ ಸುಧಾರಣಾ ಕ್ರಮಗಳು ಹಾಗೂ ಅವರ ಸಾಧನೆಗಳ ಪಟ್ಟಿಯೇ ಹಿರಿದಾಗಿದೆ.[66]

ಟಿ. ಎ. ಪೈಯವರ ಸಹಪಾಠಿ ಮಿತ್ರರೊಬ್ಬರು ಗೆಳೆಯನನ್ನು ಕೊಂಡಾಡುವುದುಂಟು : "ಟಿ. ಎ. ಪೈ ಒಬ್ಬ ರಾಜಕಾರಣಿ ಮಾತ್ರ ಖಂಡಿತವಲ್ಲ. ಅವರೊಬ್ಬ ದಕ್ಷ ಸರಕಾರಿ ಅಧಿಕಾರಿ. ಅವರ ಜೊತೆಗೂಡಿ ಕೆಲಸ ಮಾಡುವುದೇ ಒಂದು ಸುಯೋಗ, ಇಂದು ಇಂತಹ ಹತ್ತು ಟಿ. ಎ. ಪೈಗಳು ಶ್ರೀಮತಿ ಗಾಂಧಿಯವರ ಮಂತ್ರಿ ಮಂಡಲದಲ್ಲಿದ್ದರೆ. ಅಥವಾ ರಾಜ್ಯಗಳ ಮುಖ್ಯ ಮಂತ್ರಿಗಳಾದರೆ ರಾಮರಾಜ್ಯವನ್ನು ಇಲ್ಲೇ ಕಾಣಬಹುದು. ಇವರು ಕೈಗಾರಿಕಾ ಮಂತ್ರಿಯಾಗಿದ್ದ ಈ ಸಮಯವೇ ಸುವರ್ಣಯುಗ ಎನಿಸುವಂತಿದೆ."

ಟಿ. ಎ. ಪೈ ಅವರ ಆಪ್ತ ಕಾರ್ಯದರ್ಶಿ ಹನುಮಂತ ಚಿಟ್ಟಿ ಇವರ ಬಗ್ಗೆ ಅತೀವ ಗೌರವದಿಂದ ನುಡಿಯುತ್ತಾರೆ : "ಟಿ. ಎ. ಪೈ ಒಬ್ಬರು ವಿಚಾರವಾದಿ, ದೇವತಾ ಮನುಷ್ಯ. ಇವರ ಸೇವೆ ಮಾಡಿಕೊಂಡಿರುವುದೆಂದರೆ ಅದು ಈಶ ಸೇವೆಗೆ ಸಮ. ಇವರೊಂದಿಗೆ ಕಳೆಯುವ ಸುಯೋಗ ಒದಗಿಸಿಕೊಟ್ಟ ಭಗವಂತನಿಗೆ ಕೃತಜ್ಞತೆಗಳು."

ಒಳ್ಳೆಯ ಸಮಾಜಸೇವಕರಿಗೆ ಆಯುಷ್ಯ ಕಡಿಮೆ. ಟಿ. ಎ. ಪೈ ಅವರಿಗೂ ಕೂಡಾ. 1975 ರಲ್ಲಿ ಭಾರತದಲ್ಲಿ ತುರ್ತು ಪರಿಸ್ಥಿತಿ ಘೋಷಿಸಲ್ಪಟ್ಟಿತು. ಮತ್ತೊಮ್ಮೆ ಚುನಾವಣೆ. ಕೆಟ್ಟ ರಾಜಕೀಯ ಪೈ ಅವರನ್ನು ಮತ್ತೊಮ್ಮೆ ಅಧಿಕಾರಕ್ಕೇರಲು ಅವಕಾಶ ಕೊಡಲಿಲ್ಲ. "ಜನತೆಯ ಆದೇಶ ಅದೇ ಎಂದಾದಲ್ಲಿ ಹಾಗೆಯೇ ಆಗಲಿ. ನಾನು ಚುನಾವಣೆಯಲ್ಲಿ ವಿಜಯಿಯಾಗಿಯೇ ಸಮಾಜ ಸೇವೆ ಮಾಡಬೇಕೆಂದಿದೆಯೇ ? ಈ ಒಂದೆ ಮಾಡಿದಂತೆ ಮಾಡಿ ಇಲ್ಲದೆಯೇ ಜನಸೇವೆ ಮಾಡುವೆ." ನಿಜವಾದ ಸಮಾಜ ಸೇವಕರಿಗೆ ಅಧಿಕಾರ ಬೇಕೆ ? ಹೆಸರು ಬೇಕೆ ?

ಪಾಟೀಲ ಪುಟ್ಟಪ್ಪನವರು ಟಿ. ಎ. ಪೈ ಅವರನ್ನು ಸನಿಹದಿಂದ ಬಲ್ಲವರು. ಪೂರ್ವಾಗ್ರಹ ಪೀಡಿತರಾಗದೆ ಅವರು ಅಂದಿದ್ದಾರೆ : "ಟಿ. ಎ. ಪೈಗಳಿಗೆ ಜೀವ ವಿಮಾ ನಿಗಮದಲ್ಲಿ ಕೆಲಸ ಮಾಡುತ್ತಿದ್ದ ಆಸ್ಕರ್ ಫರ್ನಾಂಡಿಸರು ಕಣ್ಣಿಗೆ ಬಿದ್ದರು. ಆಸ್ಕರ್ ಫರ್ನಾಂಡಿಸರ ತಂದೆ ಅವರಿಗೆ ಶಿಕ್ಷಕರಾಗಿದ್ದರು. ಅವರಿಂದ ಪೈಗಳು ಬಹಳಷ್ಟು ಪ್ರಭಾವಿತರಾಗಿದ್ದರು. ತಮ್ಮನ್ನು ಓದಿಸಿದ ಗುರುವಿನ ಮಗ ಎನ್ನುವ ಕಾರಣದಿಂದ ಆಸ್ಕರರ ಮೇಲೆ ಅವರಿಗೆ ವಿಶೇಷ ಅಭಿಮಾನ ಇದ್ದಿತು. ಹೀಗಾಗಿ ಅವರು ಆಸ್ಕರರನ್ನು ತಮ್ಮ ಬಳಿಗೆ ಕರೆದುಕೊಂಡರು. ಪೈಗಳ ಶೀಘ್ರ ಲಿಪಿಕಾರರಾಗಿ ಆಸ್ಕರರು ಬಹುನಿಷ್ಠೆಯ ಸೇವೆಯನ್ನು ನೀಡಿದರು. ಪೈಗಳ ಸ್ವಭಾವ ವೈಚಿತ್ರ್ಯವೇನೆಂದರೆ ಅವರು ಯಾರನ್ನಾದರೂ ಮೆಚ್ಚಿದರೆ ಅವರಿಗೆ ಸಂಪೂರ್ಣ ಸೋತುಬಿಡುತ್ತಿದ್ದರು. ನೂರಕ್ಕೆ ನೂರಹತ್ತರಷ್ಟು ನಂಬಿಬಿಡುತ್ತಿದ್ದರು. ಅಂಥ ನಂಬಿಕೆಗೆ ಪಾತ್ರರಾದವರಲ್ಲಿ ಆಸ್ಕರರು ಕೂಡಾ ಒಬ್ಬರು.

ಆದರೆ ಅವರು ಮುಂದೆ ಪೈಗಳ ವಿರುದ್ಧ ಚುನಾವಣೆಗೆ ಸ್ಪರ್ಧಿಸಿದರು. ಲೋಕ ಸಭೆಯ ಸದಸ್ಯರಾದರು. ಆದರೂ ಅವರು ಪೈಗಳಿಂದ ಬೆಳೆದವರೆನ್ನುವುದು ಸುಳ್ಳಲ್ಲ. "............ಪೈಗಳು ಮನುಷ್ಯರನ್ನಾಗಿ ಮಾಡಿದ ಜನರ ಸಂಖ್ಯೆಗೆ ಮಿತಿ ಎನ್ನುವುದೇ ಇಲ್ಲ."[67]

ಚುನಾವಣಾ ಕಣ ಪೈಯವರಿಗೆ ಸೋಲನ್ನು ತಂದುಕೊಟ್ಟಿತ್ತು. ಮಣಿಪಾಲದಲ್ಲಿ ಸ್ಥಾಪಿಸಿದ 'ಕೆನರಾ ಮಿಲ್ಕ್ ಕೋ-ಆಪರೇಟಿವ್ ಯೂನಿಯನ್' ಆದಾಗಲೇ ಪೈಯವರ ಗಮನ ಸೆಳೆದಿತ್ತು. ಪೈ ಅವರು ಅದರಲ್ಲಿ ಸೇರಿದರು. ಜನತಾ ಸೇವೆಯೇ ಜನಾರ್ದನನ ಸೇವೆ ಅದವರಿಗೆ ಎಲ್ಲಾದರೇನು ? "ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಾಲು ಜೇನುಗಳ ಹೊಳೆ ಹರಿಯಬೇಕು. ಪ್ರತಿಯೊಂದು ಮನೆಯಲ್ಲೂ ಹಾಲು ಕರೆಯುವ ಹಸು, ಪ್ರತಿ ಮನೆಗೂ ಒಂದು ಬಾವಿ, ಆ ಬಾವಿಗೊಂದು ಪಂಪುಸೆಟ್ಟು, ಇರಲೊಂದು ಸೂರು. ಜೀವನಕ್ಕೊಂದು ಉದ್ಯೋಗ ಇವೆಲ್ಲ ಇರಬೇಕು." ಸಮಾಜದ ಕೆಳಮಟ್ಟದ ಜೀವನ ನಡೆಸುವ ಜನರಿಗಾಗಿ ಮಿಡಿದ ಹೃದಯದ ಮಾತುಗಳಿವು. ರಾಮರಾಜ್ಯ ಕಾಣುವ ಕನಸು ಇವರದ್ದು.

ಟಿ. ಎ. ಪೈ ಅವರ ಅಹಿತಕರ ದಾಂಪತ್ಯ ಜೀವನವೂ ಅವರಿಗೆ ಸಮಾಜ ಸೇವೆಯತ್ತ ಪ್ರೇರೇಪಿಸುತ್ತಿದ್ದವು. ಇವರ ಧರ್ಮಪತ್ನಿ ಪ್ರೇಮಾಳೊಂದಿಗೆ ಇವರ ದಾಂಪತ್ಯ ಜೀವನ ಸುಖಮಯವಾಗಿರಲಿಲ್ಲ. ಮನೆಯಲ್ಲಿನ ಈ ಅಸುಖದಿಂದ ಮುಕ್ತಿ ಪಡೆಯಲು, ಹತ್ತಿಕ್ಕಿದ ಭಾವನೆಗಳಿಂದ ಬಿಡುಗಡೆ ಹೊಂದಲು ಸಮಾಜದ ಸೇವೆಗೇ ತಮ್ಮ ಜೀವನವನ್ನು ಅವರು ಮುಡಿಪಾಗಿಟ್ಟರು. ಸಂತತಿಯೂ ಇರಲಿಲ್ಲ. ಇಪ್ಪತ್ತು ಮೂರು ವರುಷಗಳ ದಾಂಪತ್ಯ ಜೀವನಕ್ಕೆ ಇತಿಶ್ರೀಯನ್ನು ಕೊನೆಗೂ ಹಾಡಿದರು. ಶ್ರೀಮತಿ ವಸಂತಿ, ಟಿ. ಎ. ಪೈ ಅವರ ಜೀವನವನ್ನು ಪ್ರವೇಶಿಸಿದ್ದು 1972ರಲ್ಲಿ. ಇವರು ಮಂಜೇಶ್ವರದವರು. ಮುಂಬೈಯಲ್ಲಿ ಇಂಟೀರಿಯರ್ ಡೆಕೊರೇಟರ್ ಆಗಿದ್ದರು. ಮಣಿಪಾಲದ ವ್ಯಾಲಿವ್ಯೂ 'ಹೆಲ್ತ್‌ಕ್ಲಬ್'ನ ಒಳಾಂಗಣ ವಿನ್ಯಾಸ ಮಾಡಿದ್ದು ಶ್ರೀಮತಿ ವಸಂತಿಪೈ ಅವರೇ. ಪೈ ಅವರ ಜೀವನದಲ್ಲಿ ಶ್ರೀಮತಿ ವಸಂತಿ ಯವರ ಪಾತ್ರ ಅಪಾರ. ರಾಜಕೀಯ ಜೀವನದುದ್ದಕ್ಕೂ ಪೈಯವರಿಗೆ ಬೆಂಗಾವಲಾಗಿ ನಿಂತು ದೇಶಸೇವೆಗೈದ ಕೀರ್ತಿ ಇವರಿಗೂ ಸಲ್ಲಬೇಕು. ಶ್ರೀಮತಿ ವಸಂತಿ ಪೈ ಭಾರತೀಯ ಮಾನಸಿಕ ಅಸ್ವಸ್ಥ ಮಕ್ಕಳ ಸಂಸ್ಥೆಗೆ ಅಧ್ಯಕ್ಷೆಯಾಗಿದ್ದಾರೆ. ಪ್ರಕೃತ ಮಣಿಪಾಲದಲ್ಲಿ ಟಿ. ಎ. ಪೈ ಅವರ ವಿಶಾಲ ಭವನದಲ್ಲಿ ಒಬ್ಬಂಟಿಯಾಗಿ ಇರುವ ಇವರು ಮುಂದೆ ತಮ್ಮ ಸದನವನ್ನು ಪ್ರದರ್ಶನಾಲಯವನ್ನಾಗಿ ಮಾಡುವ ಅಪೇಕ್ಷೆ ಹೊಂದಿದ್ದಾರೆ. ಪತಿಗಿದ್ದ 'ಶ್ರೀ ಗಣೇಶ ವಿಗ್ರಹ ಸಂಗ್ರಹ'ದ ಹವ್ಯಾಸವನ್ನು ಇವರೂ ಮುಂದುವರಿಸುತ್ತಿದ್ದಾರೆ. ನಿವಾಸದ ಒಂದು ಕೋಣೆಯನ್ನು ಅದಕ್ಕಾಗಿಯೇ

ಮೀಸಲಿಟ್ಟು ಸುಮಾರು ಆರುನೂರಕ್ಕೂ ಮೀರಿದ ವಿವಿಧ ಭಂಗಿಯ ಗಣೇಶ ವಿಗ್ರಹ ಗಳನ್ನು ನೋಡುವುದೇ ಕಣ್ಣಿಗೊಂದು ಹಬ್ಬ. ಶ್ರೀಮತಿ ವಸಂತ ಪೈ ವ್ಯವಹಾರದಲ್ಲಿ ನುರಿತ ಜಾಣೆ, ವಿನಯಿ, ಗಂಭೀರೆ, ಸಮಾಜ ಸುಧಾರಕಿ, ಶ್ವೇತವಸನಧಾರಿಣಿ ಮಹತ್ವಾಕಾಂಕ್ಷಿ. ಅವರು ತಮ್ಮ ಗುರಿ ಮುಟ್ಟುವವರೇ.

ಟಿ. ಎ. ಪೈ ಅವರು ತಮ್ಮ ಉಳಿದ ಜೀವನವನ್ನು ಯುವಜನಾಂಗದ ಸಮಸ್ಯಾ ಪರಿಹಾರಕ್ಕೆ, ನಿರುದ್ಯೋಗ ಸಮಸ್ಯೆಗೆ. ಹಾಗೂ ಮಾನಸಿಕ ಅಸ್ವಸ್ಥರಿ ಗಾಗಿಯೇ ಮೀಸಲಿಟ್ಟರು. ದೇಶದ ಹಿತಾಸಕ್ತಿಯೇ ಅವರ ಉಳಿದ ಬದುಕಿನ ಆಶಾಕಿರಣ. 1981ರಲ್ಲಿ ತಮ್ಮ ದಿನಚರಿಯಲ್ಲಿ ಅವರು ಬರೆದಿಟ್ಟ ಸಾಲುಗಳು ಅವರ ವ್ಯಕ್ತಿತ್ವದ ಆಳವನ್ನು ಸ್ಫುಟವಾಗಿ ತೋರಿಸುತ್ತವೆ.[68]

ಜನತೆಗಾಗಿ ಮಿಡಿಯುವ ಮನ ಇವರದ್ದು. ಭಾವುಕ, ಆತ್ಮೀಯ ಹಾಗೂ ನೆರವು ಕೇಳಿ ಬಂದವರಿಗೆ ಸದಾ ಚಾಚಿರುವ ಸಹಾಯ ಹಸ್ತ. ಅದಕ್ಕೊಂದು ಉದಾಹರಣೆ : ಇವರ ಅಧಿಕಾರಾವಧಿಯಲ್ಲೇ ಇವರ ಮಾಜೀ ಗುರುಗಳೊಬ್ಬರ ಆರ್ಥಿಕಸ್ಥಿತಿ ತೀರಾ ದಾರುಣವಾಗಿತ್ತು. ಇದನ್ನು ಯಾರಿಂದಲೊ ಅರಿತ ಪೈ ಅವರು ಅವರಿಗೆ ಪಿಂಚಣಿ ವ್ಯವಸ್ಥೆಯನ್ನು ಮಾಡಿಕೊಟ್ಟದ್ದು ಮಾತ್ರವಲ್ಲ ಮುಂದೆ ಅದೇ ಪಿಂಚಣಿ ಆ ಕುಟುಂಬದ ಯಜಮಾನನನ್ನು ಕಳೆದುಕೊಂಡ ಸಂಸಾರಕ್ಕೆ ಆಧಾರಸ್ತಂಭ ವಾಯಿತು ಕೂಡಾ. ನೆರೆ ಹಾವಳಿಗೆ ತುತ್ತಾದ ಕರ್ನಾಟಕ ಆಂಧ್ರಪ್ರದೇಶಗಳ ನೆರೆ ಪೀಡಿತರಿಗೆ ಇವರು ತಮ್ಮ ಇಡೀ ವರುಷದ ಸಂಬಳವನ್ನು ಧಾರೆ ಎರೆದದ್ದು ಇವರ ಮಾನವೀಯತೆಗೆ ಮತ್ತೊಂದು ಸಾಕ್ಷಿ.

ಐವತ್ತನಾಲ್ಕರ ಹರಯದಲ್ಲಿಯೇ ಈ ಧೀಮಂತ ಶಕ್ತಿಯನ್ನು ಕಳೆದುಕೊಂಡ ನಾವು ನಿರ್ಭಾಗ್ಯರಲ್ಲದೆ ಮತ್ತೇನು ?



## ರಂಜಾಳ ಗೋಪಾಲಶೆಣೈ

ಮಾನವನ ಶ್ರೇಯೋನ್ನತಿ ಇರುವುದೇ ಕಲೆಯಲ್ಲಿ. ಇದು ಶಿಲ್ಪವಾಗಿರಬಹುದು, ಚಿತ್ರವಾಗಿರಬಹುದು, ಯಾವುದೇ ರೀತಿಯ ಆಂತರಿಕ ಭಾವನೆಗಳ ಆವಿರ್ಭಾವವಾಗಿರಬಹುದು. ಇಲ್ಲಿ ಮುಖ್ಯವಾಗಿ ಲಭ್ಯವಾಗಬೇಕಾದ್ದು ಹೃದಯ ಸೂರೆಗೊಳ್ಳುವಂತಹ ಕಲಾತ್ಮಕತೆ, ಹೃದಯಂಗಮತೆ. ಪ್ರಕೃತಿಯ ಮಡಿಲಲ್ಲಿ ಹಾಸುಹೊಕ್ಕಾಗಿರುವ ಶಿಲೆಯಲ್ಲಿ ತನ್ನ ಅಮೂರ್ತ ಭಾವನೆಗಳಿಗೆ ಮೂರ್ತರೂಪವನ್ನಿಡುವ, ಶಿಲೆಯೊಂದು ಕಲೆಯಾಗಿ ಆವಿರ್ಭವಿಸುವ ಈ ಕಲಾಪವಾಡ ದೈವ ಸದೃಶ. ಪ್ರಕೃತಿಯೊಂದಿಗೆ ಮಧುರ ಬಾಂಧವ್ಯ ಕಲ್ಲಲ್ಲಿ ಉಸಿರು ತುಂಬಿಸುವ, ಜೀವ ಹರಿಸುವ ಬ್ರಹ್ಮಸನ್ನಾಹ. ಇಂತಹ ಅದ್ವಿತೀಯ ಕಲಾಸೃಷ್ಟಿಗೆ ತಮ್ಮನ್ನು ತಾವೇ ಮುಡಿಪಾಗಿಟ್ಟವರು ಕಾರ್ಕಳದ ರಂಜಾಳ ಗೋಪಾಲಶೆಣೈ. 'ಶಿಲ್ಪಿ ಗೋಪಾಲ' ಎಂದೇ ಖ್ಯಾತಿ ಇವರನ್ನು ಹಿಂಬಾಲಿಸಿತು.

ಶಿಲ್ಪಿ ಗೋಪಾಲರ ಬಗ್ಗೆ ಹೇಳಬೇಕಾದಲ್ಲಿ ಅವರ ಪೂರ್ವಜರ ಒಂದೆರಡು ತಲೆಮಾರುಗಳನ್ನು ಹೇಳಲೇಬೇಕಾದ್ದು ಅನಿವಾರ್ಯ. ದಿ. ರಂಜಾಳ ಜನಾರ್ದನ ಶೆಣೈಯವರು ಕಾಶೀಮಠಾಧೀಶ ಪೂಜ್ಯ ಶ್ರೀಮದ್ ಭುವನೇಂದ್ರ ತೀರ್ಥಯತಿವರೇಣ್ಯರ ಪರಮ ಭಕ್ತರು. ಎಂಟು ವರ್ಷದವನಿರುವಾಗಲೇ ತಾಯಿ–ತಂದೆಯರನ್ನು ಕಳಕೊಂಡು ತಬ್ಬಲಿಯಾಗಿ ಸ್ವಾಮಿಯ ಮಠ ಸೇರಿ ಅನಾಥ ಬಾಲಕನೊಬ್ಬನಾಗಿ ಕಾಲ ಕಳೆಯುತ್ತಿದ್ದ. ವಿದ್ಯಾಭ್ಯಾಸ ಮೊದಲೇ ಇರಲಿಲ್ಲ. ಭುವನೇಂದ್ರ ಸ್ವಾಮಿಗಳ ಪದತಲದಲ್ಲಿ ಭಕ್ತಿಯಿಂದ ಸೇವಾಕಾರ್ಯಗೈದು ತನ್ನ ಒಂಟಿ ಜೀವವನ್ನು ಪೊರೆಯುತ್ತಿದ್ದ ಈ ಜನಾರ್ದನನಲ್ಲಿ ಏನೋ ವಿಶೇಷತೆ ಇರುವಂತೆ ಸ್ವಾಮೀಜಿಯವರಿಗೆ ಗೋಚರಿಸಿತು. ತಮ್ಮೊಂದಿಗೆ ಊರೂರು ಸುತ್ತಿ ದಿನ ಕಳೆಯುವ ಈ ಯುವಕನನ್ನು ವಿವಾಹ ಬಂಧನಕ್ಕೊಳಪಡಿಸಿ ಗೃಹಸ್ಥಾಶ್ರಮ ಧರ್ಮ ಸ್ವೀಕರಿಸುವಂತೆ ಸ್ವಾಮೀಜಿಯವರು ಈತನನ್ನು ಒಲಿಸಿದರು. ಹುಟ್ಟಿನಿಂದಲೇ ರಕ್ತದಲ್ಲಿ ಹರಿದು ಬಂದ ದೈವಭಕ್ತಿ, ಸ್ವಾಮಿನಿಷ್ಠೆ. ಜನಾರ್ಧನ ಶೆಣೈಗಳು ವಿವಾಹಿತರಾದರು ಮೂವತ್ತರ ಹರಯದಲ್ಲಿ. 'ನಿನಗೆ ಸಂಸಾರದಲ್ಲೇ ಸಿದ್ಧಿ' ಎಂದು ಸ್ವಾಮಿಗಳು ನುಡಿದಿದ್ದರೂ ಈ ವ್ಯಕ್ತಿಯಲ್ಲಿ ಸುಪ್ತವಾಗಿದ್ದ ಕಲೆಯೊಂದು ಬೆಳಕಿಗೆ ಬರಲು ಹಾತೊರೆಯುವುದು ಸ್ವಾಮಿಗಳಿಗೆ ಭಾಸವಾಗಿತ್ತು. ಕೊಚ್ಚಿನ್‌ನಲ್ಲಿ ತಮ್ಮ ಚಾತುರ್ಮಾಸದ ಕಾಲದಲ್ಲಿ ಈತನಿಂದ ಎರಡು ದ್ವಾರಪಾಲಕ ಪ್ರತಿಮೆಗಳನ್ನು ಸ್ವಾಮೀಜಿಯವರು ಮಾಡಿಸಿಯೇಬಿಟ್ಟರು. ಈತನಲ್ಲಿನ ಕಲೆಯನ್ನು ಹೊರಗೆಡಹಿಯೇಬಿಟ್ಟರು. ಇದೇ ಮುಂದೆ ರಂಜಾಳ ಶೆಣೈ ಕುಟುಂಬದ

ಕುಲಕಸುಬಾಯಿತು. ರಕ್ತದಲ್ಲೇ ಹರಿದು ಬಂದಿದ್ದ ಕಲಾನೈಪುಣ್ಯತೆ ಸಾಕ್ಷಾತ್ಕಾರ ಪಡೆಯಲು ಪ್ರಾರಂಭಿಸಿತು. ಪೂಜ್ಯ ಗುರುವರ್ಯರು ಶಿಲ್ಪಕಲೆಯನ್ನು ಉಪದೇಶಿಸಿ ಈ ಕಲೆ ವಂಶಪಾರಂಪರ್ಯವಾಗಿ ಈ ಕುಟುಂಬದಲ್ಲಿ ನೆಲೆಸುವಂತೆ ಆಶೀರ್ವದಿಸಿದರು. ಇವರ ಪ್ರಪ್ರಥಮ ಕೃತಿ ಸುಮಾರು 1870 ನೆಯ ಇಸವಿಯಲ್ಲಿ ನಿರ್ಮಿತವಾದ ಜಯ ವಿಜಯ ವಿಗ್ರಹಗಳು ಕೇರಳದ ಕೊಚ್ಚಿಯ ಶ್ರೀ ವೆಂಕಟಪತಿ ದೇವಾಲಯದಲ್ಲಿ ಈಗಲೂ ವಿರಾಜಿಸುತ್ತಿವೆ. ಮುಂದೆ ಇವರು ಹಲವು ವಿಗ್ರಹಗಳನ್ನು ಶಿಲೆಯಲ್ಲಿ ಕೆತ್ತಿ ಕಲಾದೇವಿಯ ಹಾಗೂ ಗುರುವರ್ಯರ ಅನುಗ್ರಹಕ್ಕೆ ಪಾತ್ರರಾದರು.

ಮಠಾಧಿಪತಿಗಳ ಪದತಲದಲ್ಲಿದ್ದುಕೊಂಡೇ ತಮ್ಮ ಕೊನೆಯುಸಿರೆಳೆದರು ಜನಾರ್ದನ ಶೆಣೈ. ಮಗ ರಂಜಾಳ ಗೋಪಾಲ ಶೆಣೈ ಹದಿನೆಂಟು ವರ್ಷದವನಿರುವಾಗ ಜನಾರ್ದನರು ತೀರಿಕೊಂಡರು. ರಂಜಾಳ ಗೋಪಾಲರು ಹುಟ್ಟಿದ್ದು ಆರು ಜನವರಿ 1887ರಲ್ಲಿ, ಇತಿಹಾಸ ಪ್ರಸಿದ್ಧ ಕಾರ್ಕಳ ನಗರಿಯಲ್ಲಿ. ಶಿಕ್ಷಣಕ್ಕೆ ಅಷ್ಟೊಂದು ಪ್ರಾಮುಖ್ಯತೆ ಇನ್ನೂ ಬಂದಿಲ್ಲದ ಕಾಲವದು. ಗೋಪಾಲ ಶೆಣೈ ಕಲಿತದ್ದು ಕೇವಲ ಮೂರನೇ ತರಗತಿವರೆಗೆ. ತನ್ನ ಬಾಲ್ಯದಲ್ಲಿ ಸಾಮಾನ್ಯ ಶಿಕ್ಷಣವನ್ನು ಕಾರ್ಕಳದಲ್ಲೇ ಪಡೆದು ಸಂಸ್ಕೃತ ಭಾಷಾಭ್ಯಾಸವನ್ನು ಮಾಡಿದರು. ಸ್ವತಃ ತಂದೆ ಜನಾರ್ದನ ಶೆಣೈ ಮಗನಿಗೆ ಚಿತ್ರಕಲೆ ಮತ್ತು ಶಿಲ್ಪಕಲೆಯಲ್ಲಿ ತರಬೇತಿ ನೀಡಿದರು. ಬಾಲ್ಯದಲ್ಲೇ ಕುಶಲ ಕಲೆಗಳಲ್ಲಿ ರಂಜಾಳ ಗೋಪಾಲ ಶೆಣೈಯವರಿಗೆ ಸಹಜವಾದ ಅಮಿತ ಆಸಕ್ತಿ ಇದ್ದಿತು. ವಿದ್ಯಾಭ್ಯಾಸಕ್ಕೆ ಇತಿಶ್ರೀ ಹಾಡಿದ ಗೋಪಾಲ ಶೆಣೈಯವರು ದೇವಾಲಯದಲ್ಲಿ ಹೂ ಕಟ್ಟಲು ಹಾಗೂ ಇನ್ನಿತರ ಸಣ್ಣಪುಟ್ಟ ಕೆಲಸಗಳಿಗೆ ಸಹಾಯಕರಾಗಿದ್ದರು. ಭುವನೇಂದ್ರರ ಶಿಷ್ಯ ವರದೇಂದ್ರ ತೀರ್ಥರು ಮಠಾಧಿಪತಿಗಳಾಗಿದ್ದ ಕಾಲ ಅದು. ಅವರಲ್ಲಿಗೆ ಹೋಗಿ ಗೋಪಾಲ ಶೆಣೈಯವರು ತಮ್ಮ ಭವಿಷ್ಯಕ್ಕೊಂದು ದಾರಿ ತೋರಿಸುವಂತೆ ಕೇಳಿಕೊಂಡರು. ಜೀವನೋಪಾಯಕ್ಕೆ ಕೆಲಸ ಬೇಕು ಅವಶ್ಯ ತಾನೇ? ಆ ದೇವಾಲಯದವರೇ ನಡೆಸುತ್ತಿದ್ದ ಶಾಲೆಯಲ್ಲಿ ಚಿತ್ರಕಲಾ ಅಧ್ಯಾಪಕರಾಗಿ ಕೆಲಸಕ್ಕೆ ಸೇರಿದರು— ತಿಂಗಳಿಗೆ ಮೂರು ರೂಪಾಯಿ ಸಂಬಳದಲ್ಲಿ. ಮುಂದೆ ಕೆಲವೇ ವರ್ಷಗಳಲ್ಲಿ ಈ ವೃತ್ತಿಯನ್ನು ತ್ಯಜಿಸಿ ಶಿಲ್ಪಕಲೆಯನ್ನೆ ಆಶ್ರಯಿಸಿ ಕಲಾದೇವಿಗೆ ಸೇವೆಯನ್ನು ಸಲ್ಲಿಸಲು ನಿರ್ಧರಿಸಿದರು. ಪೂಜ್ಯ ಗುರುವರ್ಯರಿಂದ ಅನುಗ್ರಹಿತರಾದ ಶ್ರೀಮದ್ ಭುವನೇಂದ್ರ ಶಿಲ್ಪಶಾಲೆಯ ಆಶ್ರಯದಲ್ಲಿ ಶಿಲೆ,ಲೋಹ, ಹಸ್ತಿದಂತ, ಆವೆಮಣ್ಣು ಇತ್ಯಾದಿ ವಸ್ತುಗಳಲ್ಲಿ ಕಲಾಕೃತಿಗಳನ್ನು ರಚಿಸುತ್ತಿದ್ದರು. ತೆಂಗಿನ ಚಿಪ್ಪಿನಲ್ಲಿ ಇವರು ಕೊರೆದು ಮಾಡಿದ ಕಸೂತಿ ಕೆಲಸಗಳು ವಿಶಿಷ್ಟ ರೀತಿಯವು. ... ದ ತನನ್ನು ಕೆತ್ತಿ ಮಾಡಿದ ನಾಜೂಕು ದೇವಿ ದೇವರ ಚಿತ್ರಗಳು ಬೆರಗು ... ತಿವೆ.

ಕಾರ್ಕಳದ ಶ್ರೀ ವೆಂಕಟರಮಣ ದೇವಾಲಯದ ಗರುಡ ಮಂಟಪದಲ್ಲಿ ಸ್ಥಾಪಿತವಾದ ನಾಲ್ಕು ಶಿಲಾಸ್ತಂಭಗಳು ವಿಶೇಷವಾದ ಕೆತ್ತನೆಗಳಿಂದ ಕೂಡಿವೆ. ಇವು ಗಳ ರಚನೆಗೆ (1936–42) ಆರು ವರ್ಷಗಳ ಕಾಲ ತಗಲಿದೆ ಮಾತ್ರವಲ್ಲ ಈ ಕಂಬ ಗಳ ಮೇಲೆ ಕೆತ್ತಿದ ಹಲ್ಲಿ, ಇರುವೆ, ಕಪ್ಪೆ, ಹಕ್ಕಿಗಳು ನಮ್ಮ ಕಲ್ಪನೆಗೆ ಗರಿ ಕೊಡು ವಂತಿದೆ. ಒಂದರೊಳಗೊಂದು ಹಾಸುಹೊಕ್ಕಾಗಿರುವ ಸರಪಳಿಗಳು ಶಿಲೆ ಹೌದೋ ಅಲ್ಲವೋ ಅನ್ನಿಸುವಷ್ಟು ಭ್ರಮೆ ಹುಟ್ಟಿಸುತ್ತವೆ. ನಾಲ್ಕು ದಿಕ್ಕುಗಳಿಗೆ ನಾಲ್ಕು ಸಂಕೇತವಾಗಿ ನಿಂತಿರುವ ಈ ಕಂಬ ಪ್ರವಾಸಿಗರ ಆಕರ್ಷಣೆಯ ಅತ್ಯದ್ಭುತ ವಸ್ತುವೂ ಹೌದು. ಎಲ್ಲಕ್ಕೂ ಮಿಗಿಲಾಗಿ ಈ ಕಂಬಗಳ ಮೇಲೆ ನಾರದ, ತುಂಬುರ, ಗರುಡ, ಅಶ್ವಿನಿ ದೇವತೆಗಳೆಲ್ಲ ರಕ್ಷೆಯಾಗಿ ನಿಂತಿದ್ದಾರೆ. ಈ ನಾಲ್ಕು ಕಂಬಗಳ ನಡುವೆ, ದೈವದ ಎದುರು ನಿಂತು ಶರಣು ಬಂದ ಭಕ್ತರ ಅಹವಾಲನ್ನು ದೇವರು ಪೂರೈಸುತ್ತಾನೆ ಎನ್ನು ವುದೂ ಈ ಕಂಬಕ್ಕೆ ಒದಗಿದ ಖ್ಯಾತಿಯ ಇನ್ನೊಂದು ಸ್ವರೂಪ ತೋರಿಸುತ್ತದೆ.

ಕಾಲಾಂತರದಲ್ಲಿ ರಂಜಾಳ ಗೋಪಾಲ ಶೆಣೈಯವರು–ಶಿಲ್ಪಿ ಗೋಪಾಲರೆಂದೇ ಪ್ರಸಿದ್ಧಿ ಪಡೆದರು. ತಮ್ಮ ಜೀವಮಾನದುದ್ದಕ್ಕೂ ಒಬ್ಬ ಸಾಮಾನ್ಯ ವ್ಯಕ್ತಿ ಸಾಧಿಸ ಲಾಗದೇ ಇದ್ದುದನ್ನು ಇವರು ಸಾಧಿಸಿದ್ದರು. ಆದರೆ ಆಶ್ಚರ್ಯವೆಂಬಂತೆ ಇವರಿಗೆ ತಮ್ಮ ಸಾಧನೆಗಳ ಅರಿವೇ ಇರಲಿಲ್ಲ. ಹಳ್ಳಿಯ ಸರಳ ಜೀವನ. ಬದುಕಲು ಕನಿಷ್ಠ ತಮವಾಗಿ ಉಪಯೋಗಿಸುವ ಅಶನ–ವಸನ–ವಸತಿ. ಬೇಕೆಂದಿದ್ದರೆ ಸುಖದ ಐಶಾರಾಮು ಬದು ಕನ್ನು ಬದುಕಬಹುದಾಗಿತ್ತು. ಇವರಿಗೆ ತಾವು ಮಾಡುವುದೆಲ್ಲ ದೈವ ಸಮರ್ಪಿತ ಎನ್ನುವ ಭಾವನೆ. ದೇವರಿಗಾಗಿಯೇ ಸಮಾಜಕ್ಕಾಗಿಯೇ ತಾನು ಮಾಡುವುದು ಇದರಲ್ಲಿ ತನ್ನ ಪಾಲು, ಸ್ಥಾನ ಏನೇನೂ ಇಲ್ಲ ಎನ್ನುವ ಸಮರ್ಪಣಾ ಮನೋಭಾವನೆ. ಧನ ಸಂಪಾದನೆಯೇ ಜೀವನದ ಉದ್ದೇಶವಾಗಿದ್ದರೆ ಅದಕ್ಕೊಂದು ದಾರಿ ಹುಡುಕ ಬಹುದು. 'ಶಿಲ್ಪಿ ಗೋಪಾಲ'ರಿಗೆ ಶಿಲೆಯ ಎದುರು ನಿಂತರೆ ತಾನೊಬ್ಬ ಕಲೋಪಾ ಸಕ ಶಿಲ್ಪಿ, ಇಹವೆಲ್ಲ ಕನಸಾಗುತ್ತಿತ್ತು. ಹೃಷಿಕೇಶದ ಡಿವೈನ್ ಲೈಫ್ ಸೊಸೈಟಿಯ ಪೂಜ್ಯ ಶ್ರೀ ಶಿವಾನಂದ ಸ್ವಾಮಿಗಳಿಗಾಗಿ ಸುಮಾರು ಮೂರು ಅಡಿ ಎತ್ತರದ ಕೃಷ್ಣ ಶಿಲೆಯ ಗೋಪಾಲಕೃಷ್ಣ ವಿಗ್ರಹ 1941–42ರಲ್ಲಿ ರಚಿಸಿಕೊಟ್ಟರು. ಕಾಲಾಂ ತರದಲ್ಲಿ ಶೆಣೈಯವರ ಕೃತಿಗಳು ಭಾರತದ ಹಲವು ಭಾಗಗಳಲ್ಲಿ ಕರ್ನಾಟಕ, ಮುಂಬೈ, ಗೋವಾ ಹೀಗೆ ಎಲ್ಲಾ ರಾಜ್ಯಗಳಲ್ಲಿ ಇವರು ಕೆತ್ತಿದ ವಿಗ್ರಹಗಳು ಆರಾಧನಾ ಮೂರ್ತಿಗಳಾಗಿವೆ–ಜನಾದರಣೀಯವಾಗಿವೆ. ಶೇಕ್ಸ್‌ಪಿಯರ್ ಮುಂತಾದ ಪ್ರಸಿದ್ಧ ವ್ಯಕ್ತಿಗಳ ಪ್ರತಿಮಾಕೃತಿ ಇಂಗ್ಲೆಂಡಿಗೂ ಹೋಗಿ ವಿದೇಶೀಯರ ಕಲೋಪಾಸ ನೆಗೆ ಸಾಕ್ಷಿಯಾಗಿದೆ ಮಂಗಳೂರಿನ ಕೆನರಾ ಕಾಲೇಜ್‌ನಲ್ಲಿನ ಶ್ರೀಕೃಷ್ಣ ವಿಗ್ರಹ, ಸುಕೃತೀಂದ್ರ ಸ್ವಾಮಿಗಳ ಎದೆಮಟ್ಟದ ಶಿಲ್ಪ ಕಲಾಕೃತಿ (bust) ಇವರ ಕೆಲವು ಕೃತಿ ಗಳು. ಪ್ರತಿಯೊಬ್ಬನೂ ತಾನು ಶಿಲೆಯಲ್ಲಿ ಕೆತ್ತುವ ಮೊದಲು ಕಾಗದದಲ್ಲಿ ವಿಗ್ರಹದ

ಪ್ರತಿರೂಪ ಬರೆಯಬೇಕಾಗುತ್ತದೆ. ಇಲ್ಲಿ ಆತ ಲೇಖನಿಯಲ್ಲಿ ಬರೆದ ಗೆರೆಗಳಿಗೆ ಯಲ್ಲಿ ರೂಪುಕೊಟ್ಟು ಜೀವ ಮೂಡಿಸಬೇಕಾಗುತ್ತದೆ. ಹಾಗಾಗಿ ಒಬ್ಬ ಶಿಲ್ಪಿ ತಾ ಚಿತ್ರಗಾರನಾಗಿರಬೇಕಾದ್ದೂ ಅನಿವಾರ್ಯ. ಶಿಲ್ಪಿ ಗೋಪಾಲರು ಇದಕ್ಕೆ ಅಪವಾ ವಾಗಿರಲಿಲ್ಲ. ಇವರು ತೈಲವರ್ಣದಲ್ಲಿ ರಚಿಸಿದ ಸಿದ್ಧಾರ್ಥನ ರಾಜ್ಯತ್ಯಾಗ, ಹರಿ ಕುಟುಂಬದ ಮದುವೆ-ಸಂಭ್ರಮ ಕೃತಿಗಳು ಉಲ್ಲೇಖನೀಯ.

ದಕ್ಷಿಣ ಭಾರತದ ಸುಪ್ರಸಿದ್ಧ ಶ್ರೀ ಕ್ಷೇತ್ರ ಧರ್ಮಸ್ಥಳ ಮತ್ತು ಉತ್ತ ಭಾರತದ ಜೈನನಗರವೆಂದು ಖ್ಯಾತಿವೆತ್ತ ಫಿರೋಜಾಬಾದಿನಲ್ಲಿ ಸ್ಥಾಪಿತವಾದ ಗೋ ಟೇಶ್ವರ ವಿಗ್ರಹಗಳು ಗುಣದಲ್ಲಿ ರೂಪದಲ್ಲಿ ಮಹತ್-ಬೃಹತ್ ಎನಿಸಿವೆ. ಶಿ ಗೋಪಾಲರ ಕೊಡುಗೆ ಇದು ಕಲಾಜಗತ್ತಿಗೆ. ಶ್ರವಣಬೆಳಗೊಳದ ಬಾಹು ಮಾತ್ರವೇ ಧೀಮಂತನಾಗಿದ್ದು ಮಳೆಗಾಳಿ ಬಿಸಿಲಿಗೆ ಮೈ ಒಡ್ಡಿ ನಿಂತಿದ್ದ ಮ ಪುರುಷ.

ಪುರಾಣದ ಉಲ್ಲೇಖ ಹೀಗಿದೆ : ಜೈನ ಮತದ ಸ್ಥಾಪಕ ಮಹಾವೀ ಈತನೊಬ್ಬ ರಾಜಕುವರ. ಜೈನಮತ ಪ್ರಬಲವಾಗಿದ್ದ ಕಾಲದ ಜೈನ ದೊರೆಯ ಇಬ್ಬರು ಸುಪುತ್ರರು ಬಾಹುಬಲಿ-ಭರತ. ತಂದೆಯ ಮರಣ ನಂತರ ಪಟ್ಟಕ್ಕೆ ವಾರಸುದಾರರಾಗುವ ಸಹಜ ಬಯಕೆಯಿಂದ ಅಣ್ಣ ತಮ್ಮಂದಿ ಕಲಹ ಪ್ರಾರಂಭವಾಗುತ್ತದೆ. ಹೀಗೆ ಹಲವು ಪ್ರಕಾರದ-ಮಲ್ಲಯುದ್ಧ, ದೃ ಯುದ್ಧ, ಜಲಯುದ್ಧಗಳಲ್ಲಿ ಅಣ್ಣ ತನ್ನ ತಮ್ಮ ಬಾಹುಬಲಿಗೆ ಸೋಲುತ್ತಾನೆ. ಕತೆಯ ವಿಶಿಷ್ಟತೆ ಇರುವುದೇ ಮುಂದಕ್ಕೆ. ಸೋತ ತಮ್ಮನಿಗೆ ಭ್ರಮನಿರಸನವಾ ತ್ತದೆ. ಐಹಿಕ ಸುಖಭೋಗಗಳು ಅಹಿತವೆನಿಸುತ್ತವೆ. ಅಣ್ಣನಿಗೇ ರಾಜ್ಯ-ಪ ಬಿಟ್ಟುಕೊಡುತ್ತಾನೆ. ತಮ್ಮನ ಹಿರಿಮೆಗೆ ಅಣ್ಣ ತಲೆಬಾಗುತ್ತಾನೆ, ಶರಣಾಗುತ್ತಾ ಅಣ್ಣನಿಗೇ ರಾಜ್ಯ ನೀಡಿದ ತಮ್ಮ ಜೈನ ಸನ್ಯಾಸಿಯಾಗುತ್ತಾನೆ. ಹೀಗೆ ರಾಜ್ಯ ತೊ ಬಾಹುಬಲಿ ಅರ್ಹಂತ್ಯಾ ಶ್ರವಣಬೆಳಗೊಳದಲ್ಲಿ ಯಾತ್ರಾರ್ಥಿಗಳಿಗೆ ಮೈಯೊಡ್ಡಿ ತ್ಯಾಗ ಬಲಿದಾನಗಳ ಜೀವನಕ್ಕೆ ಸಾಕ್ಷಿಯಾಗಿ ನಿಂತಿರುತ್ತಾನೆ.

ಈ ಬಾಹುಬಲಿಯ ಮಹಾಮಸ್ತಕಾಭಿಷೇಕವನ್ನು ಕಣ್ಣಾರೆ ಕಂಡ ಧರ್ ಸ್ಥಳದ ದಿವಂಗತ ಹೆಗ್ಗಡೆಯವರು ತಮ್ಮ ಊರಿನಲ್ಲೂ ಇಂತಹುದೇ ಒಂದು ವಿ ರೀತಿಯ ಕೆತ್ತನೆಯ ಗೊಮ್ಮಟ ವಿಗ್ರಹ ಬೇಕೆಂದು ನಿರ್ಧರಿಸುತ್ತಾರೆ. ಭಾರತದು ಗಲದೀವ ಚತುರ ಶಿಲ್ಪಿಗಳನ್ನು ಕರೆಯಿಸುತ್ತಾರೆ. ರಂಜಾಳ ಗೋಪಾಲ ಶೆಣೈ ಅ ಆಯ್ಕೆಯಾಗುತ್ತದೆ. ದಿ॥ ಹೆಗ್ಗಡೆಯವರಿಗೆ ಇಪ್ಪತ್ತು ಅಡಿಯ ಚಂದ್ರಕಾ

ಶಿಲೆಯಿಂದಲೇ ಪ್ರತಿಮೆ ರಚಿಸಬೇಕಾದ ಇಚ್ಛೆಯಿರುತ್ತದೆ. ಆದರೆ ದಕ್ಷಿಣ ಕನ್ನಡದ ವೈಪರಿತ್ಯದ ಹವಾಮಾನಗಳಿಗನುಕೂಲವಾಗಿ ಚಂದ್ರಕಾಂತ ಶಿಲೆಯ ಬಾಳಿಕೆಯನ್ನು ಮನಸ್ಸಿನಲ್ಲಿಟ್ಟು ಆ ಯೋಜನೆಯನ್ನು ಬಿಡಬೇಕಾಗುತ್ತದೆ. ಉತ್ತಮ ಮಟ್ಟದ ಶಿಲೆಯನ್ನು ಆರಿಸಿ ಗೊಮ್ಮಟ ಮೂರ್ತಿಯ ಕೆತ್ತನೆ ಪ್ರಾರಂಭವಾಗುತ್ತದೆ. ಧರ್ಮಸ್ಥಳದ ಈ ಗೊಮ್ಮಟ ವಿಗ್ರಹ ಪ್ರಾರಂಭ ಮಾಡುವಾಗ 'ಶಿಲ್ಪಿ ಗೋಪಾಲ'ರ ಪ್ರಾಯ ಕೇವಲ ಎಪ್ಪತ್ತಎರಡು ವರ್ಷಗಳು. ವಿಗ್ರಹ ಪೂರ್ಣಗೊಳ್ಳುವ ಮೊದಲು ತಾನು ಇಲ್ಲವಾಗಬಹುದೆಂಬ ಭೀತಿ ಬೇರೆ. ದೈವವಲ್ಲಿ– ಜಾತಕದಲ್ಲಿ ಅಮಿತ ವಿಶ್ವಾಸವಿದ್ದ ಶಿಲ್ಪಿ ಗೋಪಾಲರು ತಮ್ಮ ಜಾತಕವನ್ನು ತೋರಿಸಿಯೇ ತೋರಿಸಿದರು. ತಮ್ಮ ಯೋಗಬಲ ಅರಿತು ದೈವಕೃಪೆ ಮನಗಂಡು, ಎಪ್ಪತ್ತೆರಡರ ಇಳಿವಯಸ್ಸಿನಲ್ಲೂ ಕೆತ್ತನೆಯ ಕೆಲಸಕ್ಕೆ ಕೈ ಹಾಕಿದರು. ಹೀಗೆ ಚರಿತ್ರೆಯಲ್ಲೇ ದ್ವಿತೀಯ ಬಾರಿ ಕಾರ್ಕಳದ ಕರಿಕಲ್ಲು ಗೋಮಟನಾಗಿ ರಾರಾಜಿಸಿತು. 1967 ಅಕ್ಟೋಬರ್ ಹನ್ನೆರಡರಿಂದ 1973 ಮಾರ್ಚ್ ಇಪ್ಪತ್ತಏಳರವರೆಗೆ ಏಳು ವರ್ಷಗಳ ಸತತ ಪರಿಶ್ರಮ ಕಲ್ಲಿಗೊಂದು ದೈವತ್ವದ ಕಲ್ಪನೆ ಕೊಟ್ಟಿತು. ಬಿಂಬ ಮಾತ್ರ ಮೂವತ್ತೊಂಬತ್ತು ಅಡಿಗಳಿಗೂ ಎತ್ತರವಿದ್ದು ಬೃಹದತೆಯಲ್ಲಿ ಇದು ಎರಡನೆಯ ಸ್ಥಾನವನ್ನು ಪಡೆದಿದೆ. ಮೊದಲ ಸ್ಥಾನ ಶ್ರವಣಬೆಳಗೊಳದ ಬಾಹುಬಲಿ. ಧರ್ಮಸ್ಥಳದಲ್ಲಿ ಗೋಮಟ ಮೂರ್ತಿ ನಿರ್ಮಿಸಿದ ಶಿಲಾಕಲ್ಲು ಐವತ್ತಎರಡು ಅಡಿ ಉದ್ದದ್ದು. ಬಿಂಬ ಮೂವತ್ತ ಒಂಬತ್ತು ಅಡಿಗಳಷ್ಟು. ಉಳಿದ ಹದಿಮೂರು ಅಡಿ ಪೀಠ. ಶ್ರವಣಬೆಳಗೊಳದ ಗೋಮಟ ವಿಗ್ರಹ ಶಿಲೆ ಇದ್ದಲ್ಲೇ ಕೆತ್ತಿದ್ದು. ಬೃಹತ್ ಏಕಶಿಲೆ ಅದು. ಧರ್ಮಸ್ಥಳದ್ದು ರವಾನಿಸಲ್ಪಟ್ಟದ್ದು. ಹಾಗಾಗಿ ಕೆತ್ತಲು ತಗಲಿದ ಖರ್ಚಿಗಿಂತ ರವಾನಿಸಲು ತಗಲಿದ ಖರ್ಚು ಅಧಿಕವಾಗಿತ್ತು.

ಧರ್ಮಸ್ಥಳದ ಗೋಮಟ ಮೂರ್ತಿಯ ಪದತಲದಲ್ಲಿ ಎರಡು ಕೆತ್ತಿದ ಸಿಂಹಗಳು ದಿಕ್ ರಕ್ಷಕರಾಗಿ ನಿಂತಿವೆ. ಬೆರಗುಗೊಳಿಸುವ ವಿಚಾರವೆಂದರೆ ಈ ಸಿಂಹಗಳ ತೆರೆದ ಬಾಯಿಯಲ್ಲಿ ಗುಂಡನೆಯ ಶಿಲೆಯ ಚೆಂಡೊಂದು ಚಲಿಸುವಂತಿದೆ. ಇದನ್ನು ಬಾಯಿಯಿಂದ ಹೊರಕ್ಕೆ ತೆಗೆಯುವುದು, ಒಳಕ್ಕೆ ನೂಕುವುದು ಅಸಾಧ್ಯ. ಹಲ್ಲುಗಳ ನಡುವೆ ಭದ್ರಸ್ಥಾನ ಪಡೆದಿದ್ದ ಈ ಗುಂಡುಕಲ್ಲು ಸಿಂಹಗಳ ಬಾಯಿಯ ಒಳಗೇ ಕೆತ್ತಲ್ಪಟ್ಟು ಶಿಲ್ಪಿಯ ಶಿಲ್ಪ ಚಮತ್ಕಾರಕ್ಕೆ ಸಾಕ್ಷಿಯಾಗಿದೆ.

1976ರಲ್ಲಿ ಆಗ್ರಾದ ಫಿರೋಜಾಬಾದ್‌ನಲ್ಲಿ ಮಗದೊಂದು ಗೊಮ್ಮಟ ಮೂರ್ತಿಯ ಪ್ರತಿಷ್ಠಾಪನೆ. ಇದು ಮೂವತ್ತೈದು ಅಡಿಗಳ ಏಕಶಿಲೆಯ ಮೂರ್ತಿ. ಇದನ್ನು ಕಾರ್ಕಳದಲ್ಲೇ ಕೆತ್ತಿ ಆಗ್ರಾಕ್ಕೆ ಸಾಗಿಸಿದರು. ಇದರ ರಚನೆಗೆ ತಗಲಿದ ಸಮಯ ಹನ್ನೆರಡು ಸೆಪ್ಟೆಂಬರ್ 1973 ರಿಂದ ಇಪ್ಪತ್ನಾರು ಫೆಬ್ರವರಿ 1975.

ಹಾಸುಗಲ್ಲುಗಳು ನೆಲದಲ್ಲೇ ಇದ್ದಲ್ಲಿಯೇ ಕೆತ್ತುವಂತಹವುಗಳು. ಧರ್ಮಸ್ಥಳದ್ದೂ, ಫಿರೋಜಾಬಾದಿನದೂ ಇದೇ ಜಾತಿಗೆ ಸೇರಿದ ಶಿಲೆಗಳು. ಈ ಎರಡು ಗೋಮಟ ವಿಗ್ರಹ ಪ್ರತಿಷ್ಠಾಪನೆಯ ಬಳಿಕ ಶಿಲ್ಪಿ ಗೋಪಾಲರಿಗೆ ಮಗದೊಂದು ಬೃಹತ್ ವಿಗ್ರಹ ತಯಾರಿಕೆಗೆ ಆಮಂತ್ರಣ ಬಂದಿತು.

ಜಪಾನಿನ ಸುಮೋಸವಾ ದೇವಾಲಯದ ಅಧಿಕಾರಿಗಳು ತಮ್ಮ ಅರ್ಚನೆಗಾಗಿ ಸುಮಾರು ಎಪ್ಪತ್ತು ಅಡಿಗಳಷ್ಟು ಎತ್ತರದ ಬುದ್ಧ (ಅವಲೋಕೇಶ್ವರ) ಮೂರ್ತಿಯನ್ನು ಶಿಲೆಯಲ್ಲಿ ನಿರ್ಮಿಸಿಕೊಡಬೇಕೆಂದು ಶಿಲ್ಪಿ ಗೋಪಾಲರಿಗೆ ತಮ್ಮ ಕಳಕಳಿಯ ವಿನಂತಿ ಸೂಚಿಸಿದ್ದರು. ಹೀಗೆ 1981ರಲ್ಲಿ ಅರುವತ್ತಾರು ಅಡಿ ಉದ್ದದ ಮುಪತ್ತೇಳು ತುಂಡು ಶಿಲೆಗಳಲ್ಲಿ ಮಾಡಿದ, ನಡುವೆ ಜೋಡಣೆಗೆಂದು ಉಕ್ಕಿನ ತಂತಿಗಳನ್ನು ಅಳವಡಿಸಿಕೊಂಡಿದ್ದ ಅವಲೋಕೇಶ್ವರ ಮೂರ್ತಿ ರೂಪು ತಳೆಯಿತು. ಇದೂ ಒಂದು ಹಾಸುಗಲ್ಲಿನ ವಿಗ್ರಹ. ಜಪಾನ್‌ವರೆಗಿನ ಪಯಣ ಸಾಗಾಣಿಕೆಗೆ ಸುಲಭವಾಗಲೆಂದು ತುಂಡು ತುಂಡಾಗಿಯೇ ಈ ಅವಲೋಕೇಶ್ವರ ವಿಗ್ರಹ ರಚಿಸಿದ್ದು. ಕಾರ್ಕಳದಿಂದ ಪಣಂಬೂರು ಬಂದರವರೆಗೆ ಸಾಗಾಣಿಕೆ, ಪ್ಯಾಕೆಜಿಂಗ್, ಫಾರ್ವರ್ಡಿಂಗ್ ಚಾರ್ಜ್ ಎಂದು ಹದಿಮೂರು ಲಕ್ಷಕ್ಕೂ ಮೀರಿ ಖರ್ಚಾಯಿತು. ಇದರ ಜೋಡಣೆಗೆಂದೇ ಶಿಲ್ಪಿ ಗೋಪಾಲರು ತಮ್ಮ ಮೊಮ್ಮಗ ರಾಧಾಮಾಧವ ಶೆಣೈಯನ್ನು ಜಪಾನಿಗೂ ಕಳುಹಿಸಿಕೊಟ್ಟರು. ಅಲ್ಲಿ ನಲವತ್ತೈದು ದಿನಗಳಷ್ಟು ಕಾಲ ವಾಸ್ತವ್ಯ ಹೂಡಿದ ಯುವಕ ಶೆಣೈ ತಾತನ ಶಿಲ್ಪಕಲೆಯನ್ನು ಅಲ್ಲಿ ಜೋಡಿಸಿಟ್ಟು ಬಂದರು. 1976_1981 ಅಂದರೆ, ಐದು ವರ್ಷ ಇದರ ನಿರ್ಮಾಣಕ್ಕಾಗಿ ತಗಲಿತು.

**ಸಾಂಸಾರಿಕ ಜೀವನ :**

ರಂಜಾಳ ಗೋಪಾಲ ಶೆಣೈ ಅವರಿಗೆ ನಾಲ್ವರು ಪುತ್ರರು, ಮೂವರು ಪುತ್ರಿಯರು. ತಮ್ಮ ಏಳು ಜನ ಮಕ್ಕಳಲ್ಲಿ ಒಬ್ಬರಲ್ಲಾದರೂ ಈ ಶಿಲ್ಪ ಕೆತ್ತನೆಯ ನೈಪುಣ್ಯತೆ ಬರದಿರುವುದು 'ಶಿಲ್ಪಿ ಗೋಪಾಲ'ರಿಗೆ ಒಂದು ಆಘಾತ. ತಮ್ಮ ಜೀವನವನ್ನೇ ತಾವು–ಮಾಡುವ ಈ ಕೆಲಸ ಖ್ಯಾತಿಗಲ್ಲ ದೇವರ ಸೇವೆ ಮಾತ್ರ– ಅನ್ನುವ ಭಾವನೆಯಿಂದಲೇ ಕಳೆದವರು. ಅವರಿಗೆ ಅವರ ತಾತ, ತಂದೆಯಿಂದ ಬಳುವಳಿಯಾಗಿ ಬಂದ ಈ ಕಲಾಜ್ಞಾನ ತಮ್ಮ ಮಕ್ಕಳಲ್ಲಿ ಒಬ್ಬರಿಗೂ ಇಲ್ಲದುದು ನಿಜಕ್ಕೂ ಖೇದದ ಸಂಗತಿ. ಇವರ ದ್ವಿತೀಯ ಪುತ್ರ ಮಂಜುನಾಥ ಶೆಣೈ ಅವರಿಗೆ ಬಾಲಕ ರಾಧಾಮಾಧವ ಹುಟ್ಟುವವರೆಗೆ ಇವರು ನಿರಾಶರಾಗಿಯೇ ಇದ್ದವರು. ಹುಡುಗನ ಕಲಾನೈಪುಣ್ಯತೆ, ಚಾಕಚಕ್ಯತೆ ತಿಳಿದ ಮೇಲೆ ನಿಶ್ಚಿಂತರಾದವರು ಇಳಿವಯಸ್ಸಿನಲ್ಲಿ.

ಹಾಗಾಗಿ ತಮ್ಮ ಎಪ್ಪತ್ತಾರನೆಯ ತುಂಬು ವಯಸ್ಸಿನಲ್ಲಿ 'ಜಪಾನಿನ ಅವಲೋಕೇಶ್ವರ' ಪ್ರಾರಂಭಿಸುವಾಗ ತಾತನಲ್ಲಿ ಬಲ ತುಂಬಿಸಲು. ಧೈರ್ಯ ಹುಟ್ಟಿಸಲು ಮೊಮ್ಮಗ ರಾಧಾಮಾಧವ ಮುಂದೆ ಬಂದ. ಈತ ಇಂಟರ್ ಮೀಡಿಯಟ್ ಓದಿದ್ದ. ನಿರಕ್ಷರ ಕುಕ್ಷಿಯೇನಲ್ಲ. ಪ್ರಪಂಚ ಬಲ್ಲವ. ಅಜ್ಜನ ಕಲಾಜ್ಞಾನದ ಜೊತೆಗೆ ಪ್ರಾಪಂಚಿಕ ವ್ಯವಹಾರ ಎರಡನ್ನೂ ರೂಢಿಸಿಕೊಂಡು ಅಪ್ ಟು ಡೇಟ್ ಆಗಿ ವ್ಯವಹಾರ ತೂಗಿಸ ಬಲ್ಲ ಜಾಣತನ ಯುವಕನಲ್ಲಿದೆ.

ಬಾಲಕನಲ್ಲಿನ ಪ್ರತಿಭೆಯನ್ನು ಶಿಲ್ಪಿ ಗೋಪಾಲರು ಗುರುತಿಸಿದ್ದೂ ಒಂದು ಕತೆ. ತಮ್ಮ ಮಕ್ಕಳಲ್ಲಿ ಒಬ್ಬರಾದರೂ ತಮ್ಮಂತೆ ಉಳಿ-ಮುಟ್ಟಿಗಳನ್ನು ಹಿಡಿಯದಿದ್ದುದು ಶಿಲ್ಪಿ ಗೋಪಾಲರನ್ನು ಚೈತನ್ಯಹೀನರನ್ನಾಗಿ ಮಾಡುತ್ತಿತ್ತು. ಆದರೆ ಇವರದ್ದು ದೈವದಲ್ಲಿ ಅಮಿತ ವಿಶ್ವಾಸವಿದ್ದ ಜೀವ. ಇಂದಲ್ಲ ನಾಳೆ ತನ ಗೊಂದು ಆಧಾರ ದೊರೆಯಬಹುದೆಂಬ ಆಶಾಭಾವನೆ ಬೇರೆ. ಮೊಮ್ಮಗ ರಾಧಾ ಮಾಧವನಲ್ಲಿ ಚಿಕ್ಕವನಿರುವಾಗ ಇಂತಹ ಯಾವುದೇ ಗುಣಗಳು ಕಂಡು ಬಂದಿರಲಿಲ್ಲ. ಈತ ಇಂಟರ್ ಮೀಡಿಯಟ್ ಓದುತ್ತಿರುವಾಗ ಶಿಲ್ಪಿ ಗೋಪಾಲರು ಮಠಾಧೀಶರಲ್ಲಿಗೆ ಹೋಗಿ ತಮ್ಮ ಮನದಳಲನ್ನು ಹೇಳಿಕೊಂಡರು. ಕುಲಕಸುಬು ಬೇಕಾದಲ್ಲಿ ರಾಧಾ ಮಾಧವ ಶಿಲ್ಪಿಯಾಗಲೇಬೇಕಿತ್ತು. ವಿದ್ಯಾಭ್ಯಾಸಕ್ಕೆ ಇತಿಶ್ರೀ ಹಾಡಲೇಬೇಕಿತ್ತು. ಮೊಮ್ಮಗನನ್ನು ಕರೆದು ಬೇಕಾದ ಉಪಕರಣಗಳನ್ನು ಕೈಗೆ ನೀಡಿ ಶಿಲೆಯಲ್ಲಿ ಗೆರೆ ಮೂಡಿಸಿದರು. ಹುಡುಗನಲ್ಲಿ ಸುಪ್ತವಾಗಿದ್ದ ಕಲಾದೇವತೆಯನ್ನು ಬಾಹ್ಯ ಪ್ರಪಂಚಕ್ಕೆ ಕರೆತಂದರು.

ಒಬ್ಬ ಚತುರ ಶಿಲ್ಪಿ ಏನನ್ನು ಈ ಜಗತ್ತಿಗೆ ನೀಡಬಲ್ಲನೋ ಅದೆಲ್ಲವನ್ನೂ ಶಿಲ್ಪಿ ಗೋಪಾಲರು ನೀಡಿದ್ದರು. ಧರ್ಮಸ್ಥಳ-ಫಿರೋಜಾಬಾದ್-ಜಪಾನ್ ಹೀಗೆ ಜಗದ್ವಿಖ್ಯಾತ ಗೊಮ್ಮಟಮೂರ್ತಿ ಹಾಗೂ ಅವಲೋಕೇಶ್ವರನನ್ನು ಸೃಷ್ಟಿಸಿದ್ದರು. ಇಳಿವಯಸ್ಸಿನಲ್ಲಿ ಖ್ಯಾತಿಯ ಶಿಖರಕ್ಕೇರಿದವರು. ತುಂಬು ಆಯುಷ್ಯ ಪಡೆದು ಹಿಡಿದ ಕೆಲಸ ಮುಗಿಸಿಯೇ ಇಹ ಲೋಕ ತ್ಯಜಿಸಿದವರು. ಇವರಿಗೆ 1968ನೇ ಇಸವಿಯಲ್ಲಿ ಮತ್ತು 27-6-1969ರಲ್ಲಿ ಕರ್ನಾಟಕ ರಾಜ್ಯದ ಲಲಿತಕಲಾ ಅಕಾಡೆಮಿ ಯವರು ಪ್ರಶಸ್ತಿಯನ್ನಿತ್ತು ಗೌರವಿಸಿದರು. ಅಲ್ಲದೆ ಹಲವಾರು ಸಂಘ ಸಂಸ್ಥೆ ಗಳು, ಹಿರಿಯ ಮಹನೀಯರೂ ಈ ಶ್ರೇಷ್ಠ ಶಿಲ್ಪಿಯನ್ನು ಸನ್ಮಾನಿಸಿದ್ದಾರೆ. ಇವರ ಅತ್ಯದ್ಭುತ ಕೈಗೆಲಸ (workmanship) ಕ್ಕೆ ಭಾರತದ ಆಗಿನ ಅಧ್ಯಕ್ಷ ಜಾಕಿರ್ ಹುಸೇನ್ 24-1-69ರಂದು ರಾಷ್ಟ್ರಪ್ರಶಸ್ತಿಯನ್ನಿತ್ತು ಗೌರವಿಸಿದರು. 1968-69ರ ಮಾಸ್ಟರ್ ಕ್ರಾಫ್ಟ್‌ಮೆನ್ ಅವಾರ್ಡ್ ದೊರೆತಿದ್ದು ಇವರ ಕಲಾಸೇವೆಯ ಸಾರ್ಥಕ ತೆಯನ್ನು ಸೂಚಿಸುತ್ತದೆ.

ಇವರು ತೀರಿಕೊಂಡಾಗ ಇವರ ವಯಸ್ಸು ಎಪ್ಪತ್ತೊಂಬತ್ತು ವರ್ಷ. ತಮ್ಮ ಅಂತ್ಯಕಾಲ ಸಮೀಪಿಸಿದ್ದನ್ನು ಅವರು ಅರಿತಿದ್ದರು. ಮೊಮ್ಮಗ ರಾಧಾ ಮಾಧವನನ್ನು ಕರೆದು ಆತನ ತೊಡೆಯ ಮೇಲೆ ತಮ್ಮ ತಲೆಯನ್ನಿಟ್ಟರು. ತಮ್ಮ ಬದುಕಿಗೊಂದು ಅರ್ಥ ನೀಡಿದ ಆತನಲ್ಲಿ ಅವರಿಗೆ ಅಮಿತ ವಿಶ್ವಾಸ, ವಾತ್ಸಲ್ಯ. ಅವಲೋಕೇಶ್ವರಮೂರ್ತಿ ಪ್ರಾರಂಭ ಮಾಡಿದ್ದು ಮಾತ್ರ ಅವರು. ಉಳಿದ ಎಲ್ಲಾ ಕೆಲಸವನ್ನು ಮಾಡಿ ಮುಗಿಸಿದ್ದು ಸ್ವತಃ ರಾಧಾಮಾಧವರೇ. ತಮ್ಮನ್ನು ಆತನಲ್ಲಿ ಗುರುತಿಸಿಕೊಂಡಿದ್ದರು ಶಿಲ್ಪಿ ಗೋಪಾಲರು. ಸಾಯುವ ಮೊದಲು ಮೊಮ್ಮಗನಲ್ಲಿ ಆತನ ಭವಿಷ್ಯದ ಬಗ್ಗೆ ಒಂದೆರಡು ವಚನಗಳನ್ನು ಪಡೆದು ; ಇಪ್ಪತ್ತೆರಡು ವರುಷಗಳ ಹಿಂದೆ ತಮ್ಮ ಪತ್ನಿ ಸ್ವರ್ಗಸ್ಥಳಾದ ವಾರವೇ ತಾವೂ ದೇಹಾಂತ್ಯ ಮಾಡಿದರು.

ಶಿಲ್ಪಿ ಗೋಪಾಲರು ಇನ್ನಿಲ್ಲವಾದರೂ ಅವರನ್ನು ಪ್ರತಿನಿಧಿಸುವ ಅವರ ಮೊಮ್ಮಗ ರಾಧಾಮಾಧವರ ಬಗ್ಗೆ ಒಂದೆರಡು ಮಾತು ಬರೆಯಬೇಕಾದ್ದು ಅನಿವಾರ್ಯ. ಗುಣದಲ್ಲಿ ಕಲೆಯಲ್ಲಿ ಅಜ್ಜನನ್ನೇ ಎರಕ ಹೊಯ್ದಂತಿದ್ದಾರೆ ರಾಧಾಮಾಧವ. ನಮ್ಮ ಕಾರ್ಕಳದ ಭೇಟಿಯ ಸಂದರ್ಭದಲ್ಲಿ ತನ್ನ ತಾತನ ಹಿರಿಮೆಯನ್ನು ಮನಂಬುಗುವಂತೆ ವರ್ಣಿಸಿದ ಈ ಯುವಕ ತಾತನ ಹೆಜ್ಜೆಯ ಮೇಲೆ ಹೆಜ್ಜೆಯನ್ನಿಡುತ್ತಿದ್ದಾರೆ. ತನ್ನ ವಿದ್ಯಾಭ್ಯಾಸ ಮೊಟಕುಗೊಳಿಸಿ ಶಿಲ್ಪವೃತ್ತಿಯನ್ನು ಆರಿಸಿಕೊಂಡಿರುವುದಕ್ಕೆ ಈತ ಎಂದಿಗೂ ತಾತನಿಗೆ ಋಣಿ. ಮಾತ್ರವಲ್ಲ ತಾತನ ಕೊನೆಯ ದಿನಗಳಲ್ಲಿ ಕೈಗೆತ್ತಿಕೊಂಡ ಜಪಾನಿನ ಅವಲೋಕೇಶ್ವರಮೂರ್ತಿಗೆ ತಾತನ ಮಾರ್ಗದರ್ಶನ ಮಾತ್ರ. ಅದನ್ನು ಪೂರ್ತಿಯಾಗಿ ಮುಗಿಸಿ, ಚಿತ್ತಾರದ ಕೆಲಸವನ್ನು ಕಣ್ಣು ಮೂಗಿನ ಸೂಕ್ಷ್ಮ ಕೆಲಸವನ್ನು ಕೂಡಾ ಮುಗಿಸಿದ್ದು ರಾಧಾಮಾಧವರೇ. ಮೂರ್ತಿ ಕೆತ್ತನೆಯ ಕಲ್ಲನ್ನು ತರಿಸುವ ಬಗ್ಗೆ, ಅದರ ಗುಣವಿಶೇಷಗಳ ಪರೀಕ್ಷೆ ಇತ್ಯಾದಿಗಳ ಬಗ್ಗೆ ಕೂಲಂಕಷವಾಗಿ, ಸಮಗ್ರವಾಗಿ ವರ್ಣಿಸಿದವರು ರಾಧಾ ಮಾಧವರೇ. ಕಾರ್ಕಳದಿಂದ ಮೂರು ಮೈಲಿ ಊರ ಹೊರಭಾಗದಲ್ಲಿ ಕಣ್ಣಳತೆಗೂ ಮೀರಿ ಹರಿಡಿನಿಂತ ಶಿಲಾರಾಶಿಯ ಬಳಿ ಕರೆದೊಯ್ದರು. ಸರಕಾರಕ್ಕೆ ರಾಯಲ್ಟಿ ಕೊಟ್ಟು ಏಳೆಂಟು ಎಕರೆ ಶಿಲಾಪ್ರದೇಶವನ್ನು ಅವರಿಂದ ಲೀಸ್ ಅಗ್ರಿಮೆಂಟ್ ಮೇಲೆ ಪಡೆದು, ಡೈನಮೈಟ್ ಮೊದಲಾದ ಸ್ಫೋಟಕಗಳನ್ನಿಟ್ಟು ಕಲ್ಲನ್ನು ಒಡೆದು ಸೀಳಾಗಿಸುತ್ತಾರೆ. ಪ್ರಕೃತಿಯಲ್ಲೇ ಒಂದು ಶಿಲೆಯ ಮೇಲೆ ಮತ್ತೊಂದು ಶಿಲೆ ರೂಪುಗೊಂಡಿದ್ದನ್ನು ಗುರುತಿಸಿ ಮೇಲಿನ ಶಿಲೆಯಲ್ಲೇ ಮೂರ್ತಿ ಕೆತ್ತಲು ಪ್ರಾರಂಭ ಮಾಡುತ್ತಾರೆ. ಇದು ಹಾಸುಗಲ್ಲು. ಹೀಗೆ ಕೆತ್ತಿದ ಮೂರ್ತಿಗಳು ಕೆತ್ತ ನೆಯ ಕೆಲಸ ಮುಗಿಯುತ್ತಿದ್ದಂತೆಯೇ ಕಳಗಿನ ಶಿಲೆಯನ್ನು ಬಿಟ್ಟು ಮೇಲೇಳುತ್ತವೆ. ಹಾಗಾಗಿ ಶಿಲ್ಪಗಳಿಗೆ ನಲದಿಂದ ವಿಗ್ರಹವನ್ನು ಕೀಳಲು ಹೆಚ್ಚು ತ್ರಾಸದಾಯಕವೆನಿಸು ವುದಿಲ್ಲ. ಇಂತಹ ಪ್ರಕೃತಿ ಸಹಜ ಶಿಲೆಯನ್ನು ಗುರುತಿಸಿ ಆರಿಸುವಲ್ಲೇ ಶಿಲ್ಪಿಯ

ಚಮತ್ಕಾರವಿರುವುದು ; ಚಾಕಚಕ್ಯತೆ ತೋರುವುದು. ಐವತ್ತು ಅಡಿಗಳಷ್ಟು ದೊಡ್ಡ ವಿಗ್ರಹಗಳನ್ನು ನಿರ್ಮಾಣ ಮಾಡಲು ಕೆಲವೊಂದು ಶಿಲೆಗಳನ್ನು ರಾಸಾಯನಿಕ ಪರೀಕ್ಷೆಗೂ ಒಳಪಡಿಸಬೇಕಾಗುತ್ತದೆ. ಏಕೆಂದರೆ ವಿಗ್ರಹಗಳು ಪೂರ್ಣಗೊಂಡು ಪ್ರತಿಷ್ಠಾಪನೆಯಾದ ಬಳಿಕ ಬಿರುಕು ಬಿಟ್ಟ ಪ್ರಸಂಗಗಳು ಬಾರದಂತಿರಲು ಕಲ್ಲಿನ ಗುಣ ಪರೀಕ್ಷೆ ಇಲ್ಲಿ ಅವಶ್ಯವಿರುತ್ತದೆ.

ಪ್ರಕೃತಿ ಕೆಲವೊಮ್ಮೆ ಇಂತಹ ಬೃಹತ್ ಬಂಡೆಗಳನ್ನು ಒಡೆಯಲು ಮಾನವ ನಿಗೆ ಸಹಾಯ ಮಾಡುವುದೂ ಇದೆ. ಅರ್ಥಿಂಗ್ ಇಲ್ಲದುದರಿಂದ ಮಳೆಗಾಲದಲ್ಲಿ ಬಿರುಸಾಗಿ ಬರುವ ಸಿಡಿಲು ಬಡಿದು ಬಂಡೆ ಸೀಳಾಗಿ ಇಬ್ಭಾಗವಾಗುವುದೂ ಇದೆ. ಇದು ಶಿಲ್ಪಿಗಳ ಕೆಲಸವನ್ನು ಕಡಿಮೆ ಮಾಡುತ್ತದೆ. ಪ್ರಕೃತಿ ಮಾನವನಿಗೆ ಸಹಕಾರಿಯಾಗುತ್ತದೆ. ಗೆರೆ ಎಳೆದು ಇಬ್ಭಾಗಗೈದಂತೆ ತುಂಡಾಗುವ ಇಂತಹ ಬಂಡೆಕಲ್ಲು ನಮ್ಮ ಕಲ್ಪನೆಗೊಂದು, ಮನುಷ್ಯನ ವಿಜ್ಞಾನಕ್ಕೊಂದು ಸವಾಲೆನಿಸುತ್ತದೆ.

ಇಂತಹ ಹಾಸುಗಲ್ಲುಗಳ ಮೇಲೆಯೇ ಕೈಗೆಲಸಗಾರರು ತಮ್ಮ ಗುಡಿಸಲು ಕಟ್ಟಿಕೊಂಡಿರುತ್ತಾರೆ. ಅಲ್ಲೇ ಬೇಕಿಯ ಕುಲುಮೆಯೂ ಇರುತ್ತದೆ. ಬೃಹತ್ ಕಲ್ಲನ್ನು ತುಂಡರಿಸುವ ಉಳಿಯನ್ನು ಈ ಕುಲುಮೆಯಲ್ಲಿ ಕೆಂಡವಾಗಿಸಿ, ಬಡಿದು, ಜಗ್ಗಿಸಿ, ಚೂಪಾಗಿಸುತ್ತಾರೆ. ಒಂದೆರಡು ಉಪಯೋಗದ ಬಳಿಕ ಇವು ಕಲ್ಲಿನ ಸಂಪರ್ಕ ದಿಂದ ಮೊಂಡಾಗಿಬಿಡುತ್ತವೆ. ಮತ್ತೊಮ್ಮೆ ಕುಲುಮೆಯ ಬಳಿ, ಹೀಗೆ ಅಹೋರಾತ್ರಿ ಕೆಲಸ ನಡೆಸಬೇಕಾಗುತ್ತದೆ. ಶಿಲ್ಪಿ ಗೋಪಾಲರು ದಿನ ಒಂದಕ್ಕೆ ಹದಿನೆಂಟು ಗಂಟೆಗಳಷ್ಟು ಕಾಲ ಶಿಲೆಯೊಂದಿಗೆ ನಿಕಟ ಸಂಪರ್ಕವಿರಿಸಿಕೊಂಡಿದ್ದರು. ಊರ ದೇವರು ವೆಂಕಟರಮಣನ ಪದತಲಕ್ಕೆ ತಮ್ಮನ್ನು ಸಮರ್ಪಿಸಿ ಸೇವಾ ಮನೋಧರ್ಮದಿಂದಲೇ ಕೆಲಸ ಕಾರ್ಯ ಮಾಡುತ್ತಿದ್ದರು.

ದೇಶದಲ್ಲಿ ಮಾತ್ರವಲ್ಲ, ವಿದೇಶದಲ್ಲೂ, ಜಗತ್ತಿನುದ್ದಕ್ಕೂ ಶಿಲ್ಪಿ ಗೋಪಾಲರ ಖ್ಯಾತಿ ಹಬ್ಬಿದ್ದು ವಿಶೇಷವೇನೂ ಅಲ್ಲ. ಚಿಕ್ಕದೊಂದು ಅಕ್ಕಿ ಕಾಳಿನಲ್ಲಿ ಇವರು ಬರೆದ ಚಿತ್ರ, ಆನೆಯ ದಂತದ ಮೇಲೆ ಕೆತ್ತಿದ ಮಹಿಷಮರ್ಧಿನಿಯಿಂದ ಎಪ್ಪತ್ತು ಅಡಿಗಳ ಬುದ್ಧ ಇವರ ನೈಪುಣ್ಯತೆಗೆ ಹಿಡಿದ ಕನ್ನಡಿ. ಇತಿಹಾಸದ ಪುಟ ಗಳಲ್ಲಿ ತಮ್ಮ ಸ್ಥಾನವನ್ನು ಭದ್ರಪಡಿಸಿದವರು ರಂಜಾಳ ಗೋಪಾಲ ಶೆಣೈ. ದಕ್ಷಿಣ ಕನ್ನಡದ ಚಿಕ್ಕ ಊರಿನಲ್ಲಿ ಹುಟ್ಟಿ, ತಮ್ಮ ಸ್ವಂತಿಕೆಯಿಂದಲೇ ಜಗದ್ವಿಖ್ಯಾತರಾಗಿ ಹುಟ್ಟೂರಿಗೂ, ದೇಶಕ್ಕೂ ಕೀರ್ತಿ ತಂದ ಈ ಮಹಾನುಭಾವರಿಗೆ– ಅಗಲಿದ ಬಂಧುವಿಗೆ ನಮ್ಮ ಕೃತಜ್ಞತೆಯ ಬಾಷ್ಪಾಂಜಲಿಯನ್ನು ಸಲ್ಲಿಸಬೇಕಾದದ್ದು ಕರ್ತವ್ಯ ತಾನೇ ?

—0—

## ಡಾ॥ ಅಶೋಕ ಪೈ

ಸಮಾಜ ಸೇವೆಗೆ ಹಲವು ಮುಖಗಳಿವೆ. ಇಲ್ಲಿ ಬೇಕಾದುದು ಧನದ ಶ್ರೀಮಂತಿಕೆಯಲ್ಲ. ಹೃದಯ ಶ್ರೀಮಂತಿಕೆ. ಶ್ರೀಮಂತ ಕುಟುಂಬದಲ್ಲಿ ಹುಟ್ಟಿ ಆಧುನಿಕತೆಯ ಜೀವನ ನಡೆಸಿವರೂ, ಶ್ರೀಮಂತಿಕೆಯ ಸೋಗಿಗೆ ಮಾರು ಹೋಗದೆ ಬಡಜನರ ಸೇವೆಗಾಗಿಯೇ, ತಮ್ಮನ್ನು ತಾವೇ ಮುಡಿಪಾಗಿಟ್ಟ ಕರ್ಮ ಯೋಗಿಗಳು ಕೆಲವೇ ಕೆಲವರು. ಇವರಿಗೆ ದೇವರಲ್ಲಿ ಶ್ರದ್ಧೆ ಇಲ್ಲ. ಧರ್ಮದಲ್ಲಿ ನಂಬಿಕೆ ಇಲ್ಲ. ಮಠ ಮಠಾಧಿಪತಿಗಳಲ್ಲಿ ಅವಿಶ್ವಾಸ. ಮನುಷ್ಯ ಪ್ರಯತ್ನದಲ್ಲಿ ದೃಢ ವಿಶ್ವಾಸ. ನೊಂದ ಮಾನವ ಜೀವಿಗಳ ಶ್ರೇಯೋನ್ನತಿಯೇ ಇವರ ಜೀವನ ಧ್ಯೇಯ ಶಿವಮೊಗ್ಗದ ಡಾ॥ ಅಶೋಕ ಪೈ ಈ ಸಾಲಿಗೆ ಸೇರಿದವರು. ಮಾನಸಿಕ ರೋಗತಜ್ಞ ರಾಗಿ ಇಂದು ಹಲವು ಮಾನವ ಜೀವಿಗಳಿಗೆ ಬೆಳಕಾಗಿ, ಮಾನವ ಧರ್ಮತತ್ವಗಳಿಗೆ ತಮ್ಮನ್ನು ತಾವೇ ಒಪ್ಪಿಸಿಕೊಂಡವರು.

1946ರ ಡಿಸೆಂಬರ್ 30ರಂದು ಶಿವಮೊಗ್ಗದ ಕಟೀಲ ಅಪ್ಪು ಪೈ ದಂಪತಿಗಳ ಮಗನಾಗಿ ಹುಟ್ಟಿದರು ಅಶೋಕ ಪೈ. ಮಧ್ಯಮ ವರ್ಗದ ಸಂಸಾರ. ಯೋಚನೆಯಲ್ಲಿ, ಕಾರ್ಯಗಳಲ್ಲಿ ಉಚ್ಚ ಮಟ್ಟದ ವಿಚಾರಶೀಲತೆ. ಆಂಗ್ಲ ಸಾಹಿತ್ಯ ದಲ್ಲಿ ಅಪರಿಮಿತ ವಾತ್ಸಲ್ಯವಿದ್ದ ಅಪ್ಪು ಪೈಗಳ ಈ ಸಾಹಿತ್ಯ ಪ್ರೇಮ ಮಗನ ರಕ್ತ ದಲ್ಲೂ ಹರಿದು ಬಂದಿತು. ತಂದೆ ಊರ ಪ್ರಮುಖ ಲಾಯರು. ಅವರ ಮಾತಿಗೆ ಅಲ್ಲಿ ಬೆಲೆ ಇತ್ತು. ತಂದೆಯ ಪ್ರಭಾವ ಮಗನ ಮೇಲೆ ಅಪರಿಮಿತವಿತ್ತು. ಕಮ್ಯುನಿಸ್ಟ್ ತತ್ವಗಳಿಗೆ ಇವರು ಮಾರುಹೋದವರು. ಮಾರ್ಕ್ಸ್‌ನ ಅನುಯಾಯಿ ಗಳು. ತಂದೆ ಮಗ ಒಂದೇ ತಕ್ಕಡಿಯಲ್ಲಿ ಸಮಾನ ತೂಗಬಲ್ಲವರು.

ಇವರದ್ದು ತುಂಬು ಕುಟುಂಬ. ಹಿರಿಯ ಮಗ ಮುಕುಂದ(ಬಾಬಣ್ಣ)ನ ವ್ಯಕ್ತಿತ್ವ ಇವರಿಗೆ ಪ್ರಿಯ. ಅಶೋಕರ ವಿದ್ಯಾಭ್ಯಾಸ, ಭವಿಷ್ಯವನ್ನು ಅವರೇ ನಿರ್ದೇಶಿಸಿ ಕಲ್ಲನ್ನು ಕಡಿದು ಮೂರ್ತಿಯನ್ನಾಗಿಸಿದರು. ಮಾನವ ಹೃದಯ ದೇಗುಲದಲ್ಲಿರಿಸಿದರು.

ಬಾಲ್ಯದಿಂದಲೇ ಅಶೋಕ್ ಎಲ್ಲಾ ಕ್ಷೇತ್ರಗಳಲ್ಲೂ ಕೈಯಾಡಿಸಿದವರು. ಆಟ, ಪಾಠಗಳಲ್ಲಿ ಎಂದೂ ಪ್ರತಿಸ್ಪರ್ಧಿಯನ್ನು ಹುಟ್ಟಿಸಿದವರಲ್ಲ. ಗೆಲುವು ಎಂದೂ ಇವರದೇ. ಅದೇ ಅವರ ಆತ್ಮವಿಶ್ವಾಸವನ್ನು ಭದ್ರಪಡಿಸಿತ್ತು. ಆ ಕಾಲದಲ್ಲಿ ಇಲ್ಲಸ್ಟ್ರೇಟೆಡ್ ವೀಕ್ಲಿಯಲ್ಲಿ ಬರುತ್ತಿದ್ದ 'young folks league' ಅಂಕಣದಲ್ಲಿ

ಇವರು ಲೇಖನಗಳನ್ನು ಬರೆದು ಸತತವಾಗಿ ಬಹುಮಾನಗಳನ್ನು ಗಿಟ್ಟಿಸುತ್ತಿದ್ದರು. ಅಂತರ ಶಾಲಾ ಚರ್ಚಾ ಸ್ಪರ್ಧೆಯಲ್ಲೂ, ಅಂತರ ಕಾಲೇಜು ಚರ್ಚಾ ಸ್ಪರ್ಧೆಯಲ್ಲೂ ಗೆಲುವು ಇವರಿಗೆ ಶತಸ್ಸಿದ್ಧ. ಚಿಕ್ಕಂದಿನಿಂದಲೇ ಕಲಿತ ಕೂಚುಪುಡಿ ನೃತ್ಯ ಇವರ ಕಲಾಭಿರುಚಿಗೆ ಸಾಕ್ಷಾತ್ಕಾರವೆನಿಸಿತ್ತು.

ಭವಿಷ್ಯದಲ್ಲಿ ಇವರೊಬ್ಬ ಹಿರಿಯ ವ್ಯಕ್ತಿಯಾಗುವ ಗುಣಗಳೆಲ್ಲ ಚಿಕ್ಕಂದಿನಿಂದಲೇ ತೋರುತ್ತಿದ್ದವು. 'ಹಿರಿಯನಾದ ಮೇಲೆ ಏನಾಗುತ್ತೀಯೋ ?' ಎಂದು ಅಧ್ಯಾಪಕರು ಶಾಲೆಯಲ್ಲಿ ಕೇಳಿದರೆ ದಿಟ್ಟತನದಿಂದ ಈ ಬಾಲಕ ಉತ್ತರಿಸುತ್ತಿದ್ದ– 'ಮನೋವಿಜ್ಞಾನಿ'. ಈ ಬಾಲಕನಿಗೆಲ್ಲೋ ಭ್ರಾಂತು ಎಂದು ತಿಳಿದ ಅಧ್ಯಾಪಕರು ನೀಡುವ ಶಿಕ್ಷೆ ಬೆಂಚಿನ ಮೇಲೆ ಗಂಟೆಗಟ್ಟಲೆ ನಿಲ್ಲುವಂತದ್ದು. ಹೈಸ್ಕೂಲಿನಲ್ಲಿದ್ದಾಗಲೇ ನಾಟಕಗಳನ್ನು ಬರೆದು ನಿರ್ದೇಶಿಸುವುದು ಬಾಲಕ ಅಶೋಕನ ಒಲುಮೆಯದ್ದು. ಅದಾಗಲೇ ಪ್ರಸಿದ್ಧಿ ಪಡೆದಿದ್ದ ಮಲ್ಲಿಗೆ, ಸುಧಾ, ಕರ್ಮವೀರ ಪತ್ರಿಕೆಗಳಿಗೆ ನಿಯಮಿತವಾಗಿ ಲೇಖನಗಳನ್ನು ಬರೆದು ಕಳುಹಿಸುತ್ತಿದ್ದರು. ಭಾರತ–ಅಮೇರಿಕ ಬಾಂಧವ್ಯವನ್ನು ಹೆಚ್ಚಿಸುವಂತಹ ಯು ಎಸ್ ಐ ಎಸ್ ಚರ್ಚಾಸ್ಪರ್ಧೆಯಲ್ಲಿ ಪಾಲ್ಗೊಂಡು ಬಹುಮಾನ ಪಡೆದದ್ದು ಈ ಬಾಲಕನ ಕೀರ್ತಿ ಕಿರೀಟದಲ್ಲಿ ಮತ್ತೊಂದು ಪುಕ್ಕ.

ಕ್ರೀಡೆಗಳಲ್ಲಿ ಬ್ಯಾಡ್ಮಿಂಟನ್ ಇವರಿಗೆ ಅಚ್ಚುಮೆಚ್ಚು. ಸೋದರ ಬಾಬಣ್ಣ ತಮ್ಮನಿಗೆ ಇಂತಹ ಕ್ರೀಡೆಗಳನ್ನಾಡಲು ಅವಕಾಶ ಮಾಡಿಕೊಡುತ್ತಿದ್ದರು. ಚಿಕ್ಕವನಿರುವಾಗಲೇ ಪ್ರಕಾಶ ಪಡುಕೋಣೆಯೊಂದಿಗೆ ಆಡಿ ಆತನನ್ನು ಸೋಲಿಸಿದ್ದನ್ನು ಇವರು ಈಗಲೂ ಜ್ಞಾಪಿಸುತ್ತಾರೆ.

ಇವರೊಬ್ಬ ಪ್ರತಿಭಾವಂತರು. ಇವರಿಗಿಂತ ಮಿಗಿಲಾಗಿ ಇದನ್ನರಿತವರು ಇವರ ಬಂಧುಗಳು. ಇವರ ವೈದ್ಯಕೀಯ ವಿದ್ಯಾಭ್ಯಾಸಕ್ಕೆ ಮನೆಯಲ್ಲಿ ಅನುಮತಿ ಗಿಟ್ಟಿಸಿ ಬಾಬಣ್ಣ, ತಮ್ಮನನ್ನು ಬೆಳಗಾವಿಯ ಮೆಡಿಕಲ್ ಕಾಲೇಜಿಗೆ ಸೇರಿಸಿಯೇ ಬಿಟ್ಟರು. ಆದರ್ಶಗಳ ಪ್ರಾಯವದು. ತಮ್ಮನ ಬಯಕೆಗಳಿಗೆಲ್ಲ ಅಣ್ಣನ ಅನುಮೋದನೆ. ಈ ಬಗ್ಗೆ ಈಗಲೂ ಅಶೋಕ್ ಬಾಬಣ್ಣನಿಗೆ ಋಣಿಯಾಗಿದ್ದಾರೆ. ಆದಾಗಲೇ ಬೆಳಗಾವಿಯಲ್ಲಿ ಮೆಡಿಕಲ್ ಕಾಲೇಜು ಪ್ರಾರಂಭವಾದ ವರ್ಷ. ಮೊದಲ ತಂಡವೇ ಅಶೋಕ ಪೈಗಳದ್ದು.

ಗಡಿನಾಡ ಸಮಸ್ಯೆ ಪ್ರಾರಂಭವಾಗಿತ್ತು. ಬೆಳಗಾವಿಯಲ್ಲಾದರೋ ದಿನ ಬೆಳಗಾದರೆ ಭಾಷಾ ಆಂದೋಲನ. ಕನ್ನಡಿಗರ ಮಹಾರಾಷ್ಟ್ರಿಗಳ ಭಾಷಾ ಕಾಳಗ. ಇಂತಹ ವಿಷಯಗಳಲ್ಲಿ ಅಶೋಕರ ಒಲವು ಜಾಸ್ತಿ. ತಮ್ಮ ಮೆಡಿಕಲ್ ವಿದ್ಯಾಭ್ಯಾಸ

ಕ್ಕಾಗಿ ಅವರು ಬೆಳಗಾವಿಯನ್ನು ಆರಿಸಿದ್ದಕ್ಕೆ ಇದೂ ಒಂದು ಕಾರಣ ಕೂಡ ಅವರು ಆಂದೋಲನದ ಮುಂಚೂಣಿಯಲ್ಲಿದ್ದರು. ಕರ್ನಾಟಕವನ್ನು ಪ್ರತಿನಿಧಿಸಿ ಪಾರ್ಲಿಮೆಂಟ್ ಭವನಕ್ಕೂ ಹೋದರು. ಭಾಷಾ ಅಭಿಮಾನ ಇವರಲ್ಲಿ ಉಕ್ಕಿ ಹ ಯುತ್ತಿತ್ತು. ಇಷ್ಟೆಲ್ಲ ಕಾರ್ಯಭಾರಗಳ ನಡುವೆಯೂ ವೈದ್ಯಕೀಯದ ಮೊದ ಮೂರು ವರ್ಷಗಳಲ್ಲಿ ಇವರೇ ಮೊದಲಿಗರಾಗಿ ತೇರ್ಗಡೆ ಹೊಂದಿದರು. ಇವ ಮನೋದೃಢತೆಗೆ ಇದಕ್ಕಿಂತ ಬೇರೆ ನಿದರ್ಶನ ಬೇಕೆ ? ಈ ಕಾಲೇಜು ದಿನಗಳಲ್ಲಿ ಇವರ ನಾಟಕದ ಗೀಳು ಮತ್ತೂ ಕವಲೊಡೆದದ್ದು. 'ಅಂತರರಾಷ್ಟ್ರೀಯ ವೈದ್ಯಕೀಯ ವಿದ್ಯಾರ್ಥಿಗಳ ನಾಟಕೋತ್ಸವ'ದಲ್ಲಿ ಇವರು ಬರೆದ 'ಆಪರೇಷನ್ ಬೂಮರಾಂಗ್ ನಾಟಕ ಪ್ರಥಮ ಸ್ಥಾನ ಗಳಿಸಿತ್ತು. ತಾವೇ ಸ್ವತಃ ಯುನೈಟೆಡ್ ಆರ್ಟಿಸ್ ಅನ್ನುವ ಸಂಸ್ಥೆಯನ್ನು ಕಟ್ಟಿ ನಾಟಕಗಳ ಸಾಲನ್ನೇ ಬರೆದು ಆಡಿಸಿದರು. ಮೊದ ವರ್ಷದ ಮೆಡಿಕಲ್ ವಿದ್ಯಾರ್ಥಿಯಾಗಿದ್ದಾಗಲೇ 'ಪಿತೃಪ್ರೇಮ' ಅನ್ನುವ ಹಾಸ ನಾಟಕವನ್ನೂ ಬರೆದು ಆಡಿಸಿದ್ದರು. ಇವರ 'ಮೈ ಬೆಟರ್ ಹಾಫ್' ಅನ್ನು ಹಾಸ್ಯ ನಾಟಕಕ್ಕೆ ಅಖಿಲ ಭಾರತೀಯ ವಿದ್ಯಾರ್ಥಿಗಳ ಮಟ್ಟದಲ್ಲಿ ಮೊದಲ ಬಹ ಮಾನ ಬಂದಿತ್ತು.

ಪ್ರತಿಭೆ ಎನ್ನುವುದು ಇದಲ್ಲದೆ ಇನ್ನೇನು ? ಸಾಹಿತ್ಯದಲ್ಲಿ, ಕ್ರೀಡೆಯಲ್ಲಿ ಶಿಕ್ಷಣದಲ್ಲಿ, ಸಂಗೀತ–ನೃತ್ಯದಲ್ಲಿ ಹೀಗೆ ಬದುಕಿನ ಬಹುರಂಗಗಳಲ್ಲಿ ಇವರದು ಎತ್ತಿ ಕೈ. ಪ್ರತಿಭೆಗೆ ಅಲ್ಲಿ ಅವಕಾಶವೂ ಇತ್ತು. ಇವರು ಬರೆದ ನಾಟಕಗಳ ಸಾಲ ರಂಗದ ಮೇಲೆ ಹಲವು ಹತ್ತು ಬಾರಿ ಪ್ರದರ್ಶನಗೊಂಡಿದ್ದವು. ಕಾಲೇಜಿನಲ್ಲೂ ಇವರೇ ಕ್ರಿಕೆಟ್ ಹಾಗೂ ಬ್ಯಾಡ್‌ಮಿಂಟನ್ ಆಟಗಳಿಗೆ ನಾಯಕರಾಗಿದ್ದರು. ಅಂತ ಕಾಲೇಜು ಚರ್ಚಾಸ್ಪರ್ಧೆಗಳಲ್ಲಿ ಹಾಗೂ ಆಟಗಳಲ್ಲಿ ಇವರದೇ ಮೇಲುಗೈ. ಇವರು ಪಡೆದಿದ್ದ ಬಹುಮಾನ–ಪದಕಗಳ ರಾಶಿಯೇ ಇದಕ್ಕೆ ಸಾಕ್ಷಿ.

'ಕನ್ನಡಿಗರ ಬಳಗ' ಅನೇಕ ಪೈಗಳ ಇನ್ನೊಂದು ಅಚ್ಚೆಯ ಕನಸು ಮೆಡಿಕಲ್ ಕಾಲೇಜಿನ ಕನ್ನಡಿಗರನ್ನೇ ಕಲೆಹಾಕಿ ಅಲ್ಲಿ ವಿದ್ಯಾರ್ಥಿ ಬಳಗ ಸ್ಥಾಪಿಸಿ ಅ ರಲ್ಲೂ ಮೊದಲಿಗರೆನಿಸಿದರು. ಈ 'ಕನ್ನಡಿಗರ-ಬಳಗ' ಸಂಸ್ಥೆ ಇನ್ನೂ ಬೆಳಗಾ ಮೆಡಿಕಲ್ ಕಾಲೇಜಿನಲ್ಲಿ ಅಸ್ತಿತ್ವದಲ್ಲಿದೆ. ತನ್ನನ್ನು ಸ್ಥಾಪಿಸಿದವರನ್ನು ಕೃತಜ್ಞ ಯಿಂದ ಸ್ಮರಿಸುತ್ತದೆ. ಬಸವ ಜಯಂತಿ, ಕನ್ನಡ ರಾಜ್ಯೋತ್ಸವ ಮೊದಲಾ ಕನ್ನಡಿಗರ ಕಾರ್ಯಕ್ರಮವನ್ನು ಬೆಳಗಾವಿಯ ಮಧ್ಯದಲ್ಲಿದ್ದೇ ಆಚರಿಸಿದರು. ಗಲಭೆಗಳ ಹೆದರದ ಗಂಡೆದೆ ಅದು.

ಅಂತೂ ಐದು ವರ್ಷಗಳ ವಿದ್ಯಾರ್ಥಿ ಜೀವನ ಮುಗಿಸಿದಾಗ ಅದೇ ಕಾಲೇಜಿನಲ್ಲಿ ಅಧ್ಯಾಪಕರ ಕೆಲಸ ಕಾಯುತ್ತಿತ್ತು. ಅಧ್ಯಾಪಕರಾದ ಬಳಿಕ ಆ

ಎರಡು ವರ್ಷ ಅಷ್ಟೊಂದು ಹರ್ಷದಾಯಕವೆನಿಸಿರಲಿಲ್ಲ. ಕಾರಣ ವಿದ್ಯಾರ್ಥಿ ನಾಯಕರಾಗಿದ್ದು ಹಲವು ಗಲಭೆಗಳ ಮುಂಚೂಣಿಯಲ್ಲಿದ್ದ ಇವರು ಅಧ್ಯಾಪಕ ವರ್ಗದವರಿಗೆ ದುಃಸ್ವಪ್ನರಾಗಿದ್ದರು. ಈಗ ತಾವೇ ಸ್ವತಃ ಅಧ್ಯಾಪಕರಾಗಿ ತಮ್ಮ ಸಹಪಾಠಿಗಳಿಗೆ ತಾವೇ ಪಾಠ ಹೇಳಿಕೊಡಬೇಕಾದ ಪರಿಸ್ಥಿತಿ. ಹಾಗಾಗಿ ವಿದ್ಯಾರ್ಥಿಗಳೊಂದಿಗೆ ಸಮಾನತೆ ಸಾಧಿಸಲಾಗದೆ ಅಲ್ಲೂ ಅಲ್ಲ, ಇಲ್ಲೂ ಅಲ್ಲದೆ ಮಾನಸಿಕವಾಗಿ ಕುಗ್ಗಬೇಕಾಯಿತು. 1971–73ರ ವರೆಗೆ ಎರಡು ವರ್ಷಗಳ ಕಾಲ ಕೆಲಸದಲ್ಲಿದ್ದು ಅನಂತರ ರಾಜೀನಾಮೆ ನೀಡಿ ಬೆಂಗಳೂರಿನ ನಿಮ್ಹಾನ್ಸ್‌ಗೆ ಸೇರಿದರು– ಪೋಸ್ಟ್ ಗ್ರ್ಯಾಜುಯೇಟ್ ಸೈಕಿಯಾಟ್ರಿಕ್ ಆಗಿ.

1974ರ ಏಪ್ರಿಲ್ 21ರಂದು ಡಾ॥ ಅಶೋಕ್ ಪೈ ಹಾಗೂ ಡಾ॥ ಕಪೂರ್ ಅವರ ಅಹರ್ನಿಶಿ ಯತ್ನದ ಫಲವಾಗಿ ಸೈಕಿಯಾಟ್ರಿಕ್ ವಿಭಾಗ ಮಣಿಪಾಲದಲ್ಲಿ ಪ್ರಾರಂಭಗೊಂಡಿತು. ಈವರೆಗೆ ಮನೋವಿಜ್ಞಾನ ವಿಭಾಗ ಹೊಂದಿಲ್ಲದ ಮಣಿಪಾಲಕ್ಕೆ ಅದನ್ನು ಒದಗಿಸಿದ ಕೀರ್ತಿ ಈ ಇಬ್ಬರಿಗೂ ಸಲ್ಲಬೇಕು.

ಇವರ ಬಹುದಿನದ ಆಕಾಂಕ್ಷೆ ಕೊನೆಗೂ ನೆರವೇರಿತ್ತು. ಚಿಕ್ಕಂದಿನ ಮನೋವಿಜ್ಞಾನಿಯಾಗುವ ಇವರ ಕನಸು ಕೈಗೂಡಿತ್ತು. ಸಮಾಜ ಸೇವೆ ಅವಕಾಶಕ್ಕಾಗಿ ಕೈ ಬೀಸಿ ಕರೆಯುತ್ತಿತ್ತು. ಈ ಮನೋವಿಜ್ಞಾನ ವಿಭಾಗ ಮಣಿಪಾಲದಲ್ಲಿ ಪ್ರಾರಂಭವಾದದ್ದೇ ತಡ, ದೂರ ದೂರದ ತೀರ್ಥಹಳ್ಳಿಯಿಂದ–ಶಿವಮೊಗ್ಗದಿಂದ ಮನೋರೋಗಿಗಳ ತಂಡತಂಡವೇ ಚಿಕಿತ್ಸೆಗೆಂದು ಮಣಿಪಾಲಕ್ಕೆ ಬರತೊಡಗಿತು. ಆರ್ಥಿಕವಾಗಿ ದೀನಾವಸ್ಥೆಯಲ್ಲಿದ್ದವರಿಗೆ ತಿಂಗಳಿಗೆ ನಾಲ್ಕೆಂಟು ಬಾರಿ ಬಂದು ಹೋಗುವುದು ಕನಸಿನ ಮಾತಾಗಿತ್ತು. ಈ ಸಂದರ್ಭದಲ್ಲಿ ಸ್ವತಃ ಡಾ॥ ಅಶೋಕ ಪೈಗಳೇ ಶನಿವಾರ–ಭಾನುವಾರ ಶಿವಮೊಗ್ಗ–ತೀರ್ಥಹಳ್ಳಿಗಳಿಗೆ ಪರ್ಯಾಯವಾಗಿ ಬಂದು ರೋಗಿಗಳಿಗೆ ಚಿಕಿತ್ಸೆ ನೀಡಿ ಹಿಂತಿರುಗುತ್ತಿದ್ದರು. ಈ ವ್ಯವಸ್ಥೆಯನ್ನು ಇವರೇ ಮೊದಲು ಪ್ರಾರಂಭಿಸಿದುದರಿಂದ ವಿದ್ಯಾರ್ಥಿಯಾಗಿದ್ದಾಗಲೇ ರೋಗಿಗಳನ್ನು ಅರಿಯುವ, ಚಿಕಿತ್ಸೆ ನೀಡುವ, ಇವರ ಅನುಭವ ಬೆಳೆಯುತ್ತಾ ಹೋಯಿತು. ಹೀಗೆ ಅವರ ರೋಗಿಗಳ ಸಂಖ್ಯೆಯೂ ದ್ವಿಗುಣವಾದದ್ದು ಮಾತ್ರವಲ್ಲ, ವಿದ್ಯಾರ್ಥಿಯಾಗಿದ್ದಾಗಲೇ ರೋಗಿಗಳನ್ನು ಪರೀಕ್ಷಿಸಿ ತಮ್ಮ ಅನುಭವ ಭಂಡಾರವನ್ನೂ ಹೆಚ್ಚಿಸಿಕೊಂಡರು.

ಈ ಹೊತ್ತಿಗೆ ಅವರು ರೋಟರಿ ಕ್ಲಬ್ ಡಿಸ್ಟ್ರಿಕ್ 317 ಇವರು ಏರ್ಪಡಿಸಿದ್ದ ಗ್ರೂಪ್ ಸ್ಟಡಿ ಎಕ್ಸ್‌ಚೇಂಜ್ ಪ್ರೋಗ್ರಾಂಗಾಗಿ ಅಮೇರಿಕಕ್ಕೆ ಹೋಗಲು ಆರಿಸಿದ್ದ ಐವರು ಪ್ರತಿಭಾವಂತ ವಿದ್ಯಾರ್ಥಿಗಳಲ್ಲಿ ಒಬ್ಬರಾಗಿದ್ದರು. ಐದು ಮಂದಿ (Eligible professionals) ಗಳನ್ನು ವಿದೇಶೀ ಸಂಸ್ಕೃತಿ, ವಿದ್ಯಾಭ್ಯಾಸ

ವಿದ್ಯಾಸ್ಥಾನಗಳನ್ನು ಅರಿಯಲು ಭಾರತೀಯ ಪ್ರತಿನಿಧಿಯಾಗಿ ಈ ಸಂಸ್ಥೆ ಕಳುಹಿಸುವು ದಿತ್ತು. ಇವರ ಅನುಭವ ಭಂಡಾರವನ್ನು ಶ್ರೀಮಂತಗೊಳಿಸುವಲ್ಲಿ ಈ ವಿದೇಶ ಯಾತ್ರೆಯದೂ ಪ್ರಮುಖ ಪಾತ್ರ.

ವಿದೇಶ ವಾಸದ ಸಂದರ್ಭದಲ್ಲಿ Prinston· Ale, Harward, ವಿಶ್ವವಿದ್ಯಾಲನಿಯಗಳಿಗೆಲ್ಲ ಭೇಟಿಯನ್ನಿತ್ತಿದ್ದರು. ತಮ್ಮ ಪ್ರವಾಸದ ಕೊನೆಯ ಒಂದೆರಡು ತಿಂಗಳು ಅಲ್ಲಿ 'ಮನೋವಿಕಲ' ಮಕ್ಕಳ ಶಾಲೆಯಲ್ಲಿ ಕೆಲಸ ಮಾಡಿದರು. 1977–78ರಲ್ಲಿ ರೋಟರಿ ಫೌಂಡೇಶನ್ ಯೋಜನೆಯಲ್ಲಿ ಅಮೇರಿಕಾದ ಕನೆಕ್ಟಿಕಟ್‌ನಲ್ಲಿ ಡಾ॥ ಪೈ ವಿಶೇಷ ವ್ಯಾಸಂಗಕ್ಕೆಂದು ತೆರಳಿದ್ದರು. ಅಲ್ಲಿಯ ಬಹುದೊಡ್ಡ ಬುದ್ಧಿಮಾಂದ್ಯ ಶುಶ್ರೂಷಾ ಕೇಂದ್ರ 'ಸ್ಟೇಟ್ ರೇಜಿಯಲ್ಸ್ ಹಾಸ್ಪಿಟಲ್'ನಲ್ಲಿ ಕೆಲಕಾಲ ವಿಶೇಷ ಅಭ್ಯಾಸ ನಡೆಸಿದರು. ಬುದ್ಧಿಮಾಂದ್ಯರಿಗೆ ವೈಜ್ಞಾನಿಕ ರೀತಿಯಲ್ಲಿ ಚಿಕಿತ್ಸೆ ಮಾಡುವುದನ್ನು ಅವರು ಅಲ್ಲೇ ಕಲಿತರು.

ಈ ಅನುಭವವೇ ಮುಂದಕ್ಕೂ ಅವರು ಶಿವಮೊಗ್ಗದಲ್ಲಿ 'ಆಶಾಕಿರಣ ಪ್ರಾರಂಭಿಸಲು ಪ್ರೇರಣೆಯಾಯಿತು. ಡಾಕ್ಟರ್ ವೃತ್ತಿಯಲ್ಲಿನ ಚಾಕಚಕ್ಯತೆ ಇವರಿಗೆ ವಿದೇಶದಲ್ಲೂ ಐದು ವರ್ಷ ನೆಲೆಗೊಳಿಸುವಂತಹ ಅವಕಾಶವನ್ನೂ ತಂದುಕೊಟ್ಟಿತು. ವಿದೇಶದಲ್ಲಿ ನೆಲೆಸಲ್ಲುವ ಅವಕಾಶ ಬಂದುದೇನೋ ನಿಜ. ಆದರೆ ಐದು ವರ್ಷಗಳು ಭಾರತವನ್ನು ಬಿಟ್ಟು ತಮ್ಮ ಪ್ರತಿಭೆ ಹಾಗೂ ಸೇವಾ ಅವಕಾಶ ವಿದೇಶೀಯರಿಗೆ ಮಾತ್ರ ನೀಡುವುದು ಡಾ॥ ಪೈಗಳಿಗೆ ಬೇಡವಾದ ವಿಷಯ. ಅದಕ್ಕೆ ಮಿಗಿಲಾಗಿ ಧನಸಂಪಾದನೆ ಪೈಯವರ ಜೀವನದ ಗುರಿಯಾಗಿರಲಿಲ್ಲ. ಇದು ಓದುಗರಿಗೆ ಆಶ್ಚರ್ಯಕರವಾಗಿದ್ದರೂ ಹದಿನಾರಾಣೆ ಸಹಜ ಸತ್ಯಸಂಗತಿ. ಮಾತ್ರವಲ್ಲ ಭಾರತದಂತಹ ಬಡರಾಷ್ಟ್ರದಲ್ಲಿ ಹಳ್ಳಿಗಳ ಜನರು ಸೌಲಭ್ಯ, ಸವಲತ್ತುಗಳಿಂದ ವಂಚಿತರಾದವರು. ಅವರಿಗೆ ಡಾ॥ ಪೈಗಳಂತಹ ಮೇಧಾವಿಗಳ ನೆರವು ಅವಶ್ಯವಾಗಿತ್ತು. ಈ ಧೋರಣೆಯಿಂದಲೇ ವಿದೇಶದಲ್ಲಿ ನೆಲೆಸಲು ಬಂದ ಸುಸಂದರ್ಭವನ್ನು ಡಾ॥ ಪೈಗಳು ತಳ್ಳಿ ಹಾಕಲೇಬೇಕಾಯಿತು.

ವಿದೇಶದಿಂದ ಹಿಂತಿರುಗಿ ಬಂದವರೇ ಅವರು ರೋಟರಿ ಸಂಸ್ಥೆ ಸೇರಿದರು. ಒಬ್ಬನೇ ವ್ಯಕ್ತಿ ಸಮಾಜಸೇವೆ ಮಾಡುವುದಕ್ಕಿಂತ ಒಂದು ಸಂಸ್ಥೆಯ ಹಿನ್ನೆಲೆಯಲ್ಲಿ ಮಾಡಿದರೆ ಅದಕ್ಕೆ ಪ್ರತಿಕ್ರಿಯೆಯೂ ಹೆಚ್ಚು ಎಂದರಿತವರು ಡಾ॥ ಪೈಗಳು. ಹೀಗೆ 1979ರಲ್ಲಿ ಪೈಯವರ ಇನ್ನೊಂದು ಕನಸು 'ಆಶಾಕಿರಣ' ಶಿವಮೊಗ್ಗದಲ್ಲಿ ನನಸಾಯಿತು. ಮಂದಬುದ್ಧಿಯ ಮಕ್ಕಳಿಗಾಗಿ ಹುಟ್ಟಿಕೊಂಡ ಸಂಸ್ಥೆಯೇ 'ಆಶಾಕಿರಣ'. ಮಾನಸಿಕವಾಗಿ ಹಿಂದುಳಿದವ, ಕಿವುಡ, ಮೂಕ, ಕುರುಡ, ಹಿಂದ

ದಿದ್ದ ಸಮಾಜದಲ್ಲಿ ಕೆಲಸ ಕಾರ್ಯ ಮಾಡಿಕೊಂಡು ಜೀವಿಸಲು ಅನರ್ಹವೆನಿಸಿದ್ದ ಮಕ್ಕಳಿಗಾಗಿಯೇ ಈ 'ಆಶಾಕಿರಣ'. ಇವರ ಬಾಳಿನ ಭಯಾನಕ ಕತ್ತಲನ್ನು ಬಡಿದೋಡಿಸಿ ಆಶೆ ಎಂಬ ಕಿರಣ ಮೂಡಿಸಲು ಹುಟ್ಟಿದ 'ಆಶಾಕಿರಣ' ಈ ಮನೋವಿಕಲರಿಗೆ ಒಂದು ವರದಾನವಾಯಿತು.

'ಬುದ್ಧಿಮಾಂದ್ಯತೆ ಒಂದು ರೋಗವಲ್ಲ. ಅದು ಬುದ್ಧಿ ವಿಕಾಸವಾಗದೆ ಕುಂಠಿತಗೊಳ್ಳುವ ಸ್ಥಿತಿ. ಇದರ ಪರಿಹಾರಕ್ಕೆ ತರಬೇತಿ, ಮನೋವೈದ್ಯರ ಮಾರ್ಗದರ್ಶನ ಎಲ್ಲವೂ ಅಗತ್ಯ. ಇದು 'ಆಶಾಕಿರಣ'ದ ಉದ್ದೇಶ" ಎನ್ನುತ್ತಾರೆ ಡಾ॥ ಪೈ.

ಮೂವತ್ತೈದಕ್ಕೂ ಹೆಚ್ಚಿನ ಈ ಮಕ್ಕಳು (ಏಳರಿಂದ ಹದಿನೆಂಟು ವರ್ಷದವರುಗಳು) ಡಾ. ಪೈಗಳಲ್ಲೇ ತಮ್ಮ ಭಾಗದ ದೇವರನ್ನು ಕಂಡುಕೊಳ್ಳುತ್ತಿದ್ದಾರೆ. ಮನೆಯಲ್ಲಿ ನೋಡಿಕೊಳ್ಳಲಾಗದ ಈ ಪರಾವಲಂಬಿ ಮಕ್ಕಳನ್ನು ಇಲ್ಲಿಗೆ ತಂದು ಸೇರಿಸಿ ತಾಯ್ತಂದೆಯರು ನಿರ್ಭಯದಿಂದಿರಲು ಅವಕಾಶ ಒದಗಿಸಿಕೊಟ್ಟಿದ್ದಾರೆ ಡಾ॥ ಪೈ. ಒಬ್ಬ ವಿದ್ಯಾರ್ಥಿಗೆ ತಿಂಗಳಿಗೆ 150 ರಿಂದ 200 ರೂ.ಗಳವರೆಗೆ ವೆಚ್ಚವಾಗುತ್ತಿದೆ. ಈಗ ಸರ್ಕಾರವೂ ಈ ಶಾಲೆಯ ಪ್ರಗತಿಯನ್ನು ಕಂಡು ಧನ ಸಹಾಯವನ್ನು ನೀಡುವಲ್ಲಿ ಮುಂದೆ ಬಂದಿದೆ.

ರೋಟರಿ ಎಪ್ಪತ್ತೈದನೆಯ ವಾರ್ಷಿಕ ವತ್ತಿ ನಿಧಿ ಸ್ಮಾರಕ ಆಶ್ರಯದಲ್ಲಿ ಬುದ್ಧಿಮಾಂದ್ಯರ ವಸತಿ ಶಾಲೆ ನಗರದ ಗದ್ದಲಕ್ಕೆ ದೂರವಾದ ಸ್ಥಳದಲ್ಲಿ. ತನ್ನದೇ ಸುಸಜ್ಜಿತ ಕಟ್ಟಡದಲ್ಲಿ ವಿಶಾಲವಾದ ಬಯಲಿನೊಂದಿಗೆ ತಲೆಯೆತ್ತಿ ನಿಂತಿದೆ.

ಇದು ಇಡೀ ಕರ್ನಾಟಕದಲ್ಲೇ ಏಕಮೇವಾದ್ವಿತೀಯ (ಸಿವಿಲ್ ಸರ್ವೀಸ್ ಹೊರತುಪಡಿಸಿ) ಬುದ್ಧಿಮಾಂದ್ಯರಿಗಾಗಿ ರೆಸಿಡೆನ್ಶಿಯಲ್ ಶಾಲೆ ಖಾಸಗಿ ನೆಲೆಯಲ್ಲಿ– ಇದೊಂದೇ.

ಈ ಮಕ್ಕಳು ಇಲ್ಲಿ ಪ್ರಾಪ್ತ ವಯಸ್ಕರಾದ ಬಳಿಕ, ಅವರಿಗೆ ತಮ್ಮ ತಮ್ಮ ಜೀವನದ ವೆಚ್ಚವನ್ನು ಭರಿಸಲು ಅರ್ಹವಾದ ಕೆಲಸ ಕಲಿಸಲಾಗುತ್ತದೆ. ಮುಂದೆ ಫ್ಯಾಕ್ಟರಿಯಲ್ಲೋ, ಪ್ರೆಸ್ಸಿನಲ್ಲೋ ವೃತ್ತಿಪರ ಕೆಲಸ ಮಾಡಲು ಅವರಿಗೆ ಕಲಿಸಲಾಗುತ್ತದೆ.

ಚಿಕಿತ್ಸಾ ವಿಧಾನದಲ್ಲಿ ಆಟದ ಮೂಲಕ ಚಿಕಿತ್ಸೆ ಹಾಗೂ ವೃತ್ತಿಪರ ಶಿಕ್ಷಣಕ್ಕೆ ಆದ್ಯತೆ ನೀಡಲಾಗುವುದು. ವೃತ್ತಿಪರ ಶಿಕ್ಷಣ ಪಡೆಯುವ ಬುದ್ಧಿಮಾಂದ್ಯ

ಹುಡುಗ ಕ್ರಮೇಣ ಸ್ವಾವಲಂಬಿಯಾಗಲು ಸಾಧ್ಯ. ಬುಟ್ಟಿ ಹೆಣೆಯುವುದು, ಊದುಬತ್ತಿ, ಬೆಂಕಿಪೆಟ್ಟಿಗೆಗಳನ್ನು ಮಾಡುವುದು, ಸಾಮಾನುಗಳನ್ನು ಕಟ್ಟುವುದು, ಅಚ್ಚು ಮೊಳೆ ಜೋಡಿಸುವುದು—ಇಂತಹ ವೃತ್ತಿಪರ ಚಿಕಿತ್ಸಾಕ್ರಮ ಸ್ವಾವಲಂಬನೆಗೆ ಸಹಕಾರಿ. ಸಾಮಾನ್ಯ ಮಕ್ಕಳು ಒಂದು ವರ್ಷದಲ್ಲಿ ಕಲಿಯುವುದನ್ನು ಈ ಮಕ್ಕಳು ಐದು ಅಥವಾ ಆರು ವರ್ಷಗಳಲ್ಲಿ ಕಲಿಯುತ್ತಾರೆ.

ಮಕ್ಕಳಿಗಿಂತ ಮಿಗಿಲಾಗಿ ಅವರ ಪೋಷಕರಿಗೆ ಶಿಕ್ಷಣ ನೀಡಬೇಕಾದ ಅವಶ್ಯಕತೆಯಿದೆ. 'ಆಶಾಕಿರಣ'ದ ಗುರಿ ಇದೇ ಎಂದು ಪೈ ಹೇಳುತ್ತಾರೆ. ಮಕ್ಕಳಿಗೆ ತಮ್ಮ ಕೆಲಸ ತಾವೇ ಮಾಡಲು ಕಲಿಸಲಾಗುತ್ತದೆ. ಅವರ ದೈಹಿಕ ನ್ಯೂನತೆಗೆ ಅನುಗುಣವಾಗಿರುವ ಅವರ ಮಾನಸಿಕ ಮಟ್ಟ ಐ. ಕ್ಯು. (Intelligent Quotient) ಅರಿತು ಅವರಿಗೆ ಕೆಲಸ ಕಾರ್ಯಗಳನ್ನು ಕೊಡುತ್ತಾರೆ. ಮಕ್ಕಳ ಪ್ರಗತಿ ಬಗ್ಗೆ ತಾಯಿ ತಂದೆಯರಿಗೆ ಪತ್ರ ಮುಖೇನ ಬರೆದು ತಿಳಿಸಲಾಗುತ್ತಿದೆ.

ಚಿಕಿತ್ಸೆಯ ಮೂಲ ತತ್ವಗಳನ್ನು ಹೀಗೆ ಸ್ಥೂಲವಾಗಿ ಮೂರು ವಿಭಾಗಗಳಾಗಿ ವಿಂಗಡಿಸಬಹುದು. ಮೊದಲನೆಯದು, ತಂದೆತಾಯಿಗಳಲ್ಲಿ ಮಕ್ಕಳ ಬುದ್ಧಿಮಾಂದ್ಯತೆಯ ಬಗ್ಗೆ ಅರಿವು ಮೂಡಿಸುವುದು. ಎರಡನೆಯ ವಿಧಾನ. ಪಂಚೇಂದ್ರಿಯಗಳಿಗೆ ಹೆಚ್ಚಿನ ಪ್ರಚೋದನೆ ಒದಗಿಸುವುದು ಹಾಗೂ ಮನಸ್ಸಿನ ಕ್ರಿಯಾಸೂಚಿಗಳಿಗೆ ಮತ್ತು ಮಾಂಸಖಂಡಗಳಿಗೆ ಚಟುವಟಿಕೆಯಲ್ಲಿ ಹೊಂದಾಣಿಕೆ ಮೂಡಿಸುವುದು. ಮಗು ಕಲಿತ ಅಥವಾ ಮಾಡಿದ ಸಣ್ಣ ಪುಟ್ಟ ಕೆಲಸಕ್ಕೂ ಉತ್ತೇಜನ ನೀಡಿ ಕ್ರಿಯಾಶೀಲತೆಗೆ ಆಕರ್ಷಿಸುವುದು ಮೂರನೆಯ ವಿಧಾನ.

ಇಷ್ಟು 'ಆಶಾಕಿರಣ'ದ ಕಾರ್ಯವ್ಯಾಪ್ತಿ. ಸಮಾಜಕ್ಕೆ ಭಾರವೆನಿಸಿದ ಈ ಮಕ್ಕಳ ಆರೈಕೆ–ಪೋಷಣೆ–ಆಹಾರ–ವಿಹಾರ ಎಲ್ಲವನ್ನೂ 'ಆಶಾಕಿರಣ'ವೇ ವಹಿಸಿಕೊಳ್ಳುತ್ತದೆ. ಎಷ್ಟಿದ್ದರೂ ತಮ್ಮ ಕಾಲಮೇಲೆ ತಾವು ನಿಲ್ಲಲು ಅವರಿಗೆ ಅವಕಾಶ ಮಾಡಿಕೊಡುವ ಈ 'ಆಶಾಕಿರಣ' ಅನ್ವರ್ಥವಾಗಿ ಅವರ ಬಾಳಿಗೆ ಆಶಾಕಿರಣವೇ ಸರಿ. ಇಂದು ಪ್ರೇಕ್ಷಕರಿದಿರು ನಿಂತು ತಮಗೆ ತಿಳಿದ ಚಟುವಟಿಕೆಯನ್ನು ಮಾಡಿ ತೋರಿಸಲು ಮುಂದೆ ಬರುವ ಈ ಮಕ್ಕಳ, ಅವರ ಹೆತ್ತವರ ದೃಷ್ಟಿಯಲ್ಲಿ ಡಾ. ಅಶೋಕ ಪೈ ಸಾಕ್ಷಾತ್ ದೇವರು. 'ಆಶಾಕಿರಣ'ಕ್ಕೆ ಡಾ. ಪೈಗಳ ಆಗಮನವಾದೊಡನೆ ಅವರೊಂದಿಗೆ ಕಲಿತು ನಲಿಯುವ ಈ ಮಕ್ಕಳನ್ನು ಕಂಡಾಗ ಸಮಾಜಕ್ಕೆ ಎಂತಹ ಕೊಡುಗೆ ಡಾ. ಪೈಗಳಿಂದಾಗಿದೆ ಎಂದು ತಿಳಿಯಬಹುದು. ಕಣ್ಣೆದುರೇ ಪ್ರತ್ಯಕ್ಷವಾಗಿ ಕಾಣುವ ಈ ಸಮಾಜ ಸೇವೆ ಜಗತ್ತಿನ ಎಲ್ಲಾ ಸೇವೆಗಳಿಗಿಂತ ಮಿಗಿಲಾದದ್ದು ಎಂದರೆ ಅತಿಶಯೋಕ್ತಿ ಅಲ್ಲ.

ಆರ್ಥಿಕ ಅಡಚಣೆಯದು. ಇಂದಲ್ಲ ನಾಳೆ ಉದಾರಿಗಳ ಗಮನ ನಮ್ಮೆಡೆಗೆ ಹರಿದೀತು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಕೊಡುಗೈ ಸಂಸ್ಥೆಗಳ ಗಮನ-ಪುರಸ್ಕಾರ ಧನಸಹಾಯ ನಮಗೆ ದೊರಕೀತು."

'ಮಾನಸ' ಪೈಗಳ ಸಾಧನೆಯ ಇನ್ನೊಂದು ಮೈಲಿಗಲ್ಲು. ಇದ ಕರ್ನಾಟಕದಲ್ಲಿ ಮಾನಸಿಕ ರೋಗಿಗಳ ಚಿಕಿತ್ಸೆಗೆಂದೇ ಸಂಪೂರ್ಣವಾಗಿ ಮೀಸಲಾದ ಮಾತ್ರ ಚಿಕಿತ್ಸಾಲಯವೇ 'ಮಾನಸ'. ಡಾ. ಅಶೋಕ್ ಪೈ ಹಾಗೂ ಅವರ ಶ್ರೀಮ ರಜನಿ ಪೈ ಇದರ ಎರಡು ಕಣ್ಣುಗಳು.

1975ರಲ್ಲಿ ಶಿವಮೊಗ್ಗದ ಮೆಗ್ಗಾನ್ ಆಸ್ಪತ್ರೆಯಲ್ಲಿ ಐದು ವರ್ಷಗಳಷ ಕಾಲ ಸೇವೆ ಸಲ್ಲಿಸಿದವರಾದ ಇವರಿಬ್ಬರು ಮಾನಸಿಕ ರೋಗಿಗಳಿಗೆ ಸಕಾಲಕ್ಕೆ ತ ಚಿಕಿತ್ಸೆ ನೀಡುವ ಅವಕಾಶವಿಲ್ಲದೆ ಕಾರ್ಯವಿಳಂಬವಾಗಿ ರೋಗಿಗಳು ನರಳುವ ವ್ಯ ಡಾ. ಪೈಯವರನ್ನು ಕಂಗೆಡಿಸಿತ್ತು. ಹೀಗೆ ನವೆಂಬರ್ 1979ರಲ್ಲಿ 'ಮಾನಸ ಡಾ. ಪೈಗಳ–ಮಾನಸ ಶಿಶುರೂಪ ತಳೆಯಿತು. ತಮ್ಮ ನಿವಾಸದ ಪಕ್ಕದಲ್ಲ ರೋಜಾ ಹೂವಿನ ತೋಟ. ಡಾಕ್ಟರ್ ಪೈಗಳ ತಾಯಿಯವರ ಕೈಗೂಸು ಅದ ಆಕೆಯನ್ನು ಒಪ್ಪಿಸಿ ಹದಿನೂರು ಹಾಸಿಗೆಗಳ ಒಂದು ಆಸ್ಪತ್ರೆಯನ್ನು ಕಟ್ಟಿಸಿಯೆ ಬಿಟ್ಟರು ಡಾ. ಪೈ. ಚಿಕ್ಕಂದಿನ ತಮ್ಮ ಕನಸನ್ನು ಭವ್ಯವಾಗಿ ನೆಲೆಯೂರಿಸಿದರು.

ಮನೋವಿಜ್ಞಾನದ ಬಗ್ಗೆ ಮಾತನಾಡುತ್ತಾ ಡಾ. ಪೈ ಹೀಗೆನ್ನುತ್ತಾರ "Psychology is a main human discipline. The differen side effect of modernisation is tension. You can sooth people by talking. You can solve this across th table. Sit-relax-talk and analyse."

ಮನುಷ್ಯನ ಮನಸ್ಸಿಗೆ ಮೂರು ಪ್ರವೃತ್ತಿಗಳು. : 1. ಸಹಜಪ್ರವೃತ್ತಿ (Id). 2. ಸ್ವಾರ್ಥ ಪ್ರವೃತ್ತಿ (ego) 3. ನೈತಿಕ ಪ್ರವೃತ್ತಿ (super ego [illegible] ಶರೀರ ವ್ಯವಸ್ಥೆಯನ್ನು ನಿಯಂತ್ರಿಸುತ್ತವೆ. ಈ ಮೂರು ಪ್ರವೃತ್ತಿ [illegible] ಮನಸ್ಸು ಒಂದು ರೀತಿಯಲ್ಲಿ ವರ್ತಿಸುವಂತೆ ಮತ್ತು ಸುಪ್ತ [illegible] ಬೇರೊಂದು ರೀತಿಯಲ್ಲಿ ವರ್ತಿಸುವಂತೆ ಮಾಡುತ್ತವೆ. ಜಾಗ್ರತ ಮನಸ್ಸು [illegible] ಇತರ ಜನರನ್ನು ಗಣನೆಯಲ್ಲಿಟ್ಟುಕೊಂಡು ವ್ಯವಹರಿಸುತ್ತದೆ. ಸಿಟ್ಟು [illegible] ಭೀತಿ, ಆತಂಕಗಳಿಂದ ತುಂಬಿದ ಅಜಾಗ್ರತ ಮನಸ್ಸು ದುರ್ಬಲಗೊಂಡಾಗ ಆತನ ಅಂಕೆ ಮೀರಿ ಪ್ರಕಟಗೊಳ್ಳುತ್ತದೆ. ಇದೇ ಮನೋರೋಗ. ಈ ರೋಗ

ಲವನ್ನು ಪತ್ತೆ ಹಚ್ಚಿ ಅದಕ್ಕೆ ತಕ್ಕ ಉಪಶಮನ ನೀಡಬಲ್ಲಾತನೇ ಮನೋರೋಗ

ದೈಹಿಕ ರೋಗಗಳಿಗೆ, ದೇಹಕ್ಕೆ ಮಾತ್ರ ಚಿಕಿತ್ಸೆ ನೀಡಬೇಕಾಗುತ್ತದೆ. ರೆ ಮನೋರೋಗಕ್ಕೆ ದೇಹಕ್ಕೂ-ಮನಸ್ಸಿಗೂ ಚಿಕಿತ್ಸೆಯ ಅವಶ್ಯಕತೆ ಇದೆ. ದ್ಯಾವಂತ ಮನೋರೋಗಿ ತನಗೆ ಒದಗಿದ ಇಂತಹ ಮನೋರೋಗವನ್ನು ದೇವರ ಶವೆಂದೋ, ದೆವ್ವದ ಪೆಟ್ಟೆಂದೋ ತಿಳಿದು ಅದಕ್ಕೆ ಸಕಾಲದಲ್ಲಿ ಚಿಕಿತ್ಸೆ ಮಾಡಿಸಲು ಗುವುದಿಲ್ಲ. ಮೂಢನಂಬಿಕೆಗಳಿಗೆ ಬಲಿಯಾದ ಇಂತಹ ರೋಗಿಗಳಿಗೆ ರೋಗ ಣವಾದ ಬಳಿಕ ಶಾರೀರಿಕ ಚಿಕಿತ್ಸೆ ನೀಡಿದರೆ ಅದು ನಿಲ್ಲುವುದಿಲ್ಲ. ಈಗ ಆತನಿಗೆ ಕ್ ಚಿಕಿತ್ಸೆ (ECT) ನೀಡಲೇಬೇಕಾಗುತ್ತದೆ. ಈ ಚಿಕಿತ್ಸೆ ಆತನ ಉದ್ವೇಗ ಂಡ ಮೆದುಳಿನ ಕಣಗಳನ್ನು ನಮ್ನಸ್ಥಿತಿಗೆ ತಂದು ರೋಗಿಯ ಬಾಹ್ಯ ರ್ನೆಯನ್ನು ಅಂಕೆಯಲ್ಲಿಡುತ್ತದೆ.

ಮೂಢನಂಬಿಕೆಗಳಿಗೆ ಬಲಿಯಾಗಿ ಬರುವ ರೋಗಿಗಳ ಸಂಖ್ಯೆಯೇ ಕ್ಕೆ ಸಿಗದು. ಸಾಮಾಜಿಕ ಬದಲಾವಣೆಯಾಗದ ಹೊರತು ಅವೈಜ್ಞಾನಿಕ ಢನಂಬಿಕೆಗಳು ಹೋಗುವುದಿಲ್ಲ. ಡಾ. ಪೈಯವರು ಸುಮಾರು ಐನೂರಕ್ಕೂ ನ ಸಾರ್ವಜನಿಕ ಸಭೆಗಳಲ್ಲಿ ಈ ಬಗ್ಗೆ ಮಾತನಾಡಿ ಜನಮನದಲ್ಲಿ ಜಾಗೃತಿಯನ್ನು ಟುಮಾಡಲು ಯತ್ನಿಸುತ್ತಿದ್ದಾರೆ. ಈ ದಿಶೆಯಲ್ಲಿ ಪ್ರತಿಯೊಬ್ಬ ವಿದ್ಯಾವಂತ ಜೆಯ ಕರ್ತವ್ಯವನ್ನು ಅವರು ಜ್ಞಾಪಿಸುತ್ತಾರೆ.

ಒಬ್ಬ ಮನೋರೋಗಿಯ ರೋಗ ಪತ್ತೆಹಚ್ಚುವಲ್ಲೇ ಮನೋರೋಗ ನ ಪರಿಣತಿ ಇರುವುದು. ಮೊತ್ತಮೊದಲು ವೈದ್ಯ ರೋಗಿಯ ಪ್ರಾಯ, ಭ್ಯಾಸ, ಉದ್ಯೋಗ, ಸಾಮಾಜಿಕ ಸ್ಥಿತಿಗತಿ ಎಲ್ಲವನ್ನೂ ವಿಶದವಾಗಿ ಸಂಗ್ರಹಿಸು ನೆ. ಆಕೆಯ ರೋಗದ ತೀವ್ರತೆ ಅರಿತ ಬಳಿಕ ಯಾವ ವಿಧದ ಚಿಕಿತ್ಸೆ ನೀಡಬಹು ದು ಗುರುತಿಸುತ್ತಾನೆ. ಈ ಚಿಕಿತ್ಸೆಗಳಲ್ಲಿ ಮೂರು ವಿಧಗಳಿವೆ.

1. ಔಷಧಗಳಿಂದ ಗುಣಮುಖಗೊಳಿಸುವುದು. ಇದು ದೈಹಿಕ ಚಿಕಿತ್ಸೆ.
2. ಮನಸ್ಸಿಗೂ-ದೇಹಕ್ಕೂ ಚಿಕಿತ್ಸೆ ನೀಡುವುದು.
3. ಮನಸ್ಸಿಗೆ ಮಾತ್ರ ಚಿಕಿತ್ಸೆ ನೀಡುವುದು.

ಔಷಧಗಳಿಂದ ಗುಣಪಡಿಸಬಹುದಾದ ರೋಗಿಗೆ ರೋಗದ ತೀವ್ರತೆ ರುವುದಿಲ್ಲ. ಆತ ಆಗ ತಾನೇ ರೋಗಕ್ಕೆ ಬಲಿಯಾಗಿರಬಹುದಷ್ಟೆ. ಡಾಕ್ಟರ ರ

ವಿಶ್ವಾಸಪೂರ್ಣ ಮಾತಿನಿಂದ ಆತ ಧೈರ್ಯ ತುಂಬಿ ಹಾಗೂ ಔಷಧದ ಕ್ರಮವಾ ಸೇವನೆಯಿಂದ ಮಾನಸಿಕ ಉದ್ವೇಗದಿಂದ ಹೊರಬರುತ್ತಾನೆ.

ಎರಡನೆಯ ಚಿಕಿತ್ಸೆಯಲ್ಲಿ ದೇಹದೊಂದಿಗೆ ಮನಸ್ಸಿಗೂ ಔಷಧಿ ನೀ ಬೇಕಾಗುತ್ತದೆ. ಮನೋರೋಗಿಗಳಿಗೆ ಅರಿವಳಿಕೆಯ ಚುಚ್ಚುಮದ್ದನ್ನು ನೀಡಿ ಆ ನನ್ನು ಸುಪ್ತಾವಸ್ಥೆಗೆ ಕರೆದೊಯ್ದು ಮನೋರೋಗತಜ್ಞ ಆತನ ಸುಪ್ತ ಮನಸಿ ನೊಂದಿಗೆ ಸಂಭಾಷಿಸುತ್ತಾನೆ. ಆತನ ರೋಗದ ಹಿನ್ನೆಲೆ ಅರಿತುಕೊಳ್ಳುತ್ತಾನೆ.ಅದ ತಕ್ಕ ಚಿಕಿತ್ಸೆ ನೀಡುತ್ತಾನೆ.

ಮೂರನೆಯ ರೀತಿಯ ಚಿಕಿತ್ಸೆಯಲ್ಲಿ ರೋಗಿ ತನ್ನ ದೇಹದ ಮೇಲಿ ಪ್ರಭುತ್ವವನ್ನು ಸಂಪೂರ್ಣ ಕಳೆದುಕೊಂಡಿರುತ್ತಾನೆ. ಆಗ ಆತನ ಮೇಲೆ ಔಷ ಗಳು ಪರಿಣಾಮ ಬೀರುವುದಿಲ್ಲ. ಹಾಗಾಗಿ ವಿದ್ಯುತ್ ಕಂಪನ ಚಿಕಿತ್ಸೆ ನೀಡಬೇಕಾ ತ್ತದೆ. ಉದ್ವೇಗಗೊಂಡ ಮೆದುಳಿನ ನರಗಳಿಗೆ ವಿದ್ಯುತ್ ಹರಿಸಿ ರೋಗಿಯನ ಶಾಂತಸ್ಥಿತಿಗೆ ತರಬೇಕಾಗುತ್ತದೆ.

ತಮ್ಮ ಹದಿನೈದು ವರ್ಷಗಳ ಈ ಸತತ ಅನುಭವ ಡಾ. ಅಶೋಕ್ ಯವರಿಗೆ ರೋಗ ಪತ್ತೆಹಚ್ಚುವಿಕೆಯಲ್ಲಿ ಅಪಾರ ಪರಿಣತಿಯನ್ನು (experienc ತಂದುಕೊಟ್ಟಿದೆ.

ತಮ್ಮ ಜೀವನದಲ್ಲಿ ಅತೀ ಪ್ರಭಾವ ಬೀರಿದ ಘಟನೆಯನ್ನೂ. ಅ ಮನೋರೋಗ ತಜ್ಞನಾಗುವ ತಮ್ಮ ಕನಸನ್ನು ಛದ್ರಪಡಿಸಿದ್ದನ್ನೂ. ಅವರು ನೆ ತ್ತಾರೆ. ತಮ್ಮ ತಂದೆಯ ಕಕ್ಷಿಗಾರರೊಬ್ಬರು ಸಂಸಾರದ ಸಮಸ್ಯೆಯಿಂದ ಮುಕ್ತಿ ರಾ ಕಲ್ಲು ಹೊಡೆಸಿಕೊಂಡು ಮೃತರಾದ ಘಟನೆ ಇವರನ್ನು ವಿಚಲಿತಚಿತ್ತರನ್ನಾಗಿ ಮಾ ಸಿತ್ತು. ತಮ್ಮ ವೈದ್ಯಕೀಯ ವಿದ್ಯಾಭ್ಯಾಸ ಮುಗಿಸಿದ ಬಳಿಕ ಮುಂದಿನ ಉ ಶಿಕ್ಷಣಕ್ಕೆ ಸೈಕಿಯಾಟ್ರಿಯನ್ನೇ ಆರಿಸಲು ಮತ್ತೊಂದು ಕಾರಣವೂ ಇತ್ತು. ಎಂ. ಬಿ.ಎಸ್.ನ ಮುಂದಿನ ಯಾವ ಶಿಕ್ಷಣಕ್ಕೂ ಮತ್ತೊಮ್ಮೆ ಧನ ಸುರಿಯಬೇಕಾಗಿತ ಸೈಕಿಯಾಟ್ರಿಗಾದರೆ ಸ್ಟೈಪೆಂಡರಿ ಸಿಗುವುದರಿಂದ ಮತ್ತೊಮ್ಮೆ ಮನೆಯವರನ್ನು ಕೆ ಬೇಕಾದ ಪರಿಸ್ಥಿತಿ ತಪ್ಪಿಸಲು ಅವರು ಸೈಕಿಯಾಟ್ರಿಯನ್ನೇ ಆರಿಸಿದರು.

ಅವಿಭಕ್ತ ಕುಟುಂಬದಲ್ಲಿ ಡಾ. ಪೈಯವರಿಗೆ ಅಪರಿಮಿತ ವಿಶ್ವಾಸ. ಅ ಅನುಕೂಲತೆಗಳೇ ಹೆಚ್ಚು ಎನ್ನುತ್ತಾರೆ ಅವರು. ಒಂಟಿ ಕುಟುಂಬದಲ್ಲಿ ಸಾಮಾ ಭದ್ರತೆ ಇದೆ. ಈ ಭದ್ರತೆಯೇ ಉತ್ತಮ ಮನೋರೋಗಿಯಾಗುವುದ

ತಪ್ಪಿಸುತ್ತದೆ. ಸಮಾಜದಲ್ಲಿ ಇಂತಹ ಅವಿಭಕ್ತ ಕುಟುಂಬಗಳು ಈಗಾಗಲೇ ತಕ್ಕ ಮಟ್ಟಿಗೆ ಮರೆಯಾಗುತ್ತಿರುವ ಬಗ್ಗೆ ಅವರು ಕಾಳಜಿ ವ್ಯಕ್ತಪಡಿಸುತ್ತಾರೆ. ಏಕೆಂದರೆ ಒಡೆದು ಹೋದ ಒಟ್ಟು ಕುಟುಂಬಗಳ ಸದಸ್ಯರು Nuclear familyಯನ್ನು ಪ್ರಾರಂಭಿಸುತ್ತಾರೆ, ಇದು ಅವರ ಮಾನಸಿಕ ಸ್ಥಿರತೆಯನ್ನು ಕದಡಿ-ಸಬರ್ಬನ್ ನ್ಯೂರೋಸಿಸ್ ಅನ್ನುವ ಕಾಯಿಲೆಗೆ ಗುರಿಯಾಗಿಸುತ್ತದೆ.

"ಒಬ್ಬ ಮಾನಸಿಕ ರೋಗಿಯನ್ನು ಆತನ ಪೂರ್ವಸ್ಥಿತಿಗೆ ತರುವುದೇವರೆ ಅದು ಆತನಿಗೆ ಪುನರ್ಜನ್ಮವಿತ್ತಂತೆಯೇ ಸರಿ. ಆತ ಸಮಾಜಕ್ಕೆ ಭಾರವಾಗುವುದನ್ನು ತಪ್ಪಿಸಿದಂತೆ : ಆತನ ದುರಂತಮಯವಾಗುತ್ತಿರುವ ಬದುಕಿಗೆ ಹೊಸ ಆಯಾಮ ಕೊಟ್ಟಂತೆ-ಆತನನ್ನು ಮನುಷ್ಯನನ್ನಾಗಿ ಮಾಡುವ, ನೀಡುವ ಸುಖ ಪ್ರಾಪಂಚಿಕ ಐಶ್ವರ್ಯದಿಂದ ದೊರಕುವಂತಹದ್ದಲ್ಲ."

ತಮ್ಮ ರೋಗಿಗಳ ನಡುವೆ ಅವರು ಸರ್ವಸ್ವವನ್ನೂ ಕಂಡುಕೊಳ್ಳುತ್ತಾರೆ. ಅಸಹಾಯಕರಾಗಿ ಬರುವ ಮನೋರೋಗಿಗಳ ಪಾಲಿಗೆ ಆಧಾರ ಸ್ತಂಭ-ದೇವರು ಇವರು. ಇಲ್ಲದಿದ್ದರೆ ಕ್ರೌರ್ಯವೇ ಮೂರ್ತಿವೆತ್ತಂತೆ ಬರುವ ಮಾನಸಿಕ ರೋಗಿಗಳು ಇವರನ್ನು ಕಂಡೊಡನೆ ಕುರಿಗಳಾಗುವುದು ನೋಡಿದರೆ, ಪುನರ್ಜನ್ಮವ ನ್ನೀಯುವ ಇವರು ದೈವಾಂಶ ಸಂಭೂತರೇನೋ ಅನ್ನುವ ಯೋಚನೆಯೂ ಬರುತ್ತದೆ. ತಮ್ಮ ಬಳಿ ಬರುವ ರೋಗಿಗಳು ಡಾಕ್ಟರಲ್ಲಿ ಮನಬಿಚ್ಚಿ ಮಾತನಾಡುತ್ತಾರೆ. ತಮ್ಮ ನಡುವಿನ ಅಂತರ ಮರೆಯುತ್ತಾರೆ. "We dont want relavance or respect. We want fellowship." ಸುಪ್ತಚೇತನ ಎಲ್ಲವನ್ನೂ ಹೊರಗೆಡವುತ್ತದೆ. ರೋಗಿ ನಿರೋಗಿಯಾಗುತ್ತಾನೆ. ಇದಲ್ಲವೇ ಪವಾಡ ? ಇದ ಲ್ಲವೇ ಮಾನವ ಸೇವೆ ?

"ನಿಜ ಜೀವನದಲ್ಲಿ ಎಲ್ಲರೂ ತಮ್ಮ ಮನಸ್ಸಿನಲ್ಲಿರುವುದನ್ನು ಮರೆ ಮಾಚುತ್ತಾರೆ. ಆದರೆ ಈ ರೋಗಿಗಳಿಂದು ಹೆಸರು ಪಡೆದವರಲ್ಲಿ ಅಂತಹ ಕೃತ ಕತೆ ಏನೂ ಇರದೆ ಅವರು ಸಹಜರಾಗುತ್ತಾರೆ. ಹುಚ್ಚರು ಯಾರು ಎನ್ನುವ ಸಂದೇಹ ನನಗೇ ಬರುತ್ತದೆ.ಇಂತಹ ಸಹಜ ರೋಗಿಗಳ ನಡುವೆ ನಾನು ಆರಾಮವಾಗಿರುತ್ತೇನೆ. ಹೊರಗಿನ ಜನರ ಒಡನಾಟಕ್ಕಿಂತ ನನಗೆ ಇದೇ ಪ್ರಿಯ ಎನ್ನುತ್ತಾರೆ" ಡಾ. ಪೈ.

ಡಾ. ಪೈಯವರಿಗೆ ತಮ್ಮೆಲ್ಲ ಯೋಜನೆಗಳನ್ನು ಕಾರ್ಯರೂಪಕ್ಕೆ ಇಳಿಸಲು ಧನ ಸಹಾಯವೇನೋ ಅವಶ್ಯ. ರೋಗಿಗಳಿಗೆ ಬೇಕಾದ ಆಸ್ಪತ್ರೆಯೋ, ಆಸ್ಪತ್ರೆ ಸಿಬ್ಬಂದಿಗಳೋ, ECT, EEG ಮೊದಲಾದ ಲಕ್ಷೋಪಲಕ್ಷ ಬೆಲೆಬಾಳುವ ಯಂತ್ರೋಪಕರಣಗಳೋ ಇವೆಲ್ಲವನ್ನು ಒದಗಿಸಲು ಆರ್ಥಿಕ ಸಹಾಯ ಬೇಕೇಬೇಕು.

ಬೆಂಗಳೂರಿನಂತಹ ಮಹಾನಗರಗಳಲ್ಲಿ ECT, EEG ಯಂತಹ ಚಿಕಿತ್ಸೆ ಪಡಕೊಂಡು ಒಬ್ಬ ಮನೋರೋಗಿ ಗುಣಹೊಂದಬೇಕಾದರೆ ಆತ ಕನಿಷ್ಠಪಕ್ಷ ಐದರಿಂದ ಆರು ಸಾವಿರ ರೂಗಳಷ್ಟು ಹಣ ವ್ಯಯಿಸಬೇಕಾಗುತ್ತದೆ. 'ಮಾನಸ'ದಲ್ಲಾದರೋ ಒಂದು ವಾರದ ವಾಸ್ತವ್ಯವನ್ನು ಆಸ್ಪತ್ರೆಯಲ್ಲೇ ಹೂಡಿ ಎಲ್ಲಾ ಚಿಕಿತ್ಸೆಗಳನ್ನು ಮಾಡಿಸಿಕೊಂಡರೂ ಆತ ವ್ಯಯಿಸುವ ಹಣದ ಮೊತ್ತ ಐದುನೂರು ದಾಟಲಿಕ್ಕಿಲ್ಲ. ಈ ಒಂದು ಅಂಕಿ–ಅಂಶಗಳನ್ನು ಕಂಡಾಗ ಡಾ. ಪೈಯವರ ಸೇವಾ ಮನೋಧರ್ಮ ಹೃದಯ ವೈಶಾಲ್ಯತೆ ವ್ಯಕ್ತವಾಗುತ್ತದೆ. ಒಂದು ಲಕ್ಷ ಹತ್ತು ಸಾವಿರ ರೂ. ಬೆಲೆಯ ವಿದ್ಯುತ್ ಯಂತ್ರಗಳನ್ನು ಬ್ಯಾಂಕ್ ಸಾಲದ ಮೂಲಕ ಖರೀದಿಸಿ ಒಂದು ವಿಧದಲ್ಲಿ ಮುಫತ್ತಾಗಿ ಸೇವೆ ನೀಡುವ ಡಾ. ಪೈಯವರ ಹೃದಯ ಶ್ರೀಮಂತಿಕೆಗೆ ಯಾರೂ ಬೆರಗಾಗಲೇಬೇಕು. ಇದುವರೆಗೆ ಡಾ. ಪೈಯವರ ಬಳಿ ಚಿಕಿತ್ಸೆಗೆ ಬಂದ ಕೇಸುಗಳು ಎಪ್ಪತ್ತು ಸಾವಿರಕ್ಕೂ ಮೀರಿದೆ. ಇದೇ ಒಂದು ದಾಖಲೆ. ತಮ್ಮದೇ ಮಾನಸದಲ್ಲಿ ಒಂಬತ್ತು ಸಾವಿರದ ಇನ್ನೂರಕ್ಕೂ ಅಧಿಕ ಮನೋರೋಗಿಗಳನ್ನು ಒಳ–ಹೊರ ರೋಗಿಗಳಾಗಿ ಅವರು ಚಿಕಿತ್ಸೆ ನೀಡಿದ್ದಾರೆ. ಇವತ್ತಿಗೂ ದಿನಾಲೂ ಅರವತ್ತರಿಂದ ಎಪ್ಪತ್ತು ಜನ ಹೊರ ರೋಗಿಗಳಾಗಿ ಬಂದು ಚಿಕಿತ್ಸೆ ಪಡೆಯುತ್ತಾರೆ. 'ಮಾನಸ' ಎಪ್ಪತ್ತು ಹಾಸಿಗೆಗಳಿರುವ ಆಸ್ಪತ್ರೆಯಾದರೂ ಅಲ್ಲಿದ್ದ ಒಳರೋಗಿಗಳ ಸಂಖ್ಯೆ ಎಂಬತ್ತಕ್ಕೂ ಮೀರಿದೆ. ಈ ವಿಷಯದಲ್ಲಿ ಡಾ. ಪೈ ಅಸಹಾಯಕರು. ದೂರ ದೂರದಿಂದ ಬರುವ ರೋಗಿಗಳನ್ನು ಮಾನವೀಯತೆಯ ದೃಷ್ಟಿಯಿಂದ ಅವರು ತಮ್ಮಲ್ಲಿ ಇರಿಸಿಕೊಂಡಿದ್ದಾರೆ.

ಇವರ ಕೆಲಸದ ಭಾರವನ್ನು ಹೆಚ್ಚಿಸುವಂತಹ, ಕ್ಷುಲ್ಲಕ ಕಾರಣಗಳಿಗಾಗಿ ಇವರ ಬಳಿ ಓಡಿ ಬರುವ ವಿದ್ಯಾರ್ಥಿಗಳ ಗುಂಪು. ಇದು ಡಾಕ್ಟರಲ್ಲಿನ ವಿಶ್ವಾಸವನ್ನು ತೋರಿಸುತ್ತದೆ.

ಒಬ್ಬಾಕೆ ಹುಡುಗಿ ಡಾಕ್ಟರನ್ನು ಹುಡುಕಿ ಬಂದವಳು ಅವರನ್ನು ಕಂಡ ವಳೇ ಒಂದೇ ಸಮನೆ ಅಳಲು ಪ್ರಾರಂಭಿಸಿದಳು. ಏಕೆಂದು ಕೇಳಲು–'ನಾನೂ ನನ್ನ ಸ್ನೇಹಿತೆಯೂ ಜ್ಞಾಂಟ್ ಸ್ಟಡಿ ಮಾಡಿ ಪರೀಕ್ಷೆಗೆ ಹೋಗಿದ್ದೆವು.'

"ಸರಿ, ಅವಳು ಪಾಸಾದಳು. ನೀನು ಫೈಲಾದೆ ತಾನೇ ?"

ಅಲ್ಲ. ಅವಳೂ ನನ್ನಂತೇ ಫೈಲು."

'ಹಾಗಾದರೆ ನೀನು ಅಳುವುದೇತಕ್ಕೆ"

"ನಾನು ನಾಲ್ಕರಲ್ಲಿ ಫೈಲು, ಅವಳು ಎರಡರಲ್ಲಿ ಮಾತ್ರ !"

ಇಂತಹ ಬಾಲಿಶ ವಿಕಲತೆಗಳೂ ಡಾಕ್ಟರಿಗೆ ಅವರ ವೃತ್ತಿಯಲ್ಲಿ ಚೇತೋ ಯಾಗಿರುತ್ತವೆ. ಈ ಡಾಕ್ಟರಿಂದ ಚಿಕಿತ್ಸೆ ಮಾಡಿಸಿಕೊಂಡ ರೋಗಿಗಳು ಇಂದು ತದ ಉದ್ದಗಲಕ್ಕೂ ಇದ್ದಾರೆ.

ಮನೋವಿಜ್ಞಾನದಲ್ಲಿ ಸೋಲೆಂಬುದೇ ಇಲ್ಲ. ರೋಗವನ್ನು ಪತ್ತೆ ಚ್ಚುವುದರ ಮೇಲೆ ಅದರ ಗುಣಹೊಂದುವಿಕೆಯು ನಿಂತಿರುತ್ತದೆ. ಇಂತಿಂತಹ ೋಗಕ್ಕೆ ಇಂತಿಂತಹ ಮದ್ದೆಂದು ಡಾಕ್ಟರು ತಿಳಿಸಿವರೂ ಕನಿಷ್ಠ ಪಕ್ಷ ಎರಡು ವರ್ಷ ದರೂ ಈ ಮದ್ದನ್ನು ನಿಯಮಿತವಾಗಿ ತೆಗೆದುಕೊಳ್ಳದಿದ್ದರೆ ರೋಗ ಉಲ್ಬಣ ಗಬಹುದು (relapse).ಎಲ್ಲಕ್ಕಿಂತ ಮಿಗಿಲಾಗಿ follow-upsನಲ್ಲೇ ಮಾನಸಿಕ ೋಗಿಯ ರೋಗ ವಾಸಿಯಾಗುವುದು. ಆತ ಡಾಕ್ಟರಲ್ಲಿ ಪತ್ರ ವ್ಯವಹಾರವನ್ನಿಟ್ಟು ವಾ ಖುದ್ದಾಗಿ ಭೇಟಿಯಾಗಿ ತೆಗೆದುಕೊಳ್ಳಬೇಕಾದ ಮದ್ದಿನ ಪ್ರಮಾಣವನ್ನು ತು ಆ ಪ್ರಕಾರ ನಡೆದುಕೊಳ್ಳತಕ್ಕದ್ದು. ಹಾಗಾಗಿ ರೋಗ ವಾಸಿಯಾಗುವ ಯದಲ್ಲಿ ಗೆಲವು ಎಂದೂ ಡಾಕ್ಟರದ್ದೇ. ಸೋತರೆ ಅದು ರೋಗಿಯ ನಿರ್ಲಕ್ಷ್ಯ ದ. ಈ ಬಗ್ಗೆ ಅಂಕಿ ಅಂಶಗಳ ಸಹಾಯದಿಂದ ಡಾಕ್ಟರ್ ಹೇಳುತ್ತಾರೆ. ತಮ್ಮ ಸ್ಪತ್ರೆಯಲ್ಲಿ ದಾಖಲಾದ ಒಂಬತ್ತು ಸಾವಿರದ ಇನ್ನೂರು ಕೇಸ್‌ಗಳಲ್ಲಿ ಮೂರು ವಿರ ಕೇಸ್‌ಗಳು relapse ಗೊಂಡವುಗಳು. ಈ ಬಗ್ಗೆ ಅವರು ತಮ್ಮ ಅಸಹಾಯ ಯನ್ನು ವ್ಯಕ್ತಪಡಿಸುತ್ತಾರೆ. ಸಹಕಾರ ರೋಗಿಗಳ ಕಡೆಯಿಂದ ಅಧಿಕ ಬರ ಕು.

ಡಾ. ಪೈಗಳು ದಿನನಿತ್ಯ ಬೆಳಿಗ್ಗೆ ಏಳರಿಂದ ರಾತ್ರಿ ಹನ್ನೆರಡು ಗಂಟೆಯ ರೆಗೆ ಆಸ್ಪತ್ರೆಯಲ್ಲೇ ಕಳೆಯುತ್ತಾರೆ. ವಾರದಲ್ಲಿ ಮೂರು ಬಾರಿ ಬಿಡುವು ಮಾಡಿ ಂಡು 'ಆಶಾಕಿರಣ'ಕ್ಕೂ ಭೇಟಿಕೊಡುತ್ತಾರೆ. ಮಕ್ಕಳೊಂದಿಗೆ ಮಕ್ಕಳಾಗುತ್ತಾರೆ. ಳಿದ ಮೂರು ದಿನ ಹೊರರೋಗಿಗಳಿಗೆ ಮೀಸಲಿಡುತ್ತಾರೆ. ಬೆಳಿಗ್ಗೆ ಹತ್ತು ಟೆಗೆ ಪ್ರಾರಂಭವಾಗುವ ಈ ಹೊರರೋಗಿಗಳು ಧಾರವಾಡ, ಬೆಳಗಾವಿ, ಮಂಗ ೂರು, ರಾಜ್‌ಕೋಟ್ ಹೀಗೆ ನಾನಾ ಕಡೆಗಳಿಂದ ಬಂದಿರುತ್ತಾರೆ. ದಿನದ ಬಹು ಲು ಸಮಯ ವ್ಯಯವಾಗುವುದರಿಂದ ಆ ದಿನಗಳಲ್ಲಿ ಒಳರೋಗಿಗಳನ್ನು ನೋಡುವ ಲಸ ಡಾಕ್ಟರ್ ರಜನಿ ಪೈ ಪಾಲಿಗೆ.

ಪತಿಗೆ ತಕ್ಕ ಸತಿ ರಜನಿ ಪೈ. ವಿಚಾರವಂತೆ. ಪತಿಯ ಎಲ್ಲಾ ಸೇವಾ ರ್ಯಗಳಿಗೆ ಬೆಂಗಾವಲಾಗಿ ನಿಂತು ಅಚ್ಚುಕಟ್ಟಾಗಿ, ಡಾ. ಪೈಯವರಿಗೆ ಹೊಯ್‌ಕೈ ಾಗಿ ನಿಲ್ಲುವ ಡಾ. ರಜನಿ ಪೈ ಒಬ್ಬ Anasthesist. ಆಕೆಗೆ ಮನೋರೋಗ ಲ್ಲಿ ಪರಿಣತಿ ಇಲ್ಲದಿದ್ದರೂ ಅನುಭವ ಆಕೆಗೆ ಪೂರ್ಣ ಪ್ರಮಾಣದ ವಿದ್ವತ್ತನ್ನು ಂದುಕೊಟ್ಟಿದೆ. ಇಂದು 'ಮಾನಸ'ಕ್ಕೆ ಬರುವ ಕೈಕಾಲುಗಳಿಗೆ

ಡಾ॥ ಪೈ ಒಬ್ಬರು ಸಮಾಜ ಜೀವಿ. ಸಾಮಾಜಿಕ ತೊಂದರೆಗಳಿಗೆಲ್ಲ ಇವರು ಸ್ಪಂದಿಸುತ್ತಾರೆ. ಪ್ರಕೃತ ವಿದ್ಯಾಭ್ಯಾಸ ಪದ್ಧತಿಯ ಬಗ್ಗೆ ಇವರಿಗೆ ತೀವ್ರ ಅಸಮಾಧಾನವಿದೆ. ನಮ್ಮ ವಿದ್ಯಾಭ್ಯಾಸ ಪದ್ಧತಿಯೇ ಬದಲಾಗಬೇಕು. ಮಹಿಳೆಯರು ಹಿಂದುಳಿಯದೆ ತಾವೂ ವಿದ್ಯಾವಂತರಾಗಿ, ಸ್ವತಂತ್ರರಾಗಿ ಬಾಳಬೇಕು. ಆಗ ಮಾತ್ರ ಅವರು ಮಾನಸಿಕ ತುಮುಲಗಳಿಂದ ವಿಮುಕ್ತರಾಗಬಲ್ಲರು. ಆರ್ಥಿಕ ಪರಾವಲಂಬನೆ ಹಲವು ಮಹಿಳೆಯರಿಗೆ ಮನೋರೋಗಿಗಳಾಗುವಂತೆ ಪ್ರೇರಿಸುತ್ತದೆ.

ನಮ್ಮ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನಗಳ ಬಗ್ಗೆ ಮಾತನಾಡುತ್ತಾ ಡಾ॥ ಪೈ ಹೇಳುತ್ತಾರೆ– ಸ್ತ್ರೀಯರಿಗೆ ಮಾನಸಿಕ ಹಿಂಸೆ ದೌರ್ಜನ್ಯಗಳು ಪುರುಷರಿಗೆ ಹೋಲಿಸಿದರೆ ಎಂದೆಂದೂ ಅಧಿಕತಮ. ಸ್ತ್ರೀಯರೆಲ್ಲರೂ histirical. ಪುರುಷರೆಲ್ಲ aggressive. ಒಬ್ಬ ಸ್ತ್ರೀರೋಗಿ ಡಾಕ್ಟರಲ್ಲಿ ಬಂದು ಆಕೆಯ ಸಮಸ್ಯೆಯನ್ನು ತಿಳಿಸುವ ಮೊದಲು ಒಂದೇ ಸಮನೆ ಅಳಲು ಮೊದಲು ಮಾಡುತ್ತಾಳೆ. ಈ ಅಳು ತನ್ನ ವಿರುದ್ಧ ದಿಕ್ಕಿನಿಂದ ಸಾಂತ್ವನ ದೊರಕಿಸಿಕೊಳ್ಳಲು. ಆಕೆ ತನಗೆ ಅರಿವಿಲ್ಲದಂತೆಯೇ ಭಾವನೆಗಳ ಮಹಾಪೂರ ಹರಿಯಲು ಬಿಡುತ್ತಾಳೆ. ಈ ಕ್ಷಣಗಳಲ್ಲಿ ಡಾಕ್ಟರು ಮೌನವಾಗಿದ್ದು ರೋಗಿಯನ್ನು ವೀಕ್ಷಿಸಿ ಆಕೆಯ ಅಳುವಿನ ರಭಸ ಕಡಿಮೆಯಾಗುವವರೆಗೂ ಕಾಯಬೇಕಾಗುತ್ತದೆ. ಇದಾದ ಬಳಿಕ ರೋಗಿಗೆ, ಒಮ್ಮೆ ಡಾಕ್ಟರರ ಮೇಲೆ ಭದ್ರ ವಿಶ್ವಾಸ ಮೂಡಿತೋ ಇನ್ನುಳಿದ ಕೆಲಸ ಸುಲಭ. ಆಕೆ ತನ್ನೆಲ್ಲ ಮಾನಸಿಕ ವಿಪ್ಲವ ವಿಶದವಾಗಿ ತಿಳಿಸಿ ಚಿಕಿತ್ಸೆ ಪಡೆದು ಹೋಗಬಹುದು. ಇದು ಸ್ತ್ರೀಯರ ವಿಚಾರವಾದರೆ ಪುರುಷ ಕುಲ ಇದಕ್ಕೆ ವ್ಯತಿರಿಕ್ತ. ಆತನ ಆಕ್ರಮಣಕಾರೀ ಪ್ರವೃತ್ತಿಯನ್ನು ಅಂಕೆಯಲ್ಲಿರಿಸುವುದೇ ಕಷ್ಟ. "ನಾನು ಆತನನ್ನು ಕೊಂದೇ ಬಿಡುತ್ತೇನೆ" ಈ ರೀತಿ ಸಹಜ ಪ್ರವೃತ್ತಿಯನ್ನು (Id) ಮೀರಿನಿಂತ ನೈತಿಕ ಪ್ರವೃತ್ತಿ (Super ego)

ಸಾಮೂಹಿಕ ಉನ್ಮಾದ ಚಿಕಿತ್ಸೆ ಇದು ತನ್ನ ಕನಸು ಎನ್ನುತ್ತಾರೆ ಡಾ॥ ಪೈ. ಜನರನ್ನು ಬದಲಾಯಿಸಬೇಕು, ತಿದ್ದಬೇಕು. ಮಾನಸಿಕ ರೋಗಿಗಳ ಮಾಹಿತಿ ನೀಡಬೇಕು. ಯಾವೆಲ್ಲ ಪರಿಸರಗಳು ಈ ರೋಗಕ್ಕೆ ಪ್ರೇರಕ– ಉದ್ದೀಪಕಗಳೆಂದು ತಿಳಿಸಬೇಕು. ಸ್ವಭಾವತಃ ಭಾರತೀಯರು ಸ್ವತಂತ್ರವಾಗಿ ಆಲೋಚಿಸಲೇ ಹೋಗುವುದಿಲ್ಲ. ತನ್ನ ಗುಂಪಿನ ನಾಯಕ ಏನು ಹೇಳುತ್ತಾನೋ ಅದಕ್ಕೆ ತನ್ನನ್ನು ತಾನು ಒಪ್ಪಿಸಿಕೊಂಡು ಬಿಡುತ್ತಾನೆ. ಈ ಪ್ರವೃತ್ತಿ ನಿಲ್ಲಬೇಕು. ಸಾಮಾಜಿಕ ಕಾಳಜಿ ಪ್ರತಿಯೊಬ್ಬನ ಗುತ್ತಿಗೆಯಾಗಬೇಕು. ಚಂದ್ರಗುತ್ತಿಯಲ್ಲಿನ 'ಬೆತ್ತಲೆ ಸೇವೆ' ಇದಕ್ಕೆ ಉತ್ತಮ ಉದಾಹರಣೆ. ದೈವದ ಹೆಸರಿನಲ್ಲಿ ನಡೆಯುವ ಅಮಾನುಷ ಕೆಲಸ ಒಬ್ಬಾಕೆ ಪ್ರಾಯಸ್ಥ ಹುಡುಗಿಗೆ ಹೀಗೆ ವಿವಸ್ತ್ರಳಾಗಿ ಓಡುವುದು ತನಗೆ ಬೇಕಾಗಿರುವು

ದಿಲ್ಲ. ತನ್ನ ಅಸಮ್ಮತಿ ತೋರಿಸಿದರೆ ತನ್ನ ಸ್ವಂತ ತಾಯಿ, ಸಹೋದರಿಯರಿಂದ ಚಿತ್ರಹಿಂಸೆ ಪ್ರಾರಂಭವಾಗುತ್ತದೆ. "ನೀನು ನಿನ್ನ ಮಗುವನ್ನು ಕಳಕೊಳ್ಳುತ್ತೀಯ, ನಿನಗೆ ಬರಬಾರದ ರೋಗ ಬರುತ್ತದೆ, ನಿನ್ನ ಪತಿ ತೀರಿಕೊಳ್ಳುತ್ತಾನೆ, ಮಳೆ–ಬೆಳೆ ಗಳಿಲ್ಲದೆ ಕ್ಷಾಮ ಡಾಮರಗಳು ಬರುತ್ತವೆ, ದೇವಿ ನಿನ್ನ ಮೇಲೆ ಕೋಪಿಸಿಕೊಳ್ಳು ತ್ತಾಳೆ–" ಹೀಗೆ ವಿಪರೀತ ಭಯ ಹುಟ್ಟಿಸಿ ತನ್ನಿಂದಲೇ ತನ್ನ ಪರಿವಾರವೆಲ್ಲವೂ ಕಷ್ಟ ನಷ್ಟ ಅನುಭವಿಸಬೇಕಾಗುತ್ತದೆ ಅನ್ನುವ ವಿಚಾರ ತಿಳಿದ ಬಳಿಕ ಆಕೆ ಊರವರ ಮಾತಿಗೆ ಬಗ್ಗಲೇಬೇಕಾಗುತ್ತದೆ. ಪ್ರವಾಹದ ಇದಿರು ಈಜುವ ಧೈರ್ಯ ಯಾರಿಗಿರು ತ್ತದೆ ? ಹೀಗೆ ದೇವರು ಮೈಮೇಲೆ ಬಂದಂತೆ ಓಡುವ ಈ ಹುಡುಗಿಯರು ದೇಹ ಪರಿವೆ ಇಲ್ಲದಂತೆ ಓಡಿದರೂ ಕಾಲಿಗೊಂದು ಮುಳ್ಳು ಚುಚ್ಚಿದಾಗ ನಿಂತು ಅದನ್ನು ಕಿತ್ತು ಓಡುತ್ತಾರೆ. ಇದೊಂದು ಸಹಜ ಕ್ರಿಯೆ. ಭಕ್ತಿಯ ಪರಕಾಷ್ಠೆಯಲ್ಲಿದ್ದವ ರಲ್ಲಿ ಸಹಜ ಕ್ರಿಯೆ ಇರಲು ಸಾಧ್ಯವೇ ಇಲ್ಲ. ಆಕೆಯ ಮುಳ್ಳು ಕೀಳುವ ಸಹಜ ಕ್ರಿಯೆ ನೋಡಿದರೆ ದೈವ ಆಕೆಯ ಪಾಲಿಗೆ ಅಭಿಶಾಪವಾದಂತೆ ತೋರುತ್ತದೆ.

ಇಂತಹ ಸಾಮಾಜಿಕ ಹೀನ ಕ್ರಿಯೆಗಳು ನಿಲ್ಲಬೇಕು. ಮುಗ್ಧ ಮನ ಸ್ಸನ್ನು ದೈವದ ಕಲ್ಪನೆಯಿಂದ ಭಯಭೀತರನ್ನಾಗಿಸಿ ಸಾಮಾಜಿಕ ಜೀವನದಲ್ಲಿ ಅಸಮ ತೋಲನವಾಗುವುದನ್ನು ತಪ್ಪಿಸಬೇಕು. ಇದು ಡಾ॥ ಪೈಯವರ ಆಕಾಂಕ್ಷೆ. ಸಾಮಾ ಜಿಕ ಮನೋಚಿಕಿತ್ಸೆ ನಡೆಸಬೇಕು. ಒಂದಿಬ್ಬರಿಗೆ ಅಲ್ಲ. ಇಡೀ ಜನಾಂಗಕ್ಕೆ ಅದರ ಬಿಸಿ ತಟ್ಟಬೇಕು. ಸಮಾಜಕ್ಕೆ ತಟ್ಟಿದ ಶಾಪ ನಿಲ್ಲಿಸಬೇಕು. ಇದು ಸಮಾಜವನ್ನು ತಿದ್ದುವ ಕೆಲಸ. ಡಾ॥ ಪೈ ಟೊಂಕ ಕಟ್ಟಿ ನಿಂತಿದ್ದಾರೆ. ಅವರೆಂದೂ ಆಶಾವಾದಿ.

ಜನರ ಮನಸ್ಸಿನಲ್ಲಿ ಆಳವಾಗಿ ಬೇರೂರಿದ ಭಾವನೆಗಳನ್ನು ಹೊರತೆಗೆ ಯುವುದು ಅಷ್ಟು ಸುಲಭದ ಕೆಲಸವಲ್ಲ. ಏನಿದ್ದರೂ ಆತ ಮೊದಲು ನಂಬುವುದು ದೇವರನ್ನು. ದೇವರಿಗೆ ಆತ ಮೊದಲು ಶರಣಾಗುತ್ತಾನೆ. ಮಾಟ–ಮಂತ್ರ– ಭೂತ–ಪ್ರೇತಗಳನ್ನು ಓಡಿಸುವುದು ಎಂದೆಲ್ಲ ರೋಗ ಉಲ್ಬಣವಾಗುವವರೆಗೆ ತನಗೆ ತಿಳಿದ ಪರಿಮಿತಿಯಲ್ಲೇ, ಮೂಢನಂಬಿಕೆಯ ವೃತ್ತದಲ್ಲೇ ತಿರುಗಿ ಕೊನೆಗೆ ಯಾರೋ ಪುಣ್ಯಾತ್ಮರು ದಾರಿತೋರಿಸಿ ಮಾನಸಿಕ ರೋಗ ತಜ್ಞರಲ್ಲಿಗೆ ಬರುತ್ತಾರೆ. ಈಗ ಡಾಕ್ಟರ ಕೆಲಸ ಮತ್ತೂ ಕ್ಲಿಷ್ಟ. ರೋಗಿ–ರೋಗ ಎರಡೂ ಅವರ ಅಂಕೆ ಮೀರಿರು ತ್ತವೆ. ರೋಗಿಯ ಪರೌಢ್ಯತೆಯಿಂದಾದ ಈ ರೋಗದ ಉಲ್ಬಣಾವಸ್ಥೆಗೆ ಅವರು ಅಸಹಾಯಕರಾಗಬೇಕಾಗುತ್ತದೆ. ದೈವದಲ್ಲಿ ಅವರ ನಂಬಿಕೆಯನ್ನು ತಳ್ಳಿಹಾಕು ವಂತಿಲ್ಲ. ಚಿಕಿತ್ಸೆಗೆ ಪ್ರಾರಂಭಿಸಬೇಕಾಗುತ್ತದೆ. ದೇವರಲ್ಲಿಗೆ ಹೋಗಿ–ಆದರೆ ನನ್ನಲ್ಲಿಗೂ ಬನ್ನಿ–ಕ್ರಮವಾಗಿ ಔಷಧಿ ಸೇವಿಸಿ. ಇದು ಡಾ॥ ಪೈಯವರ ಕಳಕಳಿಯ ಪ್ರಾರ್ಥನೆ ಬೇಡಿಕೆ.

ಇಟ್ಟುಕೊಂಡಿರುತ್ತದೆ. ಒಂದೊಮ್ಮೆ ಆತ ಬರಲು ತಪ್ಪಿದರೂ ಆಸ್ಪತ್ರೆಯ ಸಿಬ್ಬಂದಿ ಗಳಿಂದ ಪತ್ರ ರವಾನೆಯಾಗುತ್ತದೆ. ಮರುಭೇಟಿಯ ಎಚ್ಚರವನ್ನು ನೀಡುತ್ತದೆ "ಈ ಮದ್ದುಗಳನ್ನು ನೀನು ತೆಗೆದುಕೊಳ್ಳದಿದ್ದರೆ ನೀನು ಸತ್ತೇ ಹೋಗುತ್ತೀಯಾ" ಎಂದಾದರೂ ಹೆದರಿಸಿ ರೋಗಿಗಳ ಒಳಿತಿಗೇ ಔಷಧ ಸೇವನೆಯ ಪ್ರಾಮುಖ್ಯತೆಯನ್ನು ತಿಳಿಸಲಾಗುತ್ತದೆ.

'ಮಾನಸಿಕ ವಿಕಲತೆ ಸಮಾಜದ ದೌರ್ಜನ್ಯಕ್ಕೆ ಹಿಡಿದ ಕನ್ನಡಿ' ಎಂಬು ದನ್ನು ಡಾ॥ ಪೈ ಒಪ್ಪುವುದಿಲ್ಲ. ಕಳೆದ ಇಪ್ಪತ್ತು ವರ್ಷಗಳಿಂದ ಇಡೀ ಜಗತ್ತಿನಲ್ಲಿ ವ್ಯವಹರಿಸುತ್ತಿರುವ ಅವರು ಸಾಮಾಜಿಕ ಬದಲಾವಣೆಯ ಬಗ್ಗೆ ಆಶ್ಚರ್ಯ ವ್ಯಕ್ತ ಪಡಿಸುತ್ತಾರೆ. ಇಂದು ಒಬ್ಬ ಮನೋರೋಗಿಯನ್ನು ಯಾರೂ ಅಪಹಾಸ್ಯದ ದೃಷ್ಟಿಯಿಂದ ನೋಡುವುದಿಲ್ಲ. ("There is no element of stigma in the society") ವಿದೇಶಗಳಲ್ಲಿ ಮನೋರೋಗ ತಜ್ಞರನ್ನು ಭೇಟಿಯಾಗುವ ದೆಂದರೆ ಅದೊಂದು ಸಾಮಾಜಿಕ ಪ್ರತಿಷ್ಠೆಯ ಸಂಕೇತ. ತಮ್ಮ ತಮ್ಮ ಲೆಕ್ಕ ಪರೀಕ್ಷಕರನ್ನೋ ತೆರಿಗೆಯ ಅಧಿಕಾರಿಯನ್ನೋ ಭೇಟಿಯಾಗುವಂತೆ ಇದು ಒಂದು ಪ್ರತಿಷ್ಠಿತ ಕೆಲಸ. ಅಲ್ಲಿ ಒಬ್ಬ ಮನೋರೋಗತಜ್ಞರು ದಿನಕ್ಕೆ ಕೇವಲ ನಾಲ್ಕರಿಂದ ಆರು ಜನ ರೋಗಿಗಳನ್ನು ನೋಡಿ ವಾರಾಂತ್ಯದ ಎರಡು ದಿನ ವಿಶ್ರಾಂತಿ ಪಡೆಯುತ್ತಾರೆ. ಆದರೆ ಮಾನಸಿಕ ಚಿಕಿತ್ಸಾಲಯಗಳೇ ಇಲ್ಲದ ಭಾರತದಲ್ಲಿ ಒಂದು ಚಿಕಿತ್ಸಾಲಯದಲ್ಲೇ ದಿನಕ್ಕೆ ಅರವತ್ತರಿಂದ ಎಪ್ಪತ್ತು ರೋಗಿಗಳು ಇರುವಾಗ ಡಾಕ್ಟ ರುಗಳ ಅವಶ್ಯಕತೆಯು ಅರಿವಾಗುತ್ತದೆ. ಡಾ॥ ಅಶೋಕ್ ಪೈಗಳ ಬ್ಯಾಚಿನ ಪದಿ ನಾಲ್ಕು ಜನರಲ್ಲಿ ಇವರನ್ನುಳಿದು ಮತ್ತೆಲ್ಲರೂ ವಿದೇಶದಲ್ಲೇ ನೆಲೆಸಿದ್ದಾರೆ. ಇಡೀ ಕರ್ನಾಟಕದಲ್ಲೇ ಇಂದು ಇಪ್ಪತ್ತರಿಂದ ಮೂವತ್ತು ಜನ ಮನೋರೋಗ ತಜ್ಞ ರಿದ್ದಾರೆ. ಭಾರತದ ಇತರ ರಾಜ್ಯಗಳಿಗೆ ಹೋಲಿಸಿದರೆ ಕರ್ನಾಟಕಕ್ಕೆ ಮೊದಲ ಸ್ಥಾನ ಒಂದು ಆಸ್ಪತ್ರೆಯಲ್ಲಿ ಒಂದು ಗೈನಿಕ್ ವಾರ್ಡ್, ಒಂದು ಪೀಡಿಯಾಟ್ರಿಕ್ ವಾರ್ಡ್ ಗಳಿರುವಂತೆ. ಒಂದು ಸೈಕಿಕ್ ವಾರ್ಡ್ ಕೂಡಾ ಕಡ್ಡಾಯವಾಗಿ ಇರಲೇಬೇಕು ಹಾಗಿದ್ದಲ್ಲಿ ಮಾತ್ರ ಜನರು ಈ ಸೌಕರ್ಯದ ಉಪಯೋಗ ಪಡೆಯಬಹುದು.

'ಮಾನಸ'ಕ್ಕೆ ಬರುವ ಯಾವುದೇ ಕೇಸು ಅದು ಮನಸ್ಸಿಗೆ ಸಂಬಂಧ ಪಟ್ಟಂತೆ ಇರುತ್ತದೆ. ಸಾಮಾನ್ಯ ರೋಗಗಳಾಗಲೀ, ಹೆರಿಗೆ ಮೊದಲಾದುವಾಗಲೀ 'ಮಾನಸ'ಕ್ಕೆ ಬಂದರೂ ಅದಕ್ಕೆ ಸಂಬಂಧಪಟ್ಟ ಡಾಕ್ಟರ ಬಳಿಯೇ ಕಳುಹಿಸಲಾಗು ತ್ತದೆ– "The credibility of the discipline will be main tained here" ಎಂದು ಡಾ॥ ಅಶೋಕ ಪೈ ಅಭಿಮಾನದಿಂದ ಹೇಳುತ್ತಾರೆ ಡಾಕ್ಟರುಗಳ ಈ ಸಮಾನ ಸಹೋದರತೆಗಾಗಿಯೇ ಇಂಡಿಯನ್ ಮೆಡಿಕಲ್ ಅಸೋ

ಯೇಶನ್ ಭಾರತೀಯ ಮಟ್ಟದಲ್ಲಿ ಶಿವಮೊಗ್ಗೆಗೆ ಪ್ರಥಮ ಸ್ಥಾನ ನೀಡಿದ್ದಾರೆ. ಅಲ್ಲಿನ ಡಾಕ್ಟರುಗಳ ಬಾಂಧವ್ಯ ಇತರರಿಗೆ ಮಾದರಿಯಾಗಿದೆ.

"ತಮ್ಮ ವೃತ್ತಿ ಜೀವನವಲ್ಲಿ ತಮಗೆ ಸೋಲು ಸಿದ್ಧಿಸಿದೆಯೇ ?" ಈ ಪ್ರಶ್ನೆ ಡಾ॥ ಪೈಗಳ ಅಂತರಾಳದಲ್ಲಿ ಹೆಡೆಯಾಡಿಸಿತ್ತು. ಒಬ್ಬ ಮನುಷ್ಯನ ಗೆಲುವಿನ ಹಿಂದೆ ಕೆಲವಾದರೂ ಸೋಲು ಇದ್ದೇ ಇರುತ್ತದೆ. ತನಗೊದಗಿದ ಸೋಲನ್ನು ಆತ ಯಾವ ರೀತಿಯಲ್ಲಿ ಸ್ವೀಕರಿಸಿದ ಎಂಬುದರ ಮೇಲೆ ಆತನ ಸೋಲಿನ ಪ್ರಮಾಣ ಹೊಂದಿಕೊಂಡಿರುತ್ತದೆ.

ಡಾ॥ ಪೈಗಳಿಗೆ ಪಟ್ಟಣಗಳಲ್ಲಿ ನೆಲೆಸಿ ಅಲ್ಲಿ ತಮ್ಮ ಸೇವಾ ಬಾಹುಗಳನ್ನು ವಿಸ್ತರಿಸಲು ಇಷ್ಟವಿಲ್ಲ. ಹಳ್ಳಿಗಳಲ್ಲಿ ತಮ್ಮ ಅವಶ್ಯಕತೆ ಇದೆ. ವಿದ್ಯೆಯಲ್ಲಿ, ಸೌಲಭ್ಯಗಳಲ್ಲಿ ಹಿಂದುಳಿದ ಹಳ್ಳಿಗರಿಗೆ ಚಿಕಿತ್ಸೆಯನ್ನು ನೀಡಿ ಗುಣಪಡಿಸುವುದರಲ್ಲಿ ಇವರಿಗೆ ಬಹು ವಿಶ್ವಾಸ. ಸಮಾಜ ಸೇವೆಯಲ್ಲೇ ತಮ್ಮ ವೃತ್ತಿ ಕಂಡುಕೊಂಡವರು. ಆದರೆ ಎಂತಹ ಪ್ರತಿಭಾವಂತ ಸಾಹಸಿಗೂ ಸೋಲು ಎಂಬುದು ಇದೆ ತಾನೇ ?

ಮಾನಸಿಕ ರೋಗಿಗಳು ಡಾಕ್ಟರಿಂದ ಚಿಕಿತ್ಸೆ ಪಡೆದು ಆ ಬಳಿಕ ಮರಳಿ ತಮ್ಮ ಕೆಲಸಗಳಿಗೆ, ಅದೇ ಪರಿಸರಕ್ಕೆ ಹಿಂತಿರುಗುತ್ತಾರೆ. ಭಾರತೀಯ ಎಂದಿದ್ದರೂ ಮಣ್ಣಿನ ಮಗ. ಮಣ್ಣಿನೊಂದಿಗಿನ ಆತನ ಸಂಬಂಧ ಅವಿಭಾಜ್ಯ. ಆದ್ದರಿಂದ ಚಿಕಿತ್ಸೆ ನೀಡಿದ ಬಳಿಕ ಭಿನ್ನ ಪರಿಸರವನ್ನು ಸೃಷ್ಟಿಸಿ, ಫಾರ್ಮ್‌ಗಳಲ್ಲಿ ಆತನನ್ನು ಕೆಲಸಕ್ಕೆ ತೊಡಗಿಸಿದರೆ ಹೊಸತೊಂದು ಸ್ನೇಹಮಯ ವಾತಾವರಣವೂ ಲಭ್ಯವಾಗುತ್ತದೆ. ಇದನ್ನು "ಆಗ್ರೋ ಬೇಸ್ಡ್ ಸೈಕೋ ಥೆರಪಿ" ಎಂದು ಕರೆಯುತ್ತಾರೆ.

ಈ ಚಿಕಿತ್ಸೆಯನ್ನು ಕಾರ್ಯರೂಪಕ್ಕೆ ತರಲು ಡಾ॥ ಪೈಯವರು ಶಿವಮೊಗ್ಗೆಯಲ್ಲಿಯೇ ಇಪ್ಪತ್ತು ಕಿ.ಮೀ. ಹೊರಗಡೆ ಇಪ್ಪತ್ತೈದು ಎಕರೆ ಜಮೀನು ಖರೀದಿಸಿ ಮಾನಸಿಕ ಚಿಕಿತ್ಸೆ ಪಡೆದ ರೋಗಿಗಳಾಗಿಯೇ ಮೀಸಲಾಗಿಟ್ಟರು. ಆದರೆ ವ್ಯಾವಹಾರಿಕ ಕಷ್ಟಪರಂಪರೆಗಳು ಯಾವಾಗಲೂ ಮನುಷ್ಯ ಪ್ರಯತ್ನಕ್ಕೂ ಮೀರಿದವು. ಶಿವಮೊಗ್ಗೆಯಿಂದ ದೂರವಿದ್ದ ಈ ಫಾರ್ಮ್‌ಗೆ ಹೋಗಲು ವಾಹನಗಳ ಸೌಕರ್ಯ ಇಲ್ಲದಿರುವಿಕೆ. ಅಲ್ಲಿ ಅವಶ್ಯಕ ಮದ್ದುಗಳ (ಜೀವ ರಕ್ಷಕ ಔಷಧಿಗಳ) ದೊರಕುವಿಕೆಯ ಅಭಾವ. ರೋಗಿಗಳ ನೆಂಟರುಗಳ ವಾಸ್ತವ್ಯದ ಸಮಸ್ಯೆ– ಇವೇ ಮೊದಲಾದ ಘಟಕಗಳಿಂದ ಡಾ॥ ಅಶೋಕ ಪೈಗಳ ಆಗ್ರೋ ಬೇಸ್ಡ್ ಸೈಕೊಥೆರಪಿ ಒಂದು ಯಶಸ್ವೀ ಪ್ರಯೋಗವಾಗಲಿಲ್ಲ.

ಡಾ॥ ಪೈಗಳು ತಮ್ಮ ಸಾಮರ್ಥ್ಯವನ್ನು ಮೀರಿ ರೋಗಿಗಳನ್ನು ಸ್ವೀಕರಿಸುತ್ತಾರೆ. ದಿನಕ್ಕೆ ಹದಿನಾಲ್ಕು ಗಂಟೆ ದುಡಿಯುತ್ತಾರೆ. ಹಾಗೆ ನೋಡಿದರೆ

ಅವರು ತಮ್ಮ ಕೈಲಾಗುವಷ್ಟನ್ನೇ ಮಾಡಿ ಹಾಯಾಗಿರಬಹುದಿತ್ತು. ರೋಗಿಗಳು, ಅದರಲ್ಲೂ ಹಳ್ಳಿಗರಿಗಾಗಿ ಅವರ ಮನ ಮಿಡಿಯುತ್ತದೆ. ಹೃದಯ ಸ್ಪಂದಿಸುತ್ತದೆ. ಹಳ್ಳಿ ಹಳ್ಳಿಗಳ ಜನರಿಗೆ ಈ ಸೇವಾಸೌಲಭ್ಯ ದೊರೆಯಬೇಕು ಎಂದು ತಮ್ಮ ಮೇಲೆಯೇ ಕೆಲಸ ಕಾರ್ಯಗಳನ್ನು ಹೇರಿಕೊಳ್ಳುತ್ತಾರೆ. ಆದರೆ ಆಯಾಸವನ್ನು ಒಪ್ಪಿ ಕೊಳ್ಳಲು ಈ ಆಶಾವಾದಿ ಸಿದ್ಧರಿಲ್ಲ.

ಇಂದು ಅವರು ಬರೆಯುತ್ತಿರುವ ಲೇಖನಗಳೆಲ್ಲ ಮನೋವಿಜ್ಞಾನಕ್ಕೆ ಸಂಬಂಧಪಟ್ಟವುಗಳು. ಮನುಷ್ಯ ದೇಹವನ್ನು ಕುರಿತವುಗಳು. ಇಂದು ಇದ್ದಲ್ಲೇ ಇದ್ದರೂ ಅವರು ಮಾಡುವ ಸೇವಾಕಾರ್ಯಗಳಿಗೆ ಅವರಿಗೆ ಪ್ರಶಸ್ತಿಯೇ ಬರ ಬಹುದು. ಕೀರ್ತಿಯಾಸೆ ಇಲ್ಲದವರಿಗೆ ಪ್ರಶಸ್ತಿಗಳ ಗೊಡವೆ ಏಕೆ? ಇವರ ಮನೋವಿಜ್ಞಾನದ ಬಗ್ಗೆ ಬರೆದ ಒಂದೆರಡು ಲೇಖನಗಳಾದರೂ ಸರಿಯೇ ಅವು ಜಯರಾವ್ ಪ್ರಶಸ್ತಿ ಪಡೆಯಲು ಯೋಗ್ಯತೆ ಉಳ್ಳವುಗಳು. ತಮ್ಮ ಪ್ರಕಟ ಗೊಂಡ ಒಂದೇ ಒಂದು ಲೇಖನ ಇವರು ಇನ್ನೂ ಕಳುಹಿಸದೇ ಇರುವುದು ಆಶ್ಚರ್ಯದ ವಿಚಾರ. ಗುಣಕ್ಕೆ ಮತ್ಸರ ಇದೆಯೇ ? ಪ್ರತಿಭೆ ಇದ್ದಲ್ಲಿ ಪುರಸ್ಕಾರ ಇರಲೇಬೇಕು ತಾನೆ ? 1991ರಲ್ಲಿ ಕಮ್ಯುನಿಟಿ ಸೈಕಿಯಾಟ್ರಿಗಾಗಿ ಡಾ॥ ಪೈ ಅವರಿಗೆ ರಾಜ್ಯೋತ್ಸವ ಪ್ರಶಸ್ತಿ ದೊರಕಿದೆ.

ಸಮಾಜ ಸೇವೆಯ ಕಾರ್ಯಕ್ರಮದಲ್ಲಿ ಇವರ ಮುಂದಿನ ಹೆಜ್ಜೆ ಚಲನ ಚಿತ್ರ ನಿರ್ಮಾಣ. "ಮನುಷ್ಯನ ಪ್ರತಿಯೊಂದು ಚಲನವಲನ ಹಾಗೂ ನಡ ವಳಿಕೆಯನ್ನು ನಮ್ಮ ಮನಸ್ಸು ನಿಯಂತ್ರಿಸುತ್ತದೆ– ಜೀವಿಯ ಸಂತೋಷ ಹಾಗೂ ದುಃಖಕ್ಕೆ ಇದೇ ಕಾರಣ. ನಮ್ಮ ವೃತ್ತಿಯೂ ಇದಕ್ಕೆ ಸಂಬಂಧಿಸಿರುವುದರಿಂದ ಚಲನಚಿತ್ರದಂತಹ ಪ್ರಭಾವೀ ಮಾಧ್ಯಮದ ಮೂಲಕ ಜನರಿಗೆ ಅರಿವು ಮೂಡಿಸು ವುದು ನಮ್ಮ ಉದ್ದೇಶ." ಡಾ॥ ಪೈ ಸಾಮಾಜಿಕ ಹೊಣೆಗಾರಿಕೆಯೊಂದಿಗೆ ನುಡಿ ಯುತ್ತಾರೆ. ತಮ್ಮಲ್ಲೇ ಮಾನಸಿಕ ರೋಗಿಗಳಾಗಿ ಬಂದ ಹಲವು ವ್ಯಕ್ತಿಗಳ ಹಿಂದಿನ ವ್ಯಥೆಯ ಕತೆಗಳಿಗೊಂದು ರೂಪು ಕೊಟ್ಟು ದೂರದರ್ಶನದ ಮೂಲಕ ಬಿತ್ತರಿಸುವುದು ಇವರ ಮುಂದಿನ ಯೋಜನೆ. ಶ್ರವ್ಯಕ್ಕಿಂತ ದೃಶ್ಯ ಎಂದೂ ಪ್ರಬಲ ಮಾಧ್ಯಮ.

ದೂರದರ್ಶನ ಹಾಗೂ ಚಲನಚಿತ್ರಗಳ ಮೂಲಕ ಜನರಲ್ಲಿ ತಿಳುವಳಿಕೆಮೂಡಿಸ ಬೇಕು. ರೋಗಗಳ ಹಿನ್ನೆಲೆ, ಅವಕ್ಕೆ ಕಾರಣ, ಎಲ್ಲವನ್ನು ಜನರು ತಿಳಿಯಬೇಕು. ಮಾನಸಿಕ ರೋಗ ಪ್ರಾರಂಭವಾಗುವ ಪರಿಸರ– ಅದನ್ನು ತಡೆಯಬಹುದಾದಲ್ಲಿ ಕಿವಿಮಾತು ಎಲ್ಲವನ್ನೂ ಜನರಿಗೆ ಅರ್ಥವಾಗುವಂತೆ ತಿಳಿಸಲು ಇರುವ ಏಕಮಾತ್ರ

ಸಾಧನ– ದೂರದರ್ಶನ ಇಲ್ಲವೆ ಚಲನಚಿತ್ರ. ಈಗಾಗಲೇ ತಮ್ಮ ಬಹುಮೂಲ್ಯ ಸಮಯವನ್ನು ಈ ದಿಶೆಯಲ್ಲಿ ಕಾರ್ಯಪ್ರವೃತ್ತರಾಗಿ ವ್ಯಯಿಸುತ್ತಿದ್ದಾರೆ ಡಾ॥ ಪೈಯವರು. ತಮ್ಮ ಕಾರ್ಯಕ್ರಮದ ಫಲಿತಾಂಶವೆಂದರೆ–ಮಾನಸಿಕ ರೋಗದ ಪ್ರಜ್ಞೆ ಹೆಚ್ಚು ಹೆಚ್ಚಾಗಿ ಜನರನ್ನು ತಲುಪಬೇಕು. ಇಂದು ಭಾರತದಲ್ಲಿ ಎಂಟು ಜನರಲ್ಲಿ ಒಬ್ಬನಿಗೆ ಮಾನಸಿಕ ರೋಗ ಚಿಕಿತ್ಸೆಯ ಅವಶ್ಯಕತೆ ಇದೆ. ಉಳಿದವರಲ್ಲಿ ಇಬ್ಬರು ಮಾನಸಿಕ ರೋಗ ತಜ್ಞರನ್ನು ಭೇಟಿ ಮಾಡಬೇಕಾಗುತ್ತದೆ. ಆದರೆ ಖೇದದ ಸಂಗತಿ ಎಂದರೆ ಇಡೀ ಭಾರತದಲ್ಲಿ ಒಂದು ಸಾವಿರಕ್ಕಿಂತ ಅಧಿಕ ಮಾನಸಿಕ ರೋಗತಜ್ಞರು ಇಲ್ಲದೇ ಇರುವುದು.

ಮನೋವಿಜ್ಞಾನಕ್ಕೆ ಸಂಬಂಧಪಟ್ಟ ಹಲವು ಕೃತಿಗಳನ್ನು ಇವರು ಬರೆದಿದ್ದಾರೆ. ಅವುಗಳು ಹೀಗಿವೆ.

ಉಷಾಕಿರಣ—ಕಾದಂಬರಿ

ಹಾಸ್ಯರಶ್ಮಿ—ಮನೋವಿಜ್ಞಾನದಲ್ಲಿ ಹಾಸ್ಯ.

ನಿಮ್ಮದು ಸಮಸ್ಯೆಯ ಮಗುವೇ ?— ಮಕ್ಕಳ ಮನೋವೈಜ್ಞಾನಿಕ ಕೃತಿ.

ಮಾನಸ—ವೈಜ್ಞಾನಿಕ ಕೃತಿ.

ಚಿತ್ತ ವಿಚಿತ್ರ— ಮನೋವೈಜ್ಞಾನಿಕ ಪ್ರಶ್ನೋತ್ತರ.

ಮನೋವೈಜ್ಞಾನಿಕ ಸಣ್ಣ ಕತೆಗಳು.

ಇಷ್ಟು ಮಾತ್ರವಲ್ಲದೆ ಪ್ರಸಿದ್ಧ ದೈನಿಕ, ಮಾಸಿಕ ಪತ್ರಿಕೆಗಳಲ್ಲಿ ಇವರ ಲೇಖನಗಳು ಪ್ರಕಟವಾಗುತ್ತಲಿರುತ್ತವೆ. ಕಳೆದ ಒಂದೂವರೆ ವರ್ಷಗಳಿಂದ 'ಕನ್ನಡ ಪ್ರಭ'ದ ಭಾನುವಾರದ ಸಾಪ್ತಾಹಿಕ ಪುರವಣಿಯಲ್ಲಿ ಡಾ॥ ಪೈಯವರ ಲೇಖನಗಳು ಬರುತ್ತಿವೆ. ಇಂಡಿಯನ್ ಸೈಕಿಯಾಟ್ರಿಕ್ ಸೊಸೈಟಿ ಚಾಪ್ಟರಿನ ಅಧ್ಯಕ್ಷರಾಗಿ ಡಾ॥ ಪೈ ಆಯ್ಕೆಯಾಗಿದ್ದಾರೆ. ಕುವೆಂಪು ವಿಶ್ವವಿದ್ಯಾಲಯದ ಸಿಂಡಿಕೇಟ್ ಸದಸ್ಯರಾಗಿ ಹಾಗೂ ಎಕನಾಮಿಕ್ ಕೌನ್ಸಿಲ್ ಸದಸ್ಯರೂ ಆಗಿ (1990–1993) ರಾಜ್ಯಪಾಲರಿಂದ ನಿಯುಕ್ತರಾಗಿದ್ದಾರೆ.

**ದೃಶ್ಯ ಮಾಧ್ಯಮ : ಸಾಧನೆ : ಪುರಸ್ಕಾರ** 69

ಡಾ॥ ಪೈ ನಿರ್ಮಿಸಿದ ಹಾಗೂ ಖ್ಯಾತ ನಟ ಸುರೇಶ್ ಹೆಬ್ಳೀಕರ್ ಅವರಿಂದ ನಿರ್ದೇಶಿತ 'ಕಾಡಿನ ಬೆಂಕಿ' ಚಲನಚಿತ್ರ 1988–89ನೆಯ ಸಾಲಿನ ರಾಜ್ಯ ಪ್ರಶಸ್ತಿ ಹಾಗೂ ರಾಷ್ಟ್ರ ಪ್ರಶಸ್ತಿ ಗಳಿಸಿದೆ. ಸ್ತ್ರೀ ಪುರುಷರ ಲೈಂಗಿಕ ಸಂಬಂಧದ ಮನೋವೈಜ್ಞಾನಿಕ ವಸ್ತು ಈ ಕತೆಯದು.

ಡಾ॥ ಪೈ ಅವರ ಮತ್ತೊಂದು ಮನೋವೈಜ್ಞಾನಿಕ ಚಿತ್ರ 'ಪ್ರಥಮ ಉಷಾಕಿರಣ' 1990ರ ಸಾಲಿನ ರಾಜ್ಯ ಪ್ರಶಸ್ತಿ ಹಾಗೂ ಫಿಲಂಫೇರ್ ಪ್ರಶಸ್ತಿ ಗಳಿಸಿತು. ಡಾ॥ ಪೈ ನಿರ್ಮಿಸಿಹ ಚಲನಚಿತ್ರಗಳು ಇವೆರಡೇ. ಆನಂದದ ವಿಷಯ ವೆಂದರೆ ಅವೆರಡೂ ಪ್ರಶಸ್ತಿಗೆ ಅರ್ಹವಾಗಿರುವುದು ಅದರ ಗುಣಮಟ್ಟವನ್ನು ತೋರಿ ಸುತ್ತದೆ.

ಪರೀಕ್ಷಾ ಭೀತಿಯ ಬಗ್ಗೆ ವಿದ್ಯಾರ್ಥಿಗಳಿಗೆ ಉಪಯುಕ್ತವಾಗುವಂತೆ ಬರೆದ 'ಪರೀಕ್ಷಾ ಭೀತಿ' ಲೇಖನಕ್ಕೆ 1989–90ರ ಸಾಲಿನ ಖ್ಯಾತ 'ಜಯರಾಂ ಪ್ರಶಸ್ತಿ' ದೊರಕಿದೆ. ಮನೋರೋಗದ ಕುರಿತಾದ ಹಾಸ್ಯ ಲೇಖನಕ್ಕೆ 1988ರ 'ಬೀಚಿ ಪ್ರಶಸ್ತಿ' ಲಭ್ಯವಾಗಿದೆ.

ನಿಮ್ಮದು ಸಮಸ್ಯೆಯಾ ಮಗುವೇ ? ಎಂಬ ಕನ್ನಡ ಧಾರಾವಾಹಿ ಹಾಗೂ ಗಿರೀಶ್ ಕಾರ್ನಾಡ್ ನಿರ್ದೇಶನದಲ್ಲಿ ವಿಭಿನ್ನ ಮನೋರೋಗಗಳನ್ನು ಕುರಿತ 'ಮಾನಸ' ಎಂಬ ಹಿಂದಿ ಭಾಷೆಯ ಮತ್ತೊಂದು ಧಾರಾವಾಹಿ ಇವೆರಡೂ ಸದ್ಯದಲ್ಲೇ ದೂರದರ್ಶನ ದಲ್ಲಿ ಪ್ರಸಾರಗೊಳ್ಳಲಿವೆ. ಮನೋರೋಗದ ಹಲವಾರು ಪ್ರಕರಣಗಳನ್ನು ಎಳೆ ಎಳೆಯಾಗಿ ಬಿಡಿಸಿದ ಅವುಗಳ ಒಳನೋಟದ ಚಿತ್ರಣವೇ 'ಮಾನಸ'ದ ಕಥಾವಸ್ತು. ಮನೋರೋಗದ ಸಮಸ್ಯೆ, ಅದರ ಪರಿಹಾರೋಪಾಯ, ಚಿತ್ತ ಚಾಂಚಲ್ಯ, ದುರ್ಬಲ ಮನಸ್ಸಿನ ಏಕಾಂತತೆ, ಹಿಸ್ಟೀರಿಯಾ, ಮಂಕುತನ, ಹಿಂಜರಿಕೆ, ಮನೋವಿಕಲತೆ ಈ ಎಲ್ಲಾ ವಿಚಾರಗಳೂ ಶೈಕ್ಷಣಿಕ ದೃಷ್ಟಿಕೋನದಲ್ಲಿ ಕಿರುತೆರೆಯ ಮೇಲೆ ಮೂಡಿ ಬರ ಲಿವೆ. "ಈ ಪ್ರತಿಯೊಂದು ಮಾಲಿಕೆಯೂ ವೀಕ್ಷಕನಿಗೆ ಸಂದೇಶವನ್ನು ನೀಡುವುದು ಮಾತ್ರವಲ್ಲ (Message Oriented Serial) ಮಾನಸಿಕ ವಿಕಲತೆಗೆ ತಿಳುವಳಿಕೆ ನೀಡಲಿದೆ" ಎನ್ನುತ್ತಾರೆ ಡಾ॥ ಪೈ.

ಡಾ॥ ಅಶೋಕ ಪೈ ಅನೂಲ್ಯ ರಾಷ್ಟ್ರಸಂಪತ್ತು. ಅವರ ಸಮಕಾಲೀ ನರು ನಾವಾದ ಹೆಮ್ಮೆ ನಮಗಿರಲಿ.



# ಉಪಸಂಹಾರ

"ಸಮಾಜ ಒಂದು ಸಮುದ್ರ ಇದ್ದ ಹಾಗೆ. ಆದರಿಂದ ಒಂದು ಕೊಡ ನೀರು ತೆಗೆದರೆ ಕಡಿಮೆಯಾಗುವುದಿಲ್ಲ ; ಒಂದು ಕೊಡ ಹಾಕಿದರೆ ಹೆಚ್ಚಾಗುವುದೂ ಇಲ್ಲ. ಅದು ಸದಾ ತನ್ನ ಸಮತೋಲನವನ್ನು ಕಾಪಾಡಿಕೊಂಡೇ ಇರುತ್ತದೆ. ಅಸಂಖ್ಯಾತ ಜೀವನದಿಗಳಲ್ಲಿ ಒಂದೆರಡು ಬತ್ತಿದರೂ ಸಮುದ್ರದ ಸಮೃದ್ಧಿ, ಘೋಷ ನಿರ್ಘೋಷಗಳು ನಿಲ್ಲುವುದೂ ಇಲ್ಲ. ಆ ಕಾರಣ ಸಮಾಜ ಸಾಗರವನ್ನು ಆಪೋಷಣ ಗೊಳ್ಳುತ್ತೇವೆ ಎಂಬುದು ದುಸ್ಸಾಹಸದ ಮಾತಾಗುತ್ತದೆ. ಅಂದರೆ ಸಮಾಜ ವೊಂದರ ಸಮಗ್ರ ದರ್ಶನ ನೀಡುತ್ತೇವೆನ್ನುವುದು ಸೂಕ್ತವಲ್ಲ ಎಂಬುದೇ ಇದರರ್ಥ." 70

ಸಮುದ್ರದ ನೆರೆತೆರೆಗಳು ಅನಂತ ಅಪಾರ ! ಅದೆಷ್ಟು ಆಳವೊ ಅಷ್ಟು ವಿಶಾಲ. ಅದೆಷ್ಟು ಭವ್ಯವೊ ಅಷ್ಟು ಗಂಭೀರ. ಅನೇಕಾನೇಕ ಪರ್ವತ ಶಿಖರ ಗಳನ್ನೂ ಕ್ಷಯವಾಗದ ಖನಿಜ ಸಂಪತ್ತನ್ನೂ ಅಮೂಲ್ಯ ಮುತ್ತುರತ್ನಗಳನ್ನೂ ಅನಂತ ಅಕ್ಷಯ ನಿಧಿಯನ್ನೂ ಅದು ತನ್ನಲ್ಲಿರಿಸಿಕೊಂಡಿದೆ. ಎಲ್ಲಕ್ಕೂ ಮಿಗಿಲಾಗಿ ಮಾನವನಿಗೆ ಅತ್ಯಂತ ಉಪಯುಕ್ತವಾದ ಉಪ್ಪನ್ನೂ ಸಮುದ್ರವೇ ಕೊಡಬೇಕು. ಲೌಕಿಕಾರ್ಥದಲ್ಲಿ ಉಪ್ಪು ಎಂಬುದು ಲವಣ ಎಂದಿದ್ದರೆ, ಪಾರಮಾರ್ಥ ಸಂದರ್ಭದಲ್ಲಿ ಅದನ್ನು ಮಾನವೀಯತೆ ಎಂದು ಗುರುತಿಸುತ್ತಾರೆ. ಜೀಸಸ್ ತನ್ನ "ಸೆರ್ಮನ್ ಆನ್ ದಿ ಮೌಂಟ್" ನಲ್ಲಿ ಜಗತ್ತಿಗಿತ್ತ ಸಂದೇಶವೇ ಅದು. "ನೀವು ಈ ನೆಲದ ಉಪ್ಪಾಗಿದ್ದೀರಿ, ಉಪ್ಪೇ ಸಪ್ಪೆಯಾದರೆ ಉಪ್ಪಿನ ರುಚಿಯನ್ನು ಮತ್ತಾವ ವಸ್ತುವಿನಿಂದ ಕೊಡಲು ಸಾಧ್ಯ ?" ಈ ಪ್ರಶ್ನೆಯಲ್ಲೇ ಉತ್ತರವೂ ಅಡಗಿದೆ. ಷಡ್ರಸಗಳಲ್ಲಿ ಖಾರವನ್ನು ಮೆಣಸು ಇಲ್ಲವೇ ಮೆಣಸಿನ ಕಾಯಿಯಿಂದ ತರಬಹುದು. ಹುಳಿಯನ್ನು ನಿಂಬೆ ಇಲ್ಲವೇ ಹುಣಿಸೆಗಳಲ್ಲಿ ತರಬಹುದು. ಸಿಹಿಯನ್ನು ಹಣ್ಣಿನಿಂದ ಇಲ್ಲವೇ ಕಬ್ಬಿನಿಂದ ತರಬಹುದು. ಹೀಗೆ ಕಹಿ, ಒಗರು. ಇತ್ಯಾದಿಗಳಿಗೆ ಪರ್ಯಾಯ ವಸ್ತುಗಳಿವೆ. ಆದರೆ ಉಪ್ಪನ್ನು ಭರಿಸುವ ಬೇರೆ ವಸ್ತು ಇಲ್ಲವೇ ಇಲ್ಲ. ಉಪ್ಪಿನ ಸವಿಯನ್ನು ಉಪ್ಪಿನಿಂದಲೇ ತರಬೇಕು, ಬೇರೊಂದರಿಂದ ಅದು ಅಸಾಧ್ಯ. ಅದೇ ರೀತಿ ನೀವು ಈ ನೆಲದ ಉಪ್ಪಾಗಿದ್ದೀರಿ ಎಂದರೆ 'ನೀವು ಮನುಷ್ಯತ್ವವುಳ್ಳ ಮಾನವರಾಗಿದ್ದೀರಿ. 'ಉಪ್ಪೇ ಸಪ್ಪೆಯಾದರೆ' ಅಂದರೆ 'ನಿಮ್ಮಲ್ಲಿನ ಮಾನವತೆಯನ್ನು ನೀವು ಕಳೆದುಕೊಂಡರೆ' ಉಪ್ಪಿನ ರುಚಿಯನ್ನು ಮತ್ತಾವ ವಸ್ತುವಿನಿಂದ ಕೊಡಲು ಸಾಧ್ಯ ? ಬೇರೆ

ಯಾವ ದೈತ್ಯ ಅಥವಾ ದೈವಶಕ್ತಿ ನಿಮ್ಮಲ್ಲಿ ಮಾನವತೆಯನ್ನು ತಂದು ತುಂಬಬೇಕು ? ಆದ್ದರಿಂದ ನೀವು ಮೊದಲು ಮಾನವರಾಗಿ. ಯೇಸುನಾಥನ ಈ ಸಂದೇಶ ಸರ್ವ ಮಾನ್ಯ.

ಇಂತಹ ಮಾನವತೆ ಎಂಬ ಉಪ್ಪನ್ನು ತನ್ನಲ್ಲಿ ಬಚ್ಚಿಟ್ಟುಕೊಂಡಿದೆ ಸಮಾಜವೆಂಬ ಸಮುದ್ರ. ಅದರ ಅನಂತ ವೀಚಿಗಳ ರುದ್ರತಾಂಡವ. ಅದರ ಗಾಂಭೀರ್ಯ ರುದ್ರ ಮನೋಹರ. ಹಡಗಿನ ಹಿಂಬದಿಯ ಡೆಕ್‌ನಲ್ಲಿ ಕುಳಿತು ವೀಕ್ಷಿಸುವ ಪ್ರೇಕ್ಷಕನಿಗೆ ಅದೊಂದು ಸುಂದರ ನೀಲಿ ಹಾಸು. ಮೇಲೆ ನೀಲಾಕಾಶ ಕೆಳಗೆ ನೀಲಿಯು ನೀರು. ಬಹುಶಃ ಆಕಾಶದ ಪ್ರತಿಬಿಂಬವೋ ಎಂಬಂತಿರುತ್ತದೆ. ಆದರೆ ಅದು ಛಾಯೆ ಯಲ್ಲ, ಮಾಯೆಯಲ್ಲ, ಸ್ವೋಪಜ್ಞ ಸ್ಥಿತಿ. ಅದರ ಸೃಜತೆ ವೇದ್ಯವಾಗುವುದು ನಾವು ನಮ್ಮ ನಮ್ಮ ಬಾಳ ದೋಣಿಗಳಲ್ಲಿ ಪಯಣ ಕೈಗೊಂಡಾಗ ಮಾತ್ರ. ತನ್ನೆದೆಯನ್ನು ಸೀಳಿ ನೇಗಿಲಿನಂತೆ ಗೆರೆ ಕೊಯ್ಯುತ್ತಾ ಮುಂದೆ ಸಾಗುವ ಹಡಗು ಅಥವಾ ದೋಣಿಗಳಿಗೆ ತಾನು ಎದೆಹಾಸುತ್ತದೆ ಸಮುದ್ರ. ಅದು ಮುತ್ತು ರತ್ನಗಳಿಗೆ ಆಶ್ರಯ ಕೊಟ್ಟಂತೆ ಮೀನು ಮೊಸಳೆ ತಿಮಿಂಗಿಲಗಳಿಗೂ ಆಶ್ರಯ ಕೊಟ್ಟಿದೆ.ಸಮಾಜ ಸಾಗರದ ವಾತ್ಸಲ್ಯದ ಕಕ್ಷೆಯಲ್ಲಿ ದುಷ್ಟ, ಶಿಷ್ಟ, ಸಾಧು, ಸಂತ ಎಲ್ಲ ಮನೋಧರ್ಮದ ಜಲಚರಗಳೂ ಇವೆ. ಎಲ್ಲರನ್ನೂ ರಕ್ಷಿಸುತ್ತಲೂ ಇದೆ, ಸಮಯ ಬಂದಾಗ ಭಕ್ಷಿಸುತ್ತಲೂ ಇರುತ್ತದೆ. ಇದು ಪ್ರಕೃತಿ ನಿಯಮ. ಇಂತಹ ಅನಂತ ವ್ಯಾಪ್ತಿ, ಅಮೋಘ ದೀಪ್ತಿ, ಅಪೂರ್ವ ರತ್ನಗಳ ಆಗರವಾದ ಸಮಾಜಸಾಗರದಲ್ಲಿ ಗೌಡ ಸಾರಸ್ವತ ಸಮುದಾಯವೂ ಒಂದು. ಅದರ ವಿಹಂಗಮ ದರ್ಶನ ನಾವೀಗಾಗಲೇ ಪಡೆದಿದ್ದೇವೆ. ಕಂಡ ದರ್ಶನದ ಸಮೀಕ್ಷೆ ಈ ಕಿರುಪುಟಿಕೆ.

"ಗೌಡ ಸಾರಸ್ವತ ಸಮಾಜದ ಕೀರ್ತಿ ಶಿಖರಗಳು" ಎಂಬ ಶೀರ್ಷಿಕೆಯಲ್ಲಿ ಎರಡು ಪ್ರಧಾನ ಅಂಶಗಳಿವೆ. ಒಂದು, ಗೌಡ ಸಾರಸ್ವತ ಸಮಾಜ, ಎರಡು ಅದರ ಕೀರ್ತಿ ಶಿಖರಗಳು. ಮೊದಲು ಈ ಸಮಾಜದ ಉದ್ಗಮ ವಿಕಾಸಗಳನ್ನೂ ಪ್ರಗತಿ ಪ್ರಸ್ಥಾನಗಳನ್ನೂ ಒಟ್ಟಿನಲ್ಲಿ. ಸಂಬಂಧಿಸಿದ ಸಮಗ್ರ ರೂಪರೇಷೆಗಳನ್ನು ಕೊಟ್ಟಿ ದ್ದೇವೆ. ಇದು ಅಗತ್ಯವಷ್ಟೇ ಅಲ್ಲ ಅನಿವಾರ್ಯವೂ ಕೂಡ. ಏಕೆಂದರೆ, ಒಂದು ಸಮಾಜದ ಧೀಮಂತ ಚೇತನಗಳನ್ನು ಗುರುತಿಸುವ ಮುನ್ನ ಆ ಸಮಾಜದ ಮೂಲ ಗುಣಗಳನ್ನು ಅರಿಯುವುದು ಮುಖ್ಯವಾಗುತ್ತದೆ. ಅವಕ್ಕನುಗುಣವಾಗಿ ನಾವು ನಮ್ಮ ಪ್ರಾಮಾಣಿಕ ಪ್ರಯತ್ನ ಮಾಡಿದ್ದೇವೆ. ಭಾರತೀಯರಿಗೆ ಐತಿಹಾಸಿಕ ಪ್ರಜ್ಞೆ ಇಲ್ಲ ಎಂಬ ಅಪವಾದವಿದೆ. ಗೌಡ ಸಾರಸ್ವತರೂ ಈ ಅಪವಾದನೆಯಿಂದ ಹೊರತಾದವ ರಲ್ಲ. ಅನಾದಿಕಾಲದ ಅತಿ ಶ್ರೇಷ್ಠವಾದ ವಿಶ್ವಮಾನವ ಧರ್ಮವೆನಿಸಿದ ಗೌಡ ಸಾರಸ್ವತ ದರ್ಶನ–ಧರ್ಮಗಳ ಬಗೆಗೆ ದಾಖಲೆಗಳೇ ಇಲ್ಲ. ಇರುವಷ್ಟು ಐತಿಹಾಸಿಕ

ಅಲ್ಲ, ಅಸ್ಪಷ್ಟವಾದ ಐತಿಹ್ಯ. ಐತಿಹ್ಯ, ಪ್ರಹೇಳಿಕೆಗಳು, ಪ್ರಕೃತಿ ಪ್ರಾರೂಪಗಳು. ಆಚರಣೆ ಅನುಷ್ಠಾನಗಳು, ಆರಾಧನೆ ಔಪಾಸನೆಗಳು, ವೇಷಭೂಷಣಗಳು, ಸಂಪ್ರದಾಯ ಮತ್ತು ಪರಂಪರೆಗಳು ಇವೇ ಮೊದಲಾದವುಗಳನ್ನು ಆಧರಿಸಿ ಧರ್ಮದ ಸೆಲೆಯನ್ನು ಶೋಧಿಸಬೇಕಾಗಿದೆ. ಅನಂತರ ಅದರ ನೆಲೆ-ಬೆಲೆಗಳನ್ನೂ ನಿರ್ಧರಿಸಬೇಕಾಗಿದೆ. ಈ ಕಾರ್ಯ ಇಂಗ್ಲಿಷ್‌ನಲ್ಲಿ ತುಸು ಪ್ರಮಾಣದಲ್ಲಿ ಸಾಗಿದೆ. ಕನ್ನಡದಲ್ಲಂತೂ ಇಲ್ಲವೇ ಇಲ್ಲ. 'ಇಲ್ಲ' ಎಂಬ ಮಾತನ್ನು ಸುಳ್ಳಾಗಿಸಲು ಪ್ರಯತ್ನಿಸಿದ್ದೇವೆ. ಅದಕ್ಕಾಗಿ ಗೌಡ ಸಾರಸ್ವತ ಸಮಾಜದ ಪ್ರದೇಶ ಶೋಧನೆಯ, ಕ್ಷೇತ್ರ ಕಾರ್ಯದಲ್ಲಿ ತೊಡಗಿಕೊಂಡದ್ದಾಯಿತು. ಅನಂತರ ಧರ್ಮ, ದೇವರು, ಮಠ, ಮಠಾಧಿಪತಿಗಳು, ಪೀಠ ಪರಂಪರೆ, ಗುರು ಪರಂಪರೆ ಇತ್ಯಾದಿಗಳನ್ನು ಕಾಲಗರ್ಭ ದಿಂದ ಹೊರ ತೆಗೆಯಲಾಯಿತು. ಇದು ಭಗೀರಥ ಪ್ರಯತ್ನವೆಂದು ಕರೆದರೆ ಖಂಡಿತ ಕ್ಲೀಶೆ ಆಗದು !

ಧರ್ಮದ ಜೊತೆಯಲ್ಲಿ ತೆಕ್ಕೆ ಬೀಳುವುದು ಧಾರ್ಮಿಕ ಸಾಹಿತ್ಯ. ಅದರ ಬಗೆಗೆ ಸಂಶೋಧನೆ ನಡೆಸಲಾಯಿತು. ಮೊದಲು ಭಾಷೆ, ಆಮೇಲೆ ಸಾಹಿತ್ಯ. ಆದ್ದರಿಂದ ಗೌಡ ಸಾರಸ್ವತರು ಆಡುವ 'ಕೊಂಕಣಿ'ಯನ್ನು ಭಾಷಾ ವಿಜ್ಞಾನದ ದೃಷ್ಟಿಯಿಂದ ಅಧ್ಯಯನ ಮಾಡಲಾಯಿತು. ಅದು ವಿಶ್ವದ 'ಇಂಡೋ ಯುರೋಪಿಯನ್' ಭಾಷಾ ವರ್ಗಕ್ಕೆ ಸೇರಿದ ಒಂದು ಸಾಮಾಜಿಕ ಉಪಭಾಷೆ (Social Dialect) ಎಂದು ನಿರ್ಧರಿಸಲಾಯಿತು. ಅದರ ಧ್ವನಿಮಾ, ಆಕೃತಿಮಾ ಹಾಗೂ ವ್ಯಾಕರಣ ಪ್ರಕ್ರಿಯೆಗಳನ್ನು (ಧರ್ಮಗ್ರಂಥಗಳಂತೆ) ಸಂಸ್ಕೃತದಲ್ಲಿಯೇ ಹುಡುಕಿ ಹೆಕ್ಕಿ ತೆಗೆಯಲಾಯಿತು. ಇಷ್ಟಾದರೂ ಅತೃಪ್ತಿ ನಮ್ಮ ಪಾಲಿಗೆ ಕಟ್ಟಿಟ್ಟ ಬುತ್ತಿ.

ಕೊಂಕಣಿಗಳ ಧರ್ಮ ದರ್ಶನಗಳಿರುವುದು ಸಂಸ್ಕೃತ ಗ್ರಂಥಗಳಲ್ಲಿ. ಅವರು ಶುದ್ಧ ದ್ವೈತಿಗಳು. ದ್ವೈತ ದರ್ಶನ ಅವರ ದ್ಯುತಿವಡೆದ ಧಾರ್ಮಿಕಕ್ಷೇತ್ರ. ಆ ದಾರ್ಶನಿಕ ಸಾಹಿತ್ಯದ ಉಲ್ಲೇಖಗಳನ್ನು ಆಧರಿಸಿ ಗೌಡಸಾರಸ್ವತರ ಶಿಷ್ಟ ಸಾಹಿತ್ಯದ ಸ್ಥೂಲ ದರ್ಶನ ಪಡೆಯಲಾಯಿತು. ಅಂತೆಯೇ ಜಾನಪದೀಯವಾಗಿಯೂ ಆ ಸಮಾಜದ ಕೆಲವು ಹಕ್ಕಲುಗಳನ್ನು ಹೆಕ್ಕಿ ತೆಗೆದು ಸಂಶೋಧನೆಯ ಬುಟ್ಟಿಯಲ್ಲಿ ತುಂಬಿಕೊಳ್ಳಲಾಯಿತು.

'ಗೌಡ ಸಾರಸ್ವತ ಸಮಾಜದ ಕೀರ್ತಿ ಶಿಖರಗಳು' ಎಂದ ಕೂಡಲೇ ಕೇವಲ ಸಮಾಜ ಒಂದರ ಕೆಲವೇ ಕೆಲವರು ವ್ಯಕ್ತಿ-ಶಕ್ತಿಗಳು ಎಂಬರ್ಥ ಧ್ವನಿಸುತ್ತದೆ. ಅದು ಸಹಜವೂ ಹೌದು. ಅದೇ ನಮ್ಮ ಅಧ್ಯಯನದ ಮೂಲ ಮಾತ್ರಕೆ. ಬೇರು ಸೇರು ಕೂಡಾ ಅದೇ. ಆದರೆ ಸಮಾಜದ ಎಲ್ಲಾ ಚೇತನಗಳನ್ನು ಇಲ್ಲಿ ಗುರುತಿಸಲಾಗಿದೆಯೇ ? ಇಲ್ಲ. ಕಾರಣ, ಗೌಡ ಸಾರಸ್ವತರ ಸಮಾಜ ಅನಾದಿ ಕಾಲದ,

ಅದ್ವಿತೀಯ ತೇಜಸ್ಸಿನ ಸನಾತನ ಧರ್ಮ. ಅದರ ದರ್ಶನ ಕೋಟಿ ಸೂರ್ಯ ಪ್ರಭಾ ಪೂರ್ಣವಾದದ್ದು. ಮನುಕುಲದ ಪ್ರಜ್ಞೆಗೊಂದು ಸಂಜ್ಞೆಯಾಗಿ ಮೂಡಿ ವಿಕಾಸ ಗೊಂಡದ್ದು. ಅನಾದಿ ಕಾಲದಿಂದ ಇಂದಿನವರೆಗೂ ಒಂದು ವಿಶಿಷ್ಟ ಸಮಾಜವಾಗಿ ಬೆಳೆದು ಬಂದ ಈ ಸಮಾಜ ಇಂದು ಭರತಖಂಡದ ಆರ್ಥಿಕ ಪ್ರಗತಿ, ಸಾಂಸ್ಕೃತಿಕ ಸಮೃದ್ಧಿ, ಧಾರ್ಮಿಕ ದಾರ್ಶನಿಕ ಧ್ಯೇಯ ಧೋರಣೆಗಳ ವೈಜಯಂತಿ ತಾನಾಗಿ ಮೆರೆಯುತ್ತಿದೆ. ಭಾರತೀಯ ಸಾಹಿತ್ಯ ಸಂಸ್ಕೃತಿಗಂತೂ ಅದರ ಕೊಡುಗೆ ಅಮೂಲ್ಯ, ಅಪಾರ, ಅಮೋಘ. ಅಷ್ಟೇ ಅಲ್ಲ, ಈ ಸಮಾಜ ಸಂಪದ ಎಂದೆಂದಿಗೂ ಬತ್ತದ ಚಿಲುಮೆ. ಇಂತಹ ವಿಶುದ್ಧ, ವಿಶಾಲ, ವಿಶಿಷ್ಟ, ವೈಭವದ ಸಮಾಜವನ್ನು ಈ ಬರಹದ ಕಕ್ಷೆಯಲ್ಲಿ ತರಲು ಖಂಡಿತ ಸಾಧ್ಯವಿಲ್ಲ. ತರುತ್ತೇನೆಂಬ ಮಾತು ಧಾರ್ಷ್ಟ್ಯ ವಾಗುತ್ತದೆಯೇ ಹೊರತು ಸಾಧೂವೆನಿಸಲಾರದು. ಆದ್ದರಿಂದ ಕೆಲವೇ ಕೆಲವು ಕೀರ್ತಿ ಶಿಖರಗಳನ್ನು ಇಲ್ಲಿ ಗುರುತಿಸಲಾಗಿದೆ. ಅದೂ ಆ ಶಿಖರಗಳ ಸಮಗ್ರ ದರ್ಶನ ಅಲ್ಲ, ಒಂದು ಸ್ಥೂಲ ಪರಿಚಯಾತ್ಮಕ ರಚನೆ. ಸಮಾಜ ಕುರಿತು ಕನ್ನಡದಲ್ಲಿ ಏನೇನೂ ಇಲ್ಲದಿದ್ದಾಗ ನಮ್ಮ ಈ ಸ್ವಾತ್ಮ ಪ್ರಯತ್ನ ನಿಮಗೆ ಖುಷಿ ಕೊಟ್ಟೀತು ಎಂಬ ಭಾವನೆ ನಮ್ಮದು. ಅಂತೆಯೇ ನಮ್ಮ ಈ ಶ್ರಮವನ್ನು ಸ್ವಾಗತಿಸುವಿರಿ, ಮೆಚ್ಚುವಿರಿ ಎಂಬ ವಿಶ್ವಾಸ ಕೂಡ.

ಪ್ರಸ್ತುತ ಕೃತಿಯಲ್ಲಿ ಗೌಡ ಸಾರಸ್ವತ ಸಮಾಜದ ಮೂಲ ಆಧಾರ ಸ್ತಂಭದಂತಿರುವ ಏಳು ಜನರನ್ನು ಮಾತ್ರ ಅವಲೋಕಿಸಿದ್ದೇವೆ.

1. ಭದ್ರಗಿರಿ ಅಚ್ಯುತ ದಾಸವರೇಣ್ಯರು – ಹರಿಕಥಾಗ್ರೇಸರರು
2. ಡಾ॥ ಟಿ. ಎಂ. ಎ. ಪೈ – ಶಿಕ್ಷಣ ತಜ್ಞರು
3. ಡಾ॥ ಟಿ. ಎ. ಪೈ – ಸಮಾಜಸೇವಕ, ರಾಜಕಾರಣಿಗಳು
4. ಎಂ. ವಿ. ಕಾಮತ್ – ಖ್ಯಾತ ಪತ್ರಿಕೋದ್ಯಮಿಗಳು
5. ರಂಜಾಳ ಗೋಪಾಲ ಶೆಣೈ – ವಿಶ್ವವಿಖ್ಯಾತ ಶಿಲ್ಪಿಗಳು
6. ಮಂಜೇಶ್ವರ ಗೋವಿಂದ ಪೈ – ಸಂಶೋಧಕರು, ಸಾಹಿತಿಗಳು
7. ಡಾ॥ ಕೆ. ಎ. ಅಶೋಕ ಪೈ – ಮನೋರೋಗತಜ್ಞ, ಸಮಾಜಸೇವಕರು

ಇವರು ಈ ಸಮಾಜದ ಕೀರ್ತಿಗೆ ಕಾರಣರಾದವರು. ಇವರಿಂದ ಭರತ ಖಂಡದ ವ್ಯಾಪ್ತಿಯಲ್ಲಿ ಈ ಸಮಾಜಕ್ಕೆ ಸ್ಥಾನ, ಮಾನ, ಮರ್ಯಾದೆ, ಮನ್ನಣೆಗಳು ದೊರೆತಿವೆ. ಆದರೆ ನಾವು ಮೊದಲೇ ಹೇಳಿದಂತೆ ಇವರೇ ಮೊದಲಲ್ಲ ಕೊನೆಯೂ ಅಲ್ಲ. ಈ ಸಮಾಜದ ವಟವೃಕ್ಷ ಸ್ಥಾಪಕರಿದ್ದಾರೆ. ಅಂದರೆ ಮಠ–ಪೀಠಾಧಿಪತಿ ಗಳಿದ್ದಾರೆ. ಆ ಮಹಾವ್ಯಕ್ತಿಗಳ ತಪಃಪ್ರಭಾವದಿಂದ ಸಮಾಜ ನಿತ್ಯ

ನೂತನವಾಗಿ, ಪವಿತ್ರ ಪ್ರಾಂಜಲವಾಗಿ ಪ್ರಜ್ವಲಿಸುತ್ತದೆ. ಅಂತಹ ಪೀಠಗಳಲ್ಲಿ ಒಂದಾದ ಶ್ರೀಕಾಶೀ ಮಠದ ಸ್ಥೂಲ ರೂಪರೇಷೆಗಳನ್ನು ಕೊಟ್ಟಿದ್ದೇವೆ. ಈ ಪೀಠ ಪರಂಪರೆಯ ವರ್ಣನಾತೀಪರ್ವಾದಗಳಿಂದ ಪರಿಪೋಷಿತರಾದ ಸಮಾಜ ಸುಧಾರಕರನ್ನೂ, ಸಮಾಜ ನೇತಾರನ್ನೂ, ಗಣ್ಯರನ್ನೂ, ಕಲಾವಿದರನ್ನೂ, ರಾಜಕಾರಣ ಪಟುಗಳನ್ನೂ, ಅವರ ಸಮಾಜಸೇವೆ, ತನ್ಮೂಲಕ ರಾಷ್ಟ್ರ ಸೇವೆಯನ್ನು ಅರ್ಥಪೂರ್ಣವಾಗಿ ಪರಿಚಯಿಸಿ ದ್ದೇವೆ. ಆದರೆ ಇವರಷ್ಟು ಪ್ರಮಾಣದಲ್ಲಿ ಅಲ್ಲದಿದ್ದರೂ 'ಅಳಿಲು ಸೇವೆ ಮಳಲ ಭಕ್ತಿ' ಸಲ್ಲಿಸಿದ ಗಣ್ಯ ಚೇತನಗಳಿವೆ ಈ ಸಮಾಜದಲ್ಲಿ. ಅಂತಹವರಲ್ಲಿ ಗಣನೀಯ ವ್ಯಕ್ತಿಗಳೆಂದರೆ ಖ್ಯಾತ ಸಾಹಿತಿ ಯಶವಂತ ಚಿತ್ತಾಲ, ಗಂಗಾಧರ ಚಿತ್ತಾಲ, ಇತಿಹಾಸಜ್ಞ ಡಾ॥ ಸೂರ್ಯನಾಥ ಕಾಮತ್, ಪ್ರಸಿದ್ಧ ವೈದ್ಯರಾದ ಎ.ವಿ. ಬಾಳಿಗಾ, ಶ್ರೀನಿವಾಸ ಮಲ್ಯ, ವೈಕುಂಠ ಬಾಳಿಗಾ, ವಿಠಲ ಮಲ್ಯ, ಎಂ. ಎನ್. ಕಾಮತ್, ಅಮ್ಮೆಂಬಳ ಸುಬ್ರಾಯ ಪೈ ಇವರೇ ಮೊದಲಾದವರು. ಇವರೆಲ್ಲರನ್ನೂ ಹೆಸರಿಸಿದರೆ ಸಾಕು ಒಂದು ದೊಡ್ಡ ಪಟ್ಟಿಯೇ ಆಗುತ್ತದೆ. ನಮಗೆ ಪಟ್ಟಿ ಮುಖ್ಯ ಅಲ್ಲ ಪಟ್ಟವೂ ಮುಖ್ಯವಲ್ಲ. ಅವರು ಕೊಟ್ಟದ್ದನ್ನು ನಾವು ತುಂಬು ಕೃತಜ್ಞತೆಯಿಂದ ಮೌನ ದಿಂದಲೇ ಸ್ವೀಕರಿಸುತ್ತೇವೆ.

ಗೌಡ ಸಾರಸ್ವತ ಧರ್ಮಪುರುಷನಿಗೆ ಎರಡು ತೋಳುಗಳು. ಒಂದು ಗೌಡ ಸಾರಸ್ವತ ಮತ್ತೊಂದು ಬರೀ ಸಾರಸ್ವತ. ನಾವಿಲ್ಲಿ ಗೌಡ ಸಾರಸ್ವತ ಮಾತ್ರ ಗಮನಿಸಿದ್ದೇವೆ. ಮತ್ತೊಬ್ಬರಿಗಾಗಿ ಸಾರಸ್ವತ ಅಧ್ಯಯನವನ್ನು ಕೂಡ ಮಾಡಿ ದ್ದೇವೆ.

ಗೌಡ ಸಾರಸ್ವತ ಸಮಾಜದಿಂದ ತುಸು ಭಿನ್ನತೆಯನ್ನು ಪಡೆದು ತನ್ನದೇ ಆದ ಕೆಲವು ಜ್ಯೋತಿ ರತ್ನಗಳನ್ನು ಒಳಗೊಂಡಿವೆ ಈ ಸಾರಸ್ವತ ಸಮಾಜ. ಮುಖ್ಯ ವಾಗಿ ಪಂಜೆ ಮಂಗೇಶರಾಯ, ಕಾರ್ನಾಡ್ ಸದಾಶಿವರಾಯ, ಗೌರೀಶ ಕಾಯ್ಕಿಣಿ, ದಿನಕರ ಕಾಯ್ಕಿಣಿ, ನಾಗ್ ಸಹೋದರರು, ಪ್ರಕಾಶ್ ಪಡುಕೋಣೆ ಇವರೇ ಮೊದಲಾದ ವರಿದ್ದಾರೆ. ಇವರ ಬಗ್ಗೆಯೂ ಅಧ್ಯಯನ ನಡೆಯಬೇಕೆಂಬುದು ನಮ್ಮ ಆಶಯ.

ನಾವು ಎಲ್ಲವನ್ನೂ ಮಾಡಿ ಮುಗಿಸಿದ್ದೇವೆ ಎಂಬ ಭ್ರಮೆ ನಮಗಿಲ್ಲ: ಅದು ಎಂದಿಗೂ ಯಾರಿಗೂ ಸಲ್ಲ. ಆದ್ದರಿಂದ ಮುಂದುವರಿಸುವವರೆಗೆ ತೆರವು ಮಾಡಿಕೊಡುವಂತಹ ಹೃದಯವಂತಿಕೆ ನಮ್ಮಲ್ಲಿದೆ.

# ಅಡಿ ಟಿಪ್ಪಣಿಗಳು

1 ಶ್ರೀ ಸಂಸ್ಥಾನ ಕಾಶೀ ಮಠದ ಸಂಕ್ಷಿಪ್ತ ಪರಿಚಯ – ಎ. ಎ ಶೆಣೈ [ಪುಟ-5]

2 ಮನುಸ್ಮೃತಿ
ಸರಸ್ವತೀ ದೃಷದ್ವತ್ಯೋರ್ದೇವನ ದ್ಯೋರ್ಯದಂತರಂ
ತಂ ದೇವ ನಿರ್ಮಿತಂ ದೇಶಂ ಬ್ರಹ್ಮಾವರ್ತಂ ಪ್ರಚಕ್ಷತೇ ॥
[ಅಧ್ಯಾಯ 2-ಶ್ಲೋಕ-18]

3 ರಾಜನ್ ಸಪ್ತ ಸರಸ್ವತ್ಯೋ ಯಾಭಿರ್ವ್ಯಾಪ್ತ ಮಿದಂ ಜಗತ್ ।
ಆ ಹೂತಾ ಬಲವದ್ಭಿರ್ಹಿ ತತ್ರ ತತ್ರ ಸರಸ್ವತೀ ॥
[ಮಹಾಭಾರತದ ಶಲ್ಯಪರ್ವ-ಅಧ್ಯಾಯ 38 ಶ್ಲೋಕ-3]

4 ಏವ ಮೇತನ್ಮಹಾಬಾಹೋ ಪಶ್ಯಂತಿ ಪರಮರ್ಷಯಃ
ಸರಸ್ವತಿ ಮಿಮಾಂ ಪುಣ್ಯಾಂ ಪಶ್ಯೈಕ ಶರಣಾವೃತಾಂ ॥
ಯತ್ರ ಸ್ನಾತ್ವಾ ನರಶ್ರೇಷ್ಠ ಧೂತ ಪಾಪ್ಮಾ ಭವಿಷ್ಯಸಿ
ಇಹ ಸಾರಸ್ವತೈರ್ಯಜ್ಞೈರಿಷ್ಟವಂತಃ ಸುರರ್ಷಯಃ
ಋಷಿಯಶ್ಚೈವ ಕೌಂತೇಯ ತಥಾ ರಾಜರ್ಷಯೋಽಪಿ ಚ ॥
[ವನಪರ್ವ–ಅಧ್ಯಾಯ-129 ಶ್ಲೋಕ-30-33]

5 ಮಹಾಭಾರತ ಶಲ್ಯಪರ್ವದ ಸ್ವಾರಸ್ವತಾಖ್ಯಾನ.

6 ಸಾರಸ್ವತ ಬ್ರಾಹ್ಮಣರ ಸಮಗ್ರ ಇತಿಹಾಸ - ಭದ್ರಗಿರಿ ಅಚ್ಯುತ ದಾಸರು

7 Cochin Tribes and Castes – L.K. Ananth Krishna Iyar (1912)

8 ಸ್ಕಾಂದ ಪುರಾಣ – ಸಹ್ಯಾದ್ರಿ ಖಂಡ

9 ಸ್ಕಾಂದ ಪುರಾಣ – ಸಹ್ಯಾದ್ರಿ ಖಂಡ ಅಧ್ಯಾಯ-1

10 ಸಾರಸ್ವತ ಮಾತಾ – ಕೊಂಕಣಿ ವಾರ ಪತ್ರಿಕೆ

11 ನಮ್ಮ ಹಿರಿಯರನ್ನು ಕುರಿತು - ಗೋವಿಂದ ಪೈ

12 Saraswath Colony in the Deccan - Vaman Mangesh Dubashi

13 Saraswath Families - S.S. Talmaki

14 ಮಂಜುಳ ಕ್ಷೇತ್ರ ಮಹಾತ್ಮೆ - ಗೋವಿಂದ ಪೈ [ಅಧ್ಯಾಯ-5]

15 History of the Daksinatya Saraswaths - By V. N. KUDVA

16 ಸಾರಸ್ವತ ಬ್ರಾಹ್ಮಣರ ಸಮಗ್ರ ಇತಿಹಾಸ - ಭದ್ರಗಿರಿ ಅಚ್ಯುತದಾಸರು

17 ಶ್ರೀ ಸಂಸ್ಥಾನ ಕಾಶೀಮಠದ ಸಂಕ್ಷಿಪ್ತ ಪರಿಚಯ - ಡಾ॥ ಪಿ. ಎ. ಶೆಣೈ [ಪುಟ-11]

18 ಜಾನಪದ ಗೀತೆ : ವೈಯಕ್ತಿಕ ಭೇಟಿಯ ಸಮಯದಲ್ಲಿ ಶ್ರೀಮತಿ ಹರಿದಾಸ ಪೈ ಅವರು ತಮ್ಮ ಸಂಗ್ರಹದಿಂದ ನೀಡಿದ್ದು

19, 20,21,22 : ಈ ನಾಲ್ಕು ಹಾಡುಗಳೂ ಶ್ರೀಮತಿ ವತ್ಸಲಾ ಪ್ರಭು ಅವರ ಸಂಗ್ರಹದಿಂದ.

23 [ತಾಮ್ರಪತ್ರ]–ಅನುಬಂಧ-I

24 ಶ್ರೀ ಸಂಸ್ಥಾನ ಕಾಶೀಮಠದ ಸಂಕ್ಷಿಪ್ತ ಪರಿಚಯ - ಡಾ॥ ಎ. ಎ ಶೆಣೈ

25 ನೋಡಿ. ಅನುಬಂಧ-II

26 ನೋಡಿ. ಅನುಬಂಧ-III

27 ವಿಭೂತಿ ಪುರುಷರು - ಡಾ॥ ಸಾ. ಶಿ. ಮರುಳಯ್ಯ

28 History of Sri Kashi Matt Samsthan - By V. A. Shenoy Chapter XXII Page-131.

29 ಕಾಶೀಮಠದ ಸಂಕ್ಷಿಪ್ತ ಪರಿಚಯ - ಎ. ಎ. ಶೆಣೈ [ಪುಟ-62-63]

30 ನಮನ - ಕಸ್ತೂರಿ ಸಿ. ಪೈ. [ಪುಟ 90]

31 ಸಹ್ಯಾದ್ರಿ ಖಂಡ - ಉತ್ತರಾರ್ಧ [ಅಧ್ಯಾಯ-8]

32 ಭೀಷ್ಮ ಪರ್ವ - [ಅಧ್ಯಾಯ-9]

33 ಬೃಹತ್ ಸಂಹಿತೆ - ವರಾಹಮಿಹಿರ ಅಧ್ಯಾಯ XIV ಕ್ರಿ. ಶ. 6ನೆಯ ಶತಮಾನದ ಪೂರ್ವಾರ್ಧ.

34 ದಶಕುಮಾರ ಚರಿತ್ರ - ದಂಡಿ ಕ್ರಿ. ಶ. 6-7ನೆಯ ಶತಮಾನ

35 ಮಂಜುಳ ಕ್ಷೇತ್ರ ಮಹಾತ್ಮೆ - ಮಂಜೇಶ್ವರ ಗೋವಿಂದ ಪೈ

36 Konkani Proverbs, Riddles, lullabies and Nursery Songs– By S. S. Talmaki.
Konkani Similies and idioms – By S. S. Talmaki.

37 'Konkani was also used in a portion of on inscription of 1187 of the Shilahara king Abarajita II of the North Konkan. There is a stone tablet with a Konkani inscription of 1474 in front of the Nagesh Temple at Bandivada.,
Dakshinatya Saraswaths – V. N. Kudva, Page–220.

38 Linguistic Survey of India – G. A. Grierson, page–145.

39 'Konkani is said to have developed an indigenous literature before the portuguese Conquest This conquest aimed at the introduction of christianity ; and the old Manuscripts were burnt by the invaders as Containing

Pagan doctrines. The Zeal of Missionaries caused the temples to be burnt and at the same time destroyed the old literature, so that no traces are left. They even tried to exterminate the language and 1684 a royal proclamation was issued forbidding the use of Konkani. In 1731 the inquisitor of Goa, in a letter to tha king of portugal complains of the non-observance of the law of the his Most Serene Lord Dom Sebastiano and of the Goan Councils. Which forbids the natives of the country to speak in their idiom, compelling them to speak only in the portuguese language.'

Linguistic Suryey of India – G. A Grierson Vol VII Page 166.

40 The formation of Konkani – S. M. Katre, Page 151-152.

41 The Konkan was colonised by the Aryans earlier than the Marathi districts Konkani followed an independent course and developed as a language much earlier. It has a large number of words and grammatical forms which are not found in either old or current Marathi. The old konkani and the old Marathi very nearly resembled each other at an early stage Jnaneshwari contains a large number of words and idioms which are no longer used in Marati but are to be found in Konkani.'

'HISTORY OF THE DAKSHINATYA SARASWATHS
By V. N. KUDVA, Page-220.

42 The Konkan and the Konkani Language
By V. P. CHAVAN, Page-41-42.

43 The History of the Dakshinatya Saraswats
Chapter 18 Page-223.

44 ಸೆಬಾಸ್ಟಿಯೋ ರೊಡೊಲ್ಫೋ ಡಾಲ್ಗಾಡೋ ಒಬ್ಬ ಪ್ರತಿಭಾವಂತ ಪಂಡಿತ. ಪೋರ್ತುಗಲ್ ಯೂನಿವರ್ಸಿಟಿಯಲ್ಲಿ ಈತ ಸಂಸ್ಕೃತದ ಪ್ರಾಧ್ಯಾಪಕ. 1893ರಲ್ಲಿ ಕೊಂಕಣಿ ಭಾಷೆಯಲ್ಲಿ ನಿಘಂಟನ್ನು ಪ್ರಪ್ರಥಮವಾಗಿ ಪ್ರಕಟಿಸಿದಾತ ಈತ. 1905ರಲ್ಲಿ ಪೋರ್ತುಗೀಸ್ ನಿಘಂಟನ್ನೂ : ಪೋರ್ತುಗೀಸ್ - ಕೊಂಕಣಿ ನಿಘಂಟನ್ನೂ ಈತ ಪ್ರಕಟಿಸಿದ.

45 'This change is not seen in the Publication of the Konkani grammar 'Art de lingos canarim' (towards the end of the sixteenth Century and at the begining of the Seventeenth Century) and in the well-known christian Purana by Fr. Thomas Stephens. These are the first works of the kind written by a European on and in an Indian Language.

The History of the Dakshinatya Saraswaths
By V. N. Kudva, Page-223 ch-18.

46 'The Portuguese Govt Opened in 1932 a Konkani School with about 100 pupils, with the well known Konkani Grammarian Conego Jose de Santa Rita on its Staff under the auspicious of the Indo-Portuguese Institute.

The History of the Dakshinatya Saraswaths.
Page-224 Chapter-18. By V. N. Kudva

47 ಕನ್ನಡ ಭಾಷಾ ಚರಿತ್ರೆ - ಡಾ|| ಸಾ. ಶಿ. ಮರುಳಯ್ಯ, ಪುಟ 93

48 ಅದೇ, ಪುಟ 17

49 ಶ್ರೀ ಅಚ್ಯುತ ದಾಸರಲ್ಲಿ ವೈಯಕ್ತಿಕ ಸಂದರ್ಶನದ ಸಂದರ್ಭದಲ್ಲಿ ನಡೆಸಿದ ಮಾತುಕತೆ ಹಾಗೂ ವಿವರಣೆಗಳು.

50 'ಕೆಳದಿಯ ಅರಸರು ಮತ್ತು ಕನ್ನಡ ಸಾಹಿತ್ಯ' - ಡಾ|| ಸಾ. ಶಿ. ಮರುಳಯ್ಯ
ಮಹಾಪ್ರಬಂಧ - ಹಸ್ತಪ್ರತಿ ಪುಟ 241-242

51 ಭಾಗವತ - ಶ್ರೀ ಅಚ್ಯುತದಾಸರು

52 'ತರಂಗ' ವಾರಪತ್ರಿಕೆ ಅಗೋಸ್ತು 29.1993 'ಪಾಪು ಪ್ರಪಂಚ'

53 The Pais of Manipal - By Selden Menefee.

54 Ibid

55 The innovative Banker - By. M. V. Kamath.

56 The Pais of Manipal – By Selden Menefee.

57 ಗೋವಿಂದ ಪೈಗಳ ಕಾವ್ಯ (1965) ಪುಟ 2-3 ವಿ. ಎಂ. ಇನಾಂದಾರ್

58 "ಕಾವ್ಯಂ ನಮಮಾರ ನ ಜೀರ್ಯತಿ" ಅಥರ್ವವೇದ. ಅಧ್ಯಾಯ. 8. 32

59 ಕನ್ನಡದ ಮೊರೆ - ಪ್ರಬಂಧ ಸಂಕಲನ [1975] ಪುಟ 64-65 ಕಾವ್ಯಾಲಯ, ಬೆಂಗಳೂರು

60 Govinda Pai – By V. M. Inamdar Page–26–27.
Institute of Kannada Studies, University of Mysore

61 ಅನುಬಂಧ-IV

62 T. A. ಪೈಯವರು L.I.C. ಯ Chairman ಆಗಿದ್ದಾಗ ಮಾಡಿದ ಜನತಾ ಸುಧಾರಣೆ ಯನ್ನು ಈ ರೀತಿಯಾಗಿ ಕ್ರೋಢೀಕರಿಸಿ ಹೇಳಬಹುದು.

1 Many water supply and drinage Schemes were suffering for want of funds. The govt was prepared to give guarantee on behalf of Muncipalities to pay the amounts. So amounts were given for Such Schemes so that the cause of the public was, Served and at the same time the Money was safe and earning interest.

2. Amounts were Sanctioned for Co-operative Housing Schemes, The people were benifitted by getting funds for building their houses and at the same time money was invested in nation building activities.

3 Money was also sanctioned to build houses of the LIC Staffs. Loans were given to Housing boards for Constructing houses for individuals provided they gave proper Security.

4 Amounts were Sanctioned to the Various State Electricity Boards to carry out Rural electrification and the public at large was much benifitted.

5 Amounts were also sanctioned for Power Projects on the guarantee of State govt.

63 Mr. Pai speaks – T. A. Pai, Page–8.

64 'One of the biggest battles that the banks have to fight in Striving to make themselves more useful to the society is against the Money Lenders who by their lendining operations in areas which banks have not been willing to go

into or among classes to whom banks are unapproachable have built up a sphere of influence from which it is difficult to dislodge them. (Chairman's Statement. Annual Report of Syndicate Bank Ltd. 1968).

65 "The option is given to us who are in power by accident or by good fortune, not because we deserve it better than many thousands of others who might be as good as ourselves. But we are lucky ; we had this position and we have to answer to the country what have we made of it ; I am greateful to you for appreciating. I am glad that people are willing to appreciate even the small things that I have done."

'Mr. Pai Speaks' - By T. A. Pai.

66\. 1 Extended the subsidies even to small industries in the backward areas which were earmarked for big industries. The Small Scale sector was permitted to get all assistance in the import of raw meterial.

2 Warned the Country for the first time that sickness was spreacting even in a Small Scale Sector and brought sufficient pressure on the banking system to look into the sickness of the small scale sector.

3 Liberalised the licencing rules which came in the way of full utilisation of Capacity so that the industrial production could go up.

4 Cement Industry which was stagnating at 15.5 million ton annual production was enabled to raise it by 3 million tons to 18.5 million tons by Constant attention given to its installed capacity.

5 Introduced Schemes to attract non-resident Indians to start industries in Indian and changed the definition of non-resident Indians to and one of Indian parentage.

6 Provided for automatic growth of 25% of the basic industries every 5 years. Permitted diversification of engineering industries to meet the challenges of export. Removed the obstacles in the way of exports of engineering products and thus helped raise exports from Rs. 216 crores in 1973-74 to Rs. 600 crores in 1976-77.

7 Removed all restrictions and delays in the clearence of licences to industries and gave every assistance to them to come up.

8 Helped modernise the textile industry and other engineering industries through soft loans made available through financial institutions.

9 Induced State Govt. to prevent further industries being set up in cities so that growth centres in the country could be identified and smaller places with necessary infrastructure are enabled to attract industries.

10 Started testing and Servicing fecilities for Small Scale Industries in many centres.

11 Encouraged ancillary development in the public sector units, insisting on minimum investment in public sector and maximum diversification of products in the Small Scale Sector.

12 Encouraged the development of garments and leather industries permitting even imports of machinary.

13 Brought the problems of the fishing industry to the notice of the Govt of India to enable development of fishiries for export in a big way.

68 "We all belong to the congress organisation. We can be proud of the achivements of the nation during 32 years. But we cannot avoid sharing responsibilities for the nations failures . . We seem to be confused with the issues coming up in different parts of the country and we do not have clear cut answers for these. If Mrs. Gandhi is willing to act as a trustee for 68 crores of people what ever has happened in the past, if she not only promises but acts for giving the country a clean and good administration we should give her all possible support ; otherwise as congressmen liberated from the political bonded labour, we should be with the people."
Mr. Pai Speaks – By T. A. Pai.

69 'ಸಂಸ್ಕೃತಿ ದರ್ಶನ' - ಆರೂರ್ ಲಕ್ಷ್ಮಣ ಶೇಟ್
ವಾಙ್ಮಯ ವಿಶೇಷ - ಕನ್ನಡ ಪ್ರಭ - ಡಾ॥ ಎ. ಎಸ್. ವೇಣುಗೋಪಾಲರಾವ್

70 ಶೂನ್ಯ ಸಂಪಾದನೆಗೊಂದು ಮುನ್ನುಡಿ - ಡಾ॥ ಸಾ. ಶಿ. ಮರುಳಯ್ಯ



Record of a Recognition.
From H. H. Satyadheesa Teertha of Uttaradi Mutt to H. H. Raghavendra Teertha of Kasi Mutt. From the darkest recess of a Regional Office, Kerala State Archives Regional Office, Ernakulam.

श्रीरामचंद्राय नमः



Facsimile of a Museum - piece.
KONKANI in DEVANAGARI.
RAYASAPATRA' from
H. H. Sreemad Sumateendra
Teertha. A. D. 1844.




## ಅನುಬಂಧ–2

ಈ ಸನದು ಶಾ.ಶ. 1463ನೆಯ (ಕ್ರಿ.ಶ. 1542) ಪ್ಲವ ನಾಮ ಸಂವತ್ಸರದ ಮಾಘ ಶುದ್ಧ ಪಂಚಮಿಯಂದು ಕೊಡಲ್ಪಟ್ಟದೆ ಎಂದು ಸಾರುವ ತಾಮ್ರ ಶಾಸನ. ಈ ಶಾಸನ ದೇವನಾಗರಿ ಲಿಪಿಯಲ್ಲಿದ್ದು ಕನ್ನಡ ಭಾಷೆಯಲ್ಲಿದೆ.

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯರಾದಾ
ಪದ ವಾಕ್ಯ ಪ್ರಮಾಣ ಪಾರಾವಾರ ಪಾರಂಗತ ಸರ್ವತಂತ್ರ
ಸ್ವತಂತ್ರರಾದಾ
ಶ್ರೀ ಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯರಾದಾ
ಶ್ರೀ ಮದ್ರಘುಪತಿ ವೇದವ್ಯಾಸ ದೇವರ ದಿವ್ಯ ಶ್ರೀಪಾದ
ಪದ್ಮಾರಾಧಕರಾದಾ

ಶ್ರೀಮಜ್ಜಿತಾಮಿತ್ರವರ್ಯ ತೀರ್ಥ ಶ್ರೀ ಪಾದವಡೇರ ಕರಕಮಲ
ಸಂಜಾತರಾದಾ
ಶ್ರೀಮದ್ರಘುನಂದನ ತೀರ್ಥ ಶ್ರೀಪಾದವಡೇರವರ ಕುಮಾರಕರಾದಾ
ಶ್ರೀಮತ್ಸುರೇಂದ್ರ ತೀರ್ಥ ಶ್ರೀಪಾದ ವಡೇರವರು

ಅಸ್ಮತ್ಪರಮ ಪ್ರೀಯರಾದಾ ಕೊಂಕಣಸ್ಥ ಕಾಶೀ ಮಠದಾ ಯಾದವೇಂದ್ರತೀರ್ಥವಡೇರೀಗೆ ಪ್ಲವ ಸಂವತ್ಸರದಾ ಮಾಘ ಶುದ್ಧ ೫ ಯಲ್ಲು ನಾವು ಬರಸಿಕೊಟ್ಟ ತಾಮ್ರ ಶಾಸನವೇನೆಂದರೆ ನೀವು ನಂಮ ಸಂಸ್ಥಾನವಲ್ಲಿ ಬಂದು ದೇವರ ಸಂದರ್ಶನಾದಿಗಳನ್ನು ಮಾಡಿಕೊಂಡು ನಂಮ ಅನುಗ್ರಹಕ್ಕೆ ಪಾತ್ರರಾದಾ ಕಾರಣಾ ನಿಮಗೆ ವ ನಿಂಮ ಶಿಷ್ಯ ಪರಂಪರೆಯವರಿಗು ಸಹ ದೇಶ ಸಂಚಾರ ಮಾಡುವಾಗ್ಯೆ ವಿಭವಾದಿಗಳು ಧರಿಸಿಕೊಂಡು ಸಂಚಾರ ಮಾಡಬೇಕಾದ ಸುಬಂಧಾ ನಾವು ಉಚಿತವಾಗಿ ಕೊಟ್ಟ ರಾಮದೇವರು ೧. ವ್ಯಾಸಪ್ರತಿಮೆ ೧. ಸಾಲಗ್ರಾಮ ೧. ಪಾಲಕ್ಕಿ ೧. ಶ್ವೇತ ಛತ್ರಾ ೧. ಉಭಯ ಚಾಮರಾ ಉಭಯಶಾಸನಾ ಉಭಯ ದೀವಟಿಗೆ ಧವಳ ಶಂಖಾ ನಗಾರೀ ಪಾಠಕರು ತಾಳಗಳು ಮುಂತಾದ ನಂಮ ಸಂಸ್ಥಾನಕ್ಕೆ ಉಂಟಾದಾ ಅಶೇಷ ಬಿರುದುಗಳು ಧರಿಸಿಕೊಂಡು ನಿಂಮ ವರ್ಗದ ಅಶೇಷ ಬ್ರಾಹ್ಮಣರಿಗೆ ಮಂತ್ರ ಮುದ್ರಾಧಾರಣೆ ಮಾಡುವ ರೀತಿ ಉತ್ತರೋತ್ತರ ನಡಕೊಂಬೋದು. ನಿಮಗೆ ಯೆಲ್ಯಾದರೂ ವಿವಾದ ಬಂದರೆ ನಾವೇ ಪರಿಹರ್ಸಿ ಕೊಟ್ಟೇವು. ಇದೇ ರೀತಿ ನಂಮ ಪರಂಪರೆಯವರು ನಿಮ್ಮ ಪರಂಪರೆಯವರಿಗೆ ನಡೆಸಿಕೊಂಡಾರು. ಇದಕ್ಕೆ ವಿರೋಧವಾಗಿ ನಡಕೊಂಬವರು ಗುರುದ್ರೋಹಿಗಳೇ ಸರಿ. ನಿಮ್ಮ ಸಂಸ್ಥಾನ ನಡಿಸುವ ಸ್ವಾಧಿಮಶಾನಾ ನಂಮ ಶಿಷ್ಯ ಪರಂಪರೆಯವರಿಗೆ ಹೊರ್ತು ಬೇರೆ ಇಲ್ಲಾ. ನಿಂಮಲ್ಲಿ

ಚಾತುರ್ವರ್ಣ್ಯದಲ್ಲಿ ಅಧಿಕರಾದರೆ ಮರ್ಯಾದೆ ರೀತಿ ನಡಕೊಂಡಾರು. ಬಹುಶಾ ಶ್ರೀ ರಘುಪತಿ ವೇದವ್ಯಾಸ ದೇವರ ಪೂಜೆ ಮಾಡಿದವರಾದಕಾರಣಾ ನೀವು ನಂಮವರೆಂದು ನಿರ್ಣಯ ಮಾಡಿದ್ದೇವೆ. ನೀವು ನಂಮಲ್ಲಿ ಸ್ವಾಭಿಮಾನ ಇಟ್ಟು ವ್ಯವಹರಿಸಬೇಕು. ನಿಮಗೆ ನಾವು ಕೊಟ್ಟದ್ದನ್ನು ಅದೆಯೋ ಅದು ತಿರುಗಿ ನಂಮ ಪರಂಪರೆಯವರಿಗೆ ನಿಮಗೆ ಯಾವದೊಂದು ಕೇಳಲಿಕ್ಕೆ ಕಾರಣವಿಲ್ಲದ ಹಾಂಗೆ ಬರಸಿಕೊಟ್ಟ ತಾಮ್ರ ಶಾಸನ.

ದಾನಪಾಲನಯೋರ್ಮಧ್ಯೇ ದಾನಾಚ್ಛ್ರೇಯೋನುಪಾಲನಂ ।
ಕೊಟ್ಟ ಭಾಷೆ ಇಂತಿ ನಾರಾಯಣ ಸ್ಮರಣಾನೀಂ ಯಥಾ ಉಂಟು

ಈ ರಾಯಸ ಪತ್ರವು 1542ರಲ್ಲಿ ಬರೆಯಲ್ಪಟ್ಟಿತು.

ಕೃಪೆ : ಶ್ರೀ ಸಂಸ್ಥಾನ ಕಾಶೀಮಠದ ಸಂಕ್ಷಿಪ್ತ ಪರಿಚಯ.

## ಅನುಬಂಧ–3

26. ಶ್ರೀ ಕಾಶೀ ಮಠ ಸಂಸ್ಥಾನದ ಗುರು ಪರಂಪರೆ :

| | ಸ್ವಾಮಿಗಳು | ಕ್ರಿ.ಶ. | ಶಾಲಿವಾಹನ ಶಕ ಎ.ಡಿ. | ವೃಂದಾವನ | ನದಿ |
|---|---|---|---|---|---|
| 1 | ಯಾದವೇಂದ್ರ ತೀರ್ಥ | 1530 | 1608 | ಭಟ್ಕಳ | ಗೋಪಿನದಿ |
| 2 | ಕೇಶವೇಂದ್ರ ತೀರ್ಥ | 1591 | 1670 | ಬಸ್ರೂರ | ವರಾಹಿ |
| 3 | ಉಪೇಂದ್ರ ತೀರ್ಥ | 1596 | 1674 | ಕಾಶಿ | ಗಂಗೆ |
| 4 | ಯಾದವೇಂದ್ರ ತೀರ್ಥ II | 1633 | 1711 | ಹೆಮ್ಮಾಡಿ | ಚಕ್ರಾಸಿ |
| 5 | ರಾಘವೇಂದ್ರ ತೀರ್ಥ | 1725 | 1646 | ಕಾಶಿ | ಗಂಗಾ |
| 6 | ದೇವೇಂದ್ರ ತೀರ್ಥ | ಸಮಯ ತಿಳಿದಿಲ್ಲ | | | ನೇತ್ರಾವತಿ |
| 7 | ಮಾಧವೇಂದ್ರ ತೀರ್ಥ | 1775 | 1695 | ಮುಂಬಯಿ | ಬನಗಂಗಾ |
| 8 | ಜ್ಞಾನೇಂದ್ರ ತೀರ್ಥ | ಸಮಯ ತಿಳಿದಿಲ್ಲ | | ನಾಸಿಕ | ಗೋದಾವರಿ |
| 9 | ಯಾದವೇಂದ್ರ ತೀರ್ಥ III | 1773 | — | ಹೊನ್ನಾವರ | ಶರಾವತಿ |

| | ಸ್ವಾಮಿಗಳು | ಕ್ರಿ.ಶ. ಎ.ಡಿ. | ಶಾಲಿವಾಹನ ಶಕ | ವೃಂದಾವನ | ನದಿ |
|---|---|---|---|---|---|
| 10 | ಉಪೇಂದ್ರ ತೀರ್ಥ | 1791 | 1713 | ಕಾಶಿ | ಗಂಗಾ |
| 11 | ರಾಜೇಂದ್ರ ತೀರ್ಥ | 1799 | 1721 | ತರವೂರು | ತಿರುಮಲ ದೇವಸ್ವಂ |
| 12 | ಸುಧೀಂದ್ರ ತೀರ್ಥ I | 1831 | 1751 | ಆಲಪ್ಪಿ | ವೆಂಕಟಾಚಲಪತಿ ದೇವಸ್ವಂ |
| 13 | ವಿಷ್ಣು ತೀರ್ಥ | ಸಮಯ ತಿಳಿದಿಲ್ಲ | | ಜಲಸಮಾಧಿ, ಕಾಶಿ | ಗಂಗಾ |
| 14 | ವಿಭುದೇಂದ್ರ ತೀರ್ಥ | 1834 | 1755 | ಮಂಜೇಶ್ವರ | ಶೇಷತೀರ್ಥ |
| 15 | ಸುಮತೀಂದ್ರ ತೀರ್ಥ | 1852 | 1773 | ಆಲಪ್ಪಿ | ವೆಂಕಟಾಚಲಪತಿ ದೇವಸ್ವಂ |
| 16 | ವಸುದೇಂದ್ರ ತೀರ್ಥ | 1859 | 1781 | ಮಂಜೇಶ್ವರ | ಶೇಷತೀರ್ಥ |
| 17 | ವಿಭುದೇಂದ್ರ ತೀರ್ಥ | 1886 | 1808 | ಬಸ್ರೂರ | ವರಾಹಿನದಿ |
| 18 | ವರದೇಂದ್ರ ತೀರ್ಥ | 1914 | 1836 | ಮುಂಬಯಿ | ಬನಗಂಗಾ |
| 19 | ಸುಕೃತೀಂದ್ರ ತೀರ್ಥ | 1949 | 1871 | ಕೊಚ್ಚಿ | ತಿರುಮಲ ದೇವಸ್ವಂ |
| 20 | ಸುಧೀಂದ್ರ ತೀರ್ಥ II | 1944 ಯತಿವರ್ಯರಾದ ವರುಷ. | | | |

ಕೃತಜ್ಞತೆ : ಗೌಡ ಸಾರಸ್ವತ ಸೇವಾ ಸಂಘ, ಎರ್ನಾಕುಲಂ

Genesis of Sri Kashi Matt Samsthan
By Indrakanth Shenoy

## ಅನುಬಂಧ–4

The Govt. of India in an extra ordinary gazette paid tribute to pai's Services as follows :

'The Govt. of India place on record their deep appreciation of the valuable services rendered by Sri T. Ananth Pai. The first honorary Chairman of Food Corporation of India who is relinquishing charge of his office on 3rd January 1966. Mr. Pai took over as Chairman of the Corporation from its inception and Served the Corporation with distinction and dedication during his first year.'

[The Gazette of India Extra ordinary New-Delhi Jan. 3, 1966]

— 0 —

# ಸಹಾಯಕ ಗ್ರಂಥಗಳು


1. ಮಹಾಭಾರತ
2. ಸ್ಕಾಂದ ಪುರಾಣ
3. ಮಹಾಭಾರತ–ಶಲ್ಯಪರ್ವ
4. ಸೂತಸಂಹಿತೆ
5. ಭಾರತ ಸಿಂಧು ರಶ್ಮಿ–ವಿ. ಕೃ. ಗೋಕಾಕ್
6. ಕಾವ್ಯಾದರ್ಶ–ದಂಡಿ
7. ಭಾರತೀಯ ಕಾವ್ಯಮೀಮಾಂಸೆ–ಕಾಶ್ಮೀರದ ಕೊಡುಗೆ
8. ಸಾರಸ್ವತ ವಣಾತಾ–ಗೋವಿಂದ ಪೈ
9. ನಮ್ಮ ಹಿರಿಯರನ್ನು ಕುರಿತು–ಗೋವಿಂದ ಪೈ
10. The History of Dakshinatya Saraswats – V.N. Kudva
11. Saraswath Colony in deccan – Mangesh Dubashi
12. ಶ್ರೀ ಸಂಸ್ಥಾನ ಕಾಶಿಮಠದ ಸಂಕ್ಷಿಪ್ತ ಪರಿಚಯ – ವಿ. ಎ. ಶೆಣೈ
13. Cochin Tribes and Castes – Anantha Krishna Iyer (1912)
14. Saraswath Families–S.S. Talmaki
15. ಮಂಜುಳ ಕ್ಷೇತ್ರ ಮಹಾತ್ಮೆ–ಗೋವಿಂದ ಪೈ
16. ಸಾರಸ್ವತ ಬ್ರಾಹ್ಮಣ ಸಮಗ್ರ ಇತಿಹಾಸ–ಭದ್ರಗಿರಿ ಅಚ್ಯುತ ದಾಸರು
17. ವಿಭೂತಿ ಪುರುಷರು–ಡಾ॥ ಸಾ. ಶಿ. ಮರುಳಯ್ಯ
18. History of Sri Kashi Matt Samsthan – V. A. Shenoy
19. ನಮನ–ಕಸ್ತೂರಿ ಸಿ. ಪೈ.
20. ಬೃಹತ್ ಸಂಹಿತೆ–ವರಾಹಮಿಹಿರ
21. ದಶಕುಮಾರ ಚರಿತ್ರೆ–ದಂಡಿ
22. Konkani Proverbs, Riddles Lullabies and Nursery Songs – S.S. Talmaki
23. Konkani Similies and idioms. – S.S. Talmaki
24. Linguistic Survey of India – G. A. Grierson
25. The formation of Konkani – S.M. Katre

26. The Konkan and Konkani Languge
– V. P. Chavan
27. ಕನ್ನಡ ಭಾಷಾ ಚರಿತ್ರೆ–ಡಾ॥ ಸಾ. ಶಿ. ಮರುಳಯ್ಯ
28. ಕೆಳದಿಯ ಅರಸರು ಮತ್ತು ಕನ್ನಡ ಸಾಹಿತ್ಯ–ಡಾ॥ ಸಾ.ಶಿ. ಮರುಳಯ್ಯ
29. ಗೀತಾರ್ಥ ಚಿಂತನೆ–ಅಚ್ಯುತ ದಾಸರು
30. ಹರಿಕಥಾ ಪೂರ್ವರಂಗ–ಅಚ್ಯುತ ದಾಸರು
31. Pai's of Manipal–Seldon Menefee
32. The innovative Banker–M. V. Kamath
33. Dr. T.M.A. Pai life and achivements
34. Behind the by line–M. V. Kamath
35. What Journalism is all about–M.K. Rustumji,
M.V. Kamath
36. ಪುನರಪಿ ಜನನಂ–ಎಂ. ವಿ. ಕಾಮತ್
37. ಕವಿ ಗೋವಿಂದ ಪೈ–ಜಿ. ಪಿ. ರಾಜರತ್ನಂ
38. ಗೋವಿಂದ ಪೈಗಳ ಕಾವ್ಯ–ವಿ. ಎಂ. ಇನಾಂದಾರ್
39. ಸಾಲು ದೀಪಗಳು–ಕನ್ನಡ ಸಾಹಿತ್ಯ ಅಕಾಡೆಮಿ. ಬೆಂಗಳೂರು
40. Govinda Pai–V. M. Inamdar
41. ಕನ್ನಡದ ಮೊರೆ–ಪ್ರಬಂಧ ಸಂಕಲನ
42. ದೀವಿಗೆ–ಲೇಖನಗಳ ಸಂಗ್ರಹ
43. ಶೂನ್ಯ ಸಂಪಾದನೆಗೊಂದು ಮುನ್ನುಡಿ -ಡಾ॥ ಸಾ. ಶಿ. ಮರುಳಯ್ಯ

# ಒಪ್ಪೋಲೆ

| ಪು.ಸಂ. | ಸಾಲು | ತಪ್ಪು | ಒಪ್ಪು |
|---|---|---|---|
| 11 | 6 | ಬ್ರಾರ್ಥಿಸು | ಪ್ರಾರ್ಥಿಸು |
| 11 | 7 | ಪಾಗದ | ಭಾಗದ |
| 13 | 20 | ಸಾರಸ್ವರು | ಸಾರಸ್ವತರು |
| 21 | 10 | ಆದ್ವೈತ | ಅದ್ವೈತ |
| 26 | 20 | ನಿರ್ದಿಷ್ಟ | ನಿರ್ವಿಘ್ನ |
| 38 | 15 | ಅಡಿಟಿಪ್ಪಣಿ ನಂ. 26 | |
| 44 | 12 | ಅಕ್ಕ | ಅಕ್ಯ |
| 48 | 3 | ವಿಭೂತಿ | ಭೂತಿ |
| 49 | 16 | ಪಿಲ್ಲೆಪಾರ್ಲೆ | ವಿಲ್ಲೆಪಾರ್ಲೆ |
| 51 | 5 | ರೂಪಲ್ಲಿ | ರೂಪದಲ್ಲಿ |
| 52 | 20 | ಆವುಗಳಲ್ಲಿ | ಅವುಗಳಲ್ಲಿ |
| 59 | 5 | bclong | belong |
| 59 | 12 | elearly | clearly |
| 59 | 13 | ಅಡಿಟಿಪ್ಪಣಿ ನಂ. 40 | |
| 59 | 15 | ಡಾ॥ ಪಿ. ಎನ್. ಕುಡ್ವ | ವಿ. ಎನ್. ಕುಡ್ವ. |
| 59 | 21 | ಮತಾರಿ | ಮರಾರಿ |
| 60 | 28 | ಅಡಿಟಿಪ್ಪಣಿ ನಂ. 43 | |
| 63 | 28 | bi-litteral | Bi-lateral |
| 81 | 8 | ಇವರಿಗೆ | ಇವರ |
| 81 | 16 | ಸಂದರ್ಥ | ಸಂದರ್ಭ |
| 83 | 18 | ಕಸಸು | ಕನಸು |
| 91 | 29 | ಪ್ರೈಸ್ ಓಫ್ ಮಣಿಪಾಲ್ | ಪ್ರೈಸ್ ಓಪ್ ಮಣಿಪಾಲ |
| 94 | 9 | ಅರಕೆಯನ್ನು | ಹರಕೆಯನ್ನು |
| 94 | 19 | ವೈದ್ಯಕೀಯು | ವೈದ್ಯಕೀಯು |
| 103 | 16 | ವಾಸ್ತವ | ವಾಸ್ತವ್ಯ |
| 103 | 17 | ಟೀರ್ಸ್ | ಟೀಕ್ಸ್ |
| 159 | 7 | ಊಹಿಸಲಸಗಳ | ಊಹಿಸಲಸದಳ |
| 165 | 16 | ಐಷಾರಾಮುಃ | ಐಷಾರಾಮು |
| 166 | 22 | ಅರ್ಹಂತ್ರ್ಯ | ಅರ್ಹಂತನಾಗಿ |
| 190 | 4 | ಪೋಷಕರ | ಪೋಷಕರು |



ಬರಹಗಾರರ ಬಗ್ಗೆ:

ಪ್ರತಿಭೆಗೆ ಪಕ್ಷಪಾತ ಗೊತ್ತಿಲ್ಲ; ತಾರತಮ್ಯ ತಿಳಿದಿಲ್ಲ. ಗಂಡಾಗಲಿ ಹೆಣ್ಣಾಗಲಿ ಅದರ ದೃಷ್ಟಿಯಲ್ಲಿ ಎಲ್ಲರೂ ಒಂದೆ. ಅಂತಹ ಪ್ರತಿಭೆಯ ಕೃಪೆಗೆ ಪಾತ್ರರಾದವರು ಡಾ|| ಶಾಲಿನಿ ಪ್ರಭು. ಅವರ ಪ್ರಾತಿಭ ಜ್ಯೋತಿಯ ಜ್ವಲಂತ ಸಾಕ್ಷಿ ಈ ಕೃತಿ. ಇದನ್ನು ಸಿದ್ಧಪಡಿಸುವಲ್ಲಿ ಅವರು ಕೈಗೊಂಡ ಶ್ರಮ ಶ್ಲಾಘನೀಯ, ಕ್ಷೇತ್ರ ಕಾರ್ಯ ನಿಜಕ್ಕೂ ಒಂದು ಸಾಹಸಯಾತ್ರೆ! ಮಂಗಳೂರು, ಶಿವಮೊಗ್ಗ, ಉಡುಪಿ, ಮಣಿಪಾಲ, ಕಾರ್ಕಳ, ಮುಂಬಯಿ, ಕೇರಳ, ಎಂದೆಲ್ಲ ಹಲವು ಹತ್ತೆಂಟು ಕಡೆಗಳಲ್ಲಿ ಅಡ್ಡಾಡಿ ವಿಷಯ ಸಂಗ್ರಹಿಸಿ ಅರ್ಥಪೂರ್ಣ ಆದರ್ಶರೂಪೀ ಆಚಾರ್ಯಕೃತಿಯನ್ನು ಕನ್ನಡಕ್ಕೆ ಕಾಣಿಕೆಯಾಗಿ ಕೊಟ್ಟಿದ್ದಾರೆ.

ಇವರೆಷ್ಟು ಪ್ರತಿಭಾಸಂಪನ್ನರೋ ಅಷ್ಟೇ ವಿಚಾರವಾದಿಗಳು; ಪ್ರಾಮಾಣಿಕ ಸಂಶೋಧಕರೂ ಕೂಡ. ಅವೆಲ್ಲವುಗಳ 'ಕಲಂ' ಇಲ್ಲಿದೆ. ಓದಿದಂತೆಲ್ಲ ಖುಷಿ ಕೊಡುವ ಸುಭಗ ಶೈಲಿ ಈ ಕೃತಿಯ ಮತ್ತೊಂದು ಮಗ್ಗುಲು.

ಡಾ|| ಶಾಲಿನಿ ವಿವೇಕ ಪ್ರಭು ನನ್ನ ವಿದ್ಯಾರ್ಥಿನಿ ಎಂದು ಹೇಳಿಕೊಳ್ಳುವಲ್ಲಿ ನನಗೆ ಹೆಮ್ಮೆ ಇದೆ. ಒಳ್ಳೆಯ ಶಿಷ್ಯರನ್ನು ಪಡೆಯುವುದು ಗುರುವಾದವನ ಭಾಗ್ಯ ವಿಶೇಷ. ಅಲ್ಲವೇ?

ಡಾ|| ಸಾ.ಶಿ. ಮರುಳಯ್ಯ